# ಮುನ್ನುಡಿ

ಗೆಳೆಯ ಕಾಮೇಶರೂ, ಚಿಂತಾಮಣಿಯವರೂ ಈ ಮಾಲೆಗೆ ಥಾಮಸ್ ಹಾರ್ಡಿಯವರ 'ಟೆಸ್' ಎಂಬ ನಾವೆಲ್ಲನ್ನು ಕನ್ನಡಿಸಿಕೊಡು ಎಂದು ನನ್ನನ್ನು ಕೋರಿದರು: ಗೆ. ಕಾಮೇಶರು ಅದರ ಹೆಸರು 'ಮಲ್ಲಿ' ಎಂದಿರಲಿ ಎಂದರು. ಟೆಸ್ ನಮ್ಮ ಸಮಾಜಕ್ಕೆ ಹಿಡಿಸುವುದಿಲ್ಲ ಎಂದು, ಬೇರೊಬ್ಬ ಮಲ್ಲಿ ಇಲ್ಲಿ ಅವತರಿಸಿದ್ದಾಳೆ. ಈ ಮಲ್ಲಿ, ಆ ಟೆಸ್‌ಗಿಂತ ಯಾವ ರೀತಿಯಲ್ಲೂ ಕಡಿಮೆಯಿಲ್ಲ.

ಇದು ಸುಮಾರು ೧೯೦೦ರಿಂದ ೧೯೩೦ರ ವರೆಗಿನ ಮೂವತ್ತು ವರ್ಷಗಳನ್ನು ಕುರಿತ ಕಥೆ. ಬ್ರಿಟಿಷರನ್ನು ದೇವತೆಗಳು ಎನ್ನುತ್ತಿದ್ದ ಕಾಲದಿಂದ ಆರಂಭಿಸಿ ಬ್ರಿಟಿಷರು ನಮ್ಮ ಶತ್ರುಗಳು ಎನ್ನುವ ವರೆಗಿನ ಕಥೆ. ಆದರೆ ಡಾಕ್ಯುಮೆಂಟರಿಯಲ್ಲ; ಕ್ರಾನಿಕಲ್ ಅಲ್ಲ; ಇದು ನಾವೆಲ್ಲು. ಮಲ್ಲಿ—ನಾಯಕರ ಕಥೆ. ನಾನಾಮುಖದಲ್ಲಿ ನಾನಾ ಘಟ್ಟದಲ್ಲಿ ನಮ್ಮ ಸಿದ್ಧಾಂತ ರಾದ್ಧಾಂತ ವೇದಾಂತಗಳನ್ನೊಳಗೊಂಡು ಬಂದಿದೆ.

ಇದು ಉತ್ತಮವಾದ ಕಾದಂಬರಿಯೆಂದೇ ಓದುಗರ ಮುಂದಿಟ್ಟಿದ್ದೇನೆ. ಭಿನ್ನಪ್ರಸ್ಥಾನದಿಂದ ಭಿನ್ನೈಸಿದವರು ತಮ್ಮ ಭಿನ್ನಾಭಿಪ್ರಾಯಕ್ಕೆ ಕಾರಣವೇನು ಎಂಬುದನ್ನು ಗಮನಿಸಿದರೆ, ಅಲ್ಲಿಗೆ ಪ್ರಯಾಣ, ಮತ್ತೊಂದು ಮಗ್ಘುಲು ಮುಟ್ಟೀತು. ಅದಿಲ್ಲದೆ ತಮ್ಮ ಮೂಗಿನ ನೇರಕ್ಕೆ ಬರಲಿಲ್ಲವೆಂದು ಆಕ್ಷೇಪಿಸುವವರು ನನ್ನ ಪ್ರತಿಭಟನೆಯ ಭೀತಿಯಿಲ್ಲದೆ ಬೇಕಾದ್ದು ಹೇಳಬಹುದು.

ಇದನ್ನು ಓದಿದ ಮಿತ್ರರೊಬ್ಬರು "ತಿಳಿದವರಿಗೆ ತಾರೀಫ್" ಎಂದಿದ್ದಾರೆ. ನನ್ನ ಆಸೆ ಎಲ್ಲರಿಗೂ ತಾರೀಫ್ ಆಗಲಿ ಎಂದು.

ಈ ಕಥೆಯಲ್ಲಿ ಅನೇಕ ಜೀವಂತ ಮಹನೀಯರ ಉಲ್ಲೇಖಗಳಿವೆ. ಈ ಕಥೆಗೆ ಬೇಕಾದಷ್ಟು ಮಾತ್ರ ತೆಗೆದುಕೊಂಡಿರುವುದರಿಂದ ಅವರ ಮಹತ್ವಕ್ಕೆ ಲೋಪ ಬಂದಿಲ್ಲ ಎಂದುಕೊಂಡಿದ್ದೇನೆ. ಒಂದು ಪ್ರಾಣಿ ಕುಡಿಯುವಷ್ಟು ಕುಡಿದಷ್ಟೇ ಅಲ್ಲ. ನದಿಯಲ್ಲಿ ನೀರಿರುವುದು. ಅದರಿಂದ ಆ ಮಹನೀಯರು ನನ್ನ ಮೇಲೆ ಕೋಪಗೊಳ್ಳದಿರಲಿ.

ಇದನ್ನು ತಮ್ಮ ಮಾಲೆಯಲ್ಲಿ ಸೇರಿಸಿಕೊಂಡ ಗೆಳೆಯರಿಬ್ಬರಿಗೂ ವಂದನೆಗಳು.

ಬೆಂಗಳೂರು
1-10-53

ದೇವುಡು

# ೧

ಮಜ್ಜಿಗೆ ಹಳ್ಳಿಯಲ್ಲಿ ಅಶ್ವತ್ಥ ಕಟ್ಟೆಯ ಆಚೆಯ ಮನೆಯೇ ಮಲ್ಲಣ್ಣನದು. ಅವನು ಏಕನಾದ ಹಿಡಿದು ಊರೂರು ಅಲೆಯುತ್ತಿದ್ದವನು. ಒಂದು ಸಲ ಆವೂರಿಗೂ ಬಂದ. ಆಗ ಪಟೇಲ್ ಹಿರಿಯನಾಯಕರು ಬದುಕಿದ್ದರು. ಅವನ ತಂದಾನಾ ಪದಗಳಿಗೆ ಮನಸೋತು "ಇಲ್ಲಿ ಇದ್ದು ಬಿಡೋ ಮಗ" ಎಂದರು. ಮಲ್ಲಣ್ಣ "ಅಪ್ಪಣೆ" ಎಂದ. ಗೌಡರು ಊರಬೇಲಿ ಮಗ್ಗುಲಲ್ಲಿ ತಮ್ಮ ಹುಲ್ಲುಮೆದೆ ಇದ್ದ ಹಿತ್ತಲು ಅವನಿಗೆ ಕೊಟ್ಟರು. "ಆದವರು ಆ ಬಡಪಾಯಿಗೆ ಅಷ್ಟು ಸಾಯಾ ಮಾಡಿರಯ್ಯ" ಎಂದರು. ಎರಡು ಮೂರು ದಿನದಲ್ಲಿ ಒಂದು ಆರು ಅಂಕಣದ ಮನೆಯಾಯಿತು. ಮಲ್ಲಣ್ಣ ಹೋಗಿ ಹೆಂಡತೀನ ಕರೆದುಕೊಂಡು ಬಂದು ಅಲ್ಲಿ ಸಂಸಾರ ಹೂಡಿದ.

ಮಲ್ಲಣ್ಣನ ಹೆಂಡತಿ ಕೆಂಪಿ. ಹೆಸರು ಕೆಂಪಿಯಾದರೂ ಬಣ್ಣದಲ್ಲಿ ಮಾತ್ರ ಕಾಳಿ. ನೋಡಿದೋರೆಲ್ಲ 'ಇವಳನ್ನ ಕಾಳಿ ಅಂತ ಕರಿಯೋದು ಬಿಟ್ಟು ಕೆಂಪಿ ಅಂತ ಯಾಕೆ ಕರೆದರೋ' ಎಂದುಕೊಳ್ಳುವರು. ಆದರೂ ಕೆಂಪಿ ಒಳ್ಳೆ ಮೋಪಾದ ಹೆಂಗಸು. ಕಾವೇರೀ ತೀರದ ಹೆಣ್ಣುಗಳನ್ನು ನೋಡಿದ್ದವರಿಗೇ ಆ ಮೋಪು ಅನ್ನುವುದರ ಅರ್ಥವಾಗುವುದು. ಎದೆ ಅಗಲ. ಅಗಲ ಮಾತ್ರವಲ್ಲ! ಆ ಉಬ್ಬು ಏನೋ ಮನೋಮೋಹಕ. ಬೇಡ ಅಂದವರ ಕಣ್ಣನ್ನೂ ಬಿಡದೆ ಒಂದು ಗಳಿಗೆ ಹಿಡಿದಿದ್ದು ಗರ್ರನೆ ಒಂದು ಸುತ್ತು ಹೊಡೆಸಿಬಿಡುವ ಎದೆಯುಬ್ಬು. ಜೊತೆಗೆ ಅವಳು

ತಿರುಗಿದರೆ, ಒಂದು ಭಾರಿ ಎತ್ತು ತಿರುಗಿದಂತಾಗುವುದು. ಅವಳ ನಡು ಎಷ್ಟು ಸಣ್ಣಗಿತ್ತೋ ಆ ನಿತಂಬಗಳೂ ಊರೂಸ್ತಂಭಗಳೂ ಅಷ್ಟು ತುಂಬು ! ಅಷ್ಟು ಭದ್ರ.

ಮಲ್ಲಣ್ಣ ಏಕಾಂತದಲ್ಲಿ ಎಷ್ಟೋ ದಿನ "ಬಾಳೇಕಂಬ ಕಡಿದಿಟ್ಟು, ಕುಂಬಳಕಾಯಿ ಹೇರಿಟ್ಟು ಬಣ್ಣ ಸುತ್ತಿಬಿಟ್ಟರೊ ಹೆಣ್ಣು, ನನ್ನ ಈ ಕಣ್ಣ ಮಣಿಯನ್ನ" ಎಂದು ಹಾಡಿ ಹಾಡಿ ಅವಳನ್ನು ರೇಗಿಸುವನು.

ಅವಳು "ಅಂಯ್ ! ಬುಡೀ ಅಂದರೆ ನಿಮ್ಮ ಈ ಹುಡು ಗಾಟಕೇಯ !" ಎನ್ನುವಳು.

ಮಲ್ಲಣ್ಣ ಕೀಟಲೆಮಾಡಿ "ಹಾಗಾದರೆ ಬೂದಿ ಬೊಳಕೊಂಡು ಸನ್ಯಾಸಿಯಾಗಲಾ ಹೇಳು" ಎನ್ನುವನು.

ಅವಳು ಘಳಾರನೆ ನಕ್ಕು "ಈ ಮುಕ್ಕ ಸನ್ಯಾಸಿಯಾದರೆ ಬಟ್ಟೆಗೆ ಬಣ್ಣ ಕೇಡು" ಎನ್ನುವಳು.

ಅವನು "ಏನು ಹಂಗಂತೀ ? ನನಗೇನು ವೇದಾಂತದ ಹಾಡು ಬರೋಕಿಲ್ಲವಾ ? ಕೇಳು:

ತಂದನ್ನಾ ತಾನ ತಂದನ್ನಾ. ಚೆನ್ನಾಗಿ ಹೇಳುವೆ ಕೇಳಲೆ ಹೆಣ್ಣೇ ||
ಬೊಮ್ಮವೆಂಬುದು ಬರಿಯ ಬಯಲು, ಅದರಲ್ಲಿ ಒಮ್ಮೆ,
ಮಿಂಚಿತು ಮಾಯೆಯೆಂಬುವ ಚಲುವು ||
ಚಲುವಿನ ಮರಿಯಾಗಿ ಪೊಳೆಯಿತು ಬರಿಯ ಭ್ರಾಂತಿ ||
ಭ್ರಾಂತಿಗೆ ಸೋತು ಬಯಲಿನ ಬೊಮ್ಮವು ಮಣೆಯಾಯ್ತು ||
ಮಣೆಗೆ ಮುಸುಕಿಟ್ಟ ಮಾಯೇ
ಕರೆಯಿತು ಆದ ಜೀವವೆಂದು ||
ಜೀವಕೆ ಬಂದಿತು ಸಂಸಾರ ನೋಡಂದು ||—
ತಂದನ್ನಾ ತಾನ ತಂದನ್ನಾ—-

"ನೋಡಿದೆಯಾ, ನಿಂಗೇನು ಗೊತ್ತು ? ಕೇಳು ಹೇಳುತೀನಿ. ಒಂದು ಸಲ ಹಂಗೇ ಸಂಚಾರ ಹೋಗಿದ್ದಾಗ ಸಿಂಗೇರಿಗೆ ಹೋದೆ. ಅಲ್ಲಿ ಆ ತಾಯೀನೇನೋ ಕಂಡು ನಮುಸ್ಕಾರ ಹಾಕಿದೆ. ಗುರುಗಳ ನೋಡದೆ ಇರೋದಾ ಅನ್ನಿಸಿತು. ನನ್ನ ಕರಕೊಂಡು ಹೋಗಿ ಅವರ

ಮುಂದೆ ನಿಲ್ಲಿಸೋರಾದರೂ ಯಾರು? ಅದಕ್ಕಾಗಿ ಒಂದು ಸಂದು ಮಾಡಿದೆ. ಅವರು ಅಮ್ಮನೋರ ಗುಡೀಗೆ ಬರೋ ಹೊತ್ತು ಇಚಾರಿಸಿ ಕೊಂಡೆ, ಆ ಒತ್ತಿಗೆ ಹೊಳೇಲಿ ಮಿಂದು ಮಡಿ ಮಾಡಿಕೊಂಡು ಈಭೂತಿ ಚೆನ್ನಾಗಿ ಧರಿಸಿಕೊಂಡು ರುದ್ರಾಕ್ಷಿ ಮಾಲೆ ಇಳೀ ಬಿಟ್ಟು ಏಕನಾದ ತಕೊಂಡು ಭಕ್ತಿಯಾಗಿ ವೇದಾಂತದ ಹಾಡೇ ನುಡೀಸ್ತಾ ನಿಂತು ಬಿಟ್ಟೆ. ಕಣ್ಣುಮುಚ್ಚಿ ಹೊಡೀತಿದ್ದೀನಿ. ಆ ಸಿಪಾಯಯ್ಯ ಬಂದು ಹಿಡಿದು ಅಲ್ಲಾಡಿಸಿ 'ಅಪ್ಪಣೆ ಆಗ್ತದೆ ಬಾರೋ' ಅಂದ. ಓಡಿ ಹೋದೆ ಅವನ ಜೋತೇಲೆ. ಅಲ್ಲಿ ಯಾರು ಅಂತೀಯ – ಗುರುಗಳು. ಅಲಲಾ! ಏನಾಯ್ತು ಅಂತೀಯೇ, ಕೆಂಪಿ, ನಂಗೆ ಎಚ್ಚರ ತಪ್ಪೋ ಹಂಗಾಗೋದಾ! ಮರು ಮಾತಾಡದೆ ಅಡ್ಡ ಬಿದ್ದುಬಿಟ್ಟೆ. ಅವರು ಎಲ್ಲಾ ಕೇಳಿದರು: ಯಾರು? ಎಲ್ಲಿಯವನು? ಈ ಪದಗಳೆಲ್ಲ ಎಲ್ಲಿ ಕಲಿತೆ? ಅಂತ, ಎಲ್ಲಾ ಹೇಳಿದೆ ಅನ್ನು. ಆಮೇಲೆ ಅಲ್ಲಿ ಅವರನ್ನು ಕರೆದು 'ಇವನಿರೋಷ್ಟು ದಿವಸ ಇವನಿಗೆ ಊಟ ಹಾಕಿಸಿ' ಅಂತ ಹೇಳಿ, 'ನೀನಿರೋಷ್ಟು ದಿನವೂ ಈ ಹೊತ್ತಿಗೆ ಇಲ್ಲಿಗೆ ಬಂದು ಅಮ್ಮನವರಿಗೆ ನಿನ್ನ ಹಾಡು ಒಪ್ಪಿಸು' ಅಂದರು. ಅಲ್ಲಿ ಹದಿನೈದು ದಿನ ಇದ್ದು ಬಂದ ಗಂಡು ಕಣಾ ನಾನು. ನನ್ನ ವೇದಾಂತದ ಹಾಡು ಅಂದರೆ ಬಿಟ್ಟೆ ಅಲ್ಲಾ ಕಣ್ಲೇ! ಗುರುಗಳನ, ಸಿಂಗೇರಿ ಗುರುಗಳನ ಮೆಚ್ಚಿಸಿ ಬಿಟ್ಟವ್ನಿ – ಅಂಥಾದ್ದರಲ್ಲಿ ನಾನು ಸಂನ್ಯಾಸ ತಕೊಂಡರೆ ಬಟ್ಟೆಗೆ ಬಣ್ಣ ಕೇಡಂತೆ!" ಅನ್ನುವನು.

ಕೆಂಪಿಯೂ "ಹಂಗಾದರೆ ನನ್ನ ಕಾವೇರಮ್ಮನ ಪಾಲು ಮಾಡಿ ಬುಡತಿ ಅನ್ನು?" ಎನ್ನುವಳು. ಜೊತೆಯಲ್ಲಿಯೇ ಮಲ್ಲಣ್ಣನು "ಉಂಟಾ! ಒಲಿದು ಬಂದ ಹೆಣ್ಣು ನಿನ್ನ ಕಾಡುಪಾಲು ಮಾಡಿದರೆ ಮನೆ ದೇವರು ಒಪ್ಪೀತಾ! ಅದೇ ನನಗೆ ಬಂದಿರೋ ಸಂಕಟಾ! ಮಾಯೆ ನಿನ್ನ ರೂಪ್ನಲ್ಲಿ ಬಂದು ಹಿಡಿದು ಬಿಟ್ಟವಳೆ. ಬಲೆ ಭದ್ರ ವಾಗದೆ. ಬಿಡಿಸೋಕೂ ಆಗೋಲ್ಲ. ಹೋಗಲಿ, ಬುಡು, ನಿನ್ನ ಮಣ್ಣು ಮಾಡಿ, ಆ ಗುಡ್ಡೇಮೇಲೆ ಕೂತ್ಕೊಂಡು, ಅಲ್ಲಿ ಏಕನಾದ ಹಿಡಿದು ಒಂದು ಹಾಡು ಹೇಳಿ 'ಶಿವಾ, ಈ ಹೆಣ್ಣು ಈ ತಾಯಿ ಮಡಲಲ್ಲಿ ಇಟ್ಟು

ಕೊಂಡ ಹಾಗೇ ನೀನು ನಿನ್ನ ಪರಿವಾರಕ್ಕೆ ಸೇರಿಸಿಕೊ, ಧರ್ಮವಾಗಿದ್ದ ತಾಯಿ ಮಗಳು ಇವಳು' ಅಂದು ಒಂದು ಕಣ್ಣೀರು ಹನಿ ಅಲ್ಲಿ ಹಾಕಿ, ಮುಂದಕ್ಕೆ ಹೊರಟೋದು" ಅನ್ನುವನು. ಅವಳು "ಅಂಯ್! ನನ್ನ ಚಿನ್ನ, ಈ ಬೊಡ್ಡೀ ಮಗನಿಗೆ ಎಷ್ಟು ಕರುಳೋ!" ಎಂದು ಕೆನ್ನೆಸವರಿ ತಲೆಯ ಪಕ್ಕದಲ್ಲಿ ನೆಟಿಕೆ ಮುರಿಯುವಳು.

ಈ ನಾಟಕ, ನೋಡುವವರಿಲ್ಲದಿದ್ದರೂ ವಾರಕ್ಕೆ ಮೂರು ಸಲವಾದರೂ ನಡೆಯುವುದು. ನೂರಾರು ಸಲ ನಡೆದಿದ್ದರೂ ಹಳೇದಾಗಿರಲಿಲ್ಲ. ಅವರಿಗೆ ಬೇಸರವಾಗಿರಲಿಲ್ಲ ಇಂತಹ ನಾಟಕ ಎಲ್ಲಿ ನಡೆದರೂ ಎಷ್ಟು ಸಲ ನಡೆದರೂ ಆಡುವವರಿಗೆ ಬೇಸರವಾಗುವುದೇನು? ಎಂದಿಗೂ ಇಲ್ಲ. ಅದೇ ಅದರ ಶೋಕು. ಅದೇ ಅದರಲ್ಲಿರುವ ನವ್ಯೋನವತ್ವ.

ಇವೊತ್ತು ಮಲ್ಲಣ್ಣ ಹೋಗಿ ಸುತ್ತಿಕೊಂಡು ಬಂದಿದ್ದ. ಸುಮಾರು ಐದಾರು ಸೇರು ಜೋಳ ಬಂದಿತ್ತು. ಆದರೂ ಅದೇಕೋ ಮಂಕಾಗಿದ್ದ. ಮಲ್ಲಣ್ಣ ಏಕನಾದ ಗೂಟಕ್ಕಿಟ್ಟು ರುಮಾಲು ತೆಗೆದು ಅದಕ್ಕೆ ಮುಡಿಸಿದಹಾಗಿಟ್ಟು ಕಸೆ ಅಂಗರೇಕು ಬಿಚ್ಚುತ್ತಿದ್ದ. ಕೆಂಪಿ ಬಂದು ಮೊಕ ನೋಡಿದಳು. ಒಳಕ್ಕೆ ಹೋಗಿ ಒಂದು ರಾಗಿ ರೊಟ್ಟಿ, ಅಷ್ಟು ಈರುಳ್ಳಿ ಚಟ್ನಿ, ಒಂದುಲೋಟಾದಲ್ಲಿ ನೀರು ಮಜ್ಜಿಗೆ ತಂದು ಇಟ್ಟಳು. ಅದನ್ನೂ ಅವಳ ಮೊಕವನ್ನೂ ನೋಡಿ, "ಇದೇನಾ! ನಾವೇನು ಕೆಂಪು ಜನಾ ಕೆಟ್ಟೋದೆವಾ! ಕೈಕಾಲು ತೋಳೀವೆ ತಿನ್ನೋದಾ!" ಅಂದ.

"ಸರಿ, ಮೊಕ ನೋಡಿ! ಸುಟ್ಟ ಬದನೆಕಾಯಿಯಂಗೆ ಆಗದೆ. ಒಳಗಿರೋ ಶಿವಾ ಎಷ್ಟು ನೊಂದವನೋ! ಮೊದಲು ತಿಂದು ಆಮೇಲೆ ಕೈ ಜೊತೇಲೆ ಕಾಲು ತೊಳೆದರಾಗೋಕಿಲ್ಲವೇನೋ?" ಅಂದಳು ಅವಳು. ಹೊಸದಾಗಿ ಮಾಡಿಸಿದ್ದ ಹಿತ್ತಾಳೆ ಕಡಗ, ಗುತ್ತವಾಗಿ ತೊಟ್ಟಿದ್ದ ಕೆಂಪು ಬಳೆಗಳು ಇದ್ದ ಕೈಗಳನ್ನು ಭಾವವಾಗಿ ತಿರುಗಿಸಿಕೊಂಡು ಆಡಿದ ಮಾತು ಕೇಳಿ ಮಲ್ಲಣ್ಣನಿಗೆ ಹೇಗೆ ಹೇಗೋ ಆಯಿತು: "ಅಬ್ಬಾ! ಅದೇನು ಜಾತಿ ಹೆಣ್ಣಪ್ಪ ಇದು. ಮಸಾಣದ ಬೀರೇ

ದೇವರನ್ನೂ ಮನೆ ಮಾದೇವಪ್ಪನ ಮಾಡೋ ಜಾತಿ. ಮಾತು ಅಂದರೆ ಆನೆಗೆ ಹಾಕಿದ ಅಂಕುಸವ್ಹೋ! 'ಜಪ್ಪನೆ ಕೈಕಾಲು ತೊಳಕೋ! ಅಷ್ಟು ಈಭೂತಿ ಹಂಗಂಮ್ಕೊಂಡು ದೇವರಿಗೆ ಒಂದು ಕೈಮುಗಿದು ಜಟ್ಟ ನೇಳು' ಅನ್ನಬಾರದಾ! ಹಾಳ ಹೊಟ್ಟೆ ಇದ್ದೇ ಅದೆ. ನಾವು ಬೇಡ ಅಂದರೆ ತಾನೇ ಬಿಟ್ಟೇತು! ಇರಲಿ. ಒಂದು ಚೊಂಬು ನೀರು ತತ್ತಾ! ನಾನು ಕಾಲು ತೊಳಕೊಂಡು ಬರೋದರೊಳಗೆ ಒಂದು ಮಣೆ ಹಾಕಿ, ತಣಿಗೆ ತಂದಿಟ್ಟು ಬಾರನು. ಏನವಸರಾ ಅಂಥಾದ್ದೇನು ನಾವು ಬಾಳೆ ಹಣ್ಣು ಗುಡಾಣದೊಳಗೆ ಬೆಳೆದಿರೋದು!" ಅಂದು ಮಲ್ಲಣ್ಣ ಉಟ್ಟಿದ್ದ ಪಂಚೆ ಎತ್ತಿ ಕಟ್ಟಿದ. ಕೆಂಪಿಯೂ ಮಾತನಾಡದೆ ಹೋಗಿ ನೀರು ತಂದು ಕೈಕಾಲಿಗೆ ನೀರು ಕೊಟ್ಟಳು.

ಒಳಗೆ ಬಂದ ಮಲ್ಲಣ್ಣ ಮಾಡಬೇಕಾದ್ದೆಲ್ಲ ಮಾಡಿ ಪರಿವಾಣದ ಮುಂದೆ ಕೂತು ರೊಟ್ಟಿ ಮುರಿದು ಕಣ್ಣಿಗೊತ್ತಿಕೊಂಡು "ಶಿವಾ" ಎಂದು ಊಟಕ್ಕೆ ಕೂತ. ಹೆಂಡತಿ ಬಂದುಹೋಗ್ತಾ ಇರುವುದನ್ನು ನೋಡುತ್ತ "ಏನೋ ಹೇಳಬೇಕೊಂತ ಇದ್ದೀ! ಹೇಳುಬಿಡು" ಎಂದ.

ಅವಳಿಗೆ ಕಣ್ಣಲ್ಲಿ ನೀರಾಡಿತು. ಕಣ್ಣೀರು ಒರಸಿಕೊಂಡು, ಗಾಬರಿ ಬಿದ್ದ ಗಂಡನ ಮನಸ್ಸು ಸಮಾಧಾನವಾಗಲಿ ಎಂದು ನಕ್ಕು, "ಎಲ್ಲ ಕೊಟ್ಟ ಶಿವ ನನ್ನ ಹೊಟ್ಟೆಗೊಂದು ಬೊಂಬೆ ಹಾಕದೇಹೋದ. ಅದಕೇ –" ಅಂದಳು. ಮುಂದಿನ ಮಾತು ಹೊರಡಲಿಲ್ಲ

ಮಲ್ಲಣ್ಣ ಒಂದು ರೆಪ್ಪೆ ಹೊಡೆಯೋ ಹೊತ್ತು ಸುಮ್ಮನಿದ್ದು ಕಣ್ಣಿಗೆಬಂದ ನೀರು ಹಾಗೇ ತಡೆದುಕೊಂಡು, "ಅದಕೇನು ಮುಡುಕ ತೊರೆಗೆ ಹೋಗಿ ಬೀಜಾ ತರೋನ ಅಂತೀಯೋ?" ಅಂದೇ ಬಿಟ್ಟ.

ಕೆಂಪಿಗೆ ರೇಗಿ ಹೋಯಿತು: "ಥೂ ಮುಕ್ಕ! ಹೆಳೀದು ಮರೀಲಿ ಒಲ್ಲದು. ನಾನು ಏಳೋವರೊಳಗೆ ಅದೇನೋ ಅವಸರ" – ಎಂದು ಒದರಿದಳು.

ಮಲ್ಲಣ್ಣನಿಗೆ ಹೊಟ್ಟೆಗೆ ತುಂಬ ದಿಂಡಾಗಿತ್ತು. ಆಯಾಸ ಕಳೆದಿತ್ತು. ರೇಗು ಬರಲಿಲ್ಲ. ರೇಗಿದವಳನ್ನು ಕಂಡು ನಗು ಬಂತು. "ಅದಕಲ್ಲಾ! ಎಷ್ಟಾಗಲೀ ಹರೀತಿದ್ದ ನೀರು ಅದಕಂಡೆ!" ಎಂದು

ಇನ್ನೂ ಚೆಲ್ಲಾಟ ಮಾಡಿದ.

ಅವನ ಚೆಲ್ಲಾಟ ಅವಳನ್ನು ರೇಗಿಸಲಿಲ್ಲ. ಅವಳನ್ನು ಇನ್ನೂ ಅಷ್ಟು ಆಟವಾಡುವ ಹಾಗೆ ಪ್ರೇರಿಸಿತು. "ಹರೀತಿದ್ದ ನೀರು ಈಗ ಮೊಸರಿಗಿಂತ ಗಟ್ಟಿಯಾಗಿ ಕೂತಿಲ್ಲವೇನೋ? ಇನ್ನೇನು ಮರದ ತುಂಡಾಗಬೇಕೇನೋ!" ಎಂದು ಮಾತಿಗೆ ಮಾತು ಜೋಡಿಸಿದಳು.

ಅವನು ರಂಗು ರಂಗಾಗಿ, "ಆ ಹಾ ಹಾ! ಏನು ಹೇಳಲೋ ಹರೀತಿದ್ದ ನೀರ ಹಿಡಿದಿಟ್ಟರೋದು ಹರವಿ ಅಲ್ಲವೇನೋ? ಹಾರ ಹಾಕೋಂಗಿದ್ದರೆ ಹಾಕಬೇಕು ಹರವಿಗೆ" ಎಂದ.

"ಹೋಗು ಮುಕ್ಕ! ನೀರಿಗೆ ಹರಿಬೇಕೂಂದರೆ ಹರವಿ ಒಂದು ಅಡ್ಡವಾ! ಒದ್ದರೆ ಮೂರೇವಿ ಮೂವತ್ತು ಚೂರಾಗ್ತದೆ. ನೀರು ಬೇಕೂಂತ ವರಕೊಟ್ಟು ಸಿಂತದೆ ಅಂತ ತಿಳಿಕೊಳ್ಳೋ ಬುದ್ಧಿ ಕೂಡ ಇಲ್ಲ. ಹಾರಸಂತೆ ಹಾರ!" ಎಂದಳು.

"ಈ ಮಾತೇ ಅಲ್ಲವಾ ನನ್ನ ಕಾಲಿಗೆ ಸಂಕಲೆ ಹಾಕದ್ದು. ಈಗ ತಾನೇ ಏನು. ಬೇಕಾದರೆ ಹೋಗಿ ಬಾ. ಆದರೆ, ಮಾರಾಯಗಿತ್ತಿ, ನನ್ನೂ ಜೊತೇಲಿ ಬಾ ಅನ್ನಬೇಡ. ಕೈಮುಗಿತೀನಿ."

ಕೆಂಪಿ ನಕ್ಕುಬಿಟ್ಟಳು. ಬಂದು ತಲೆಯ ಮೇಲೆ ಒಂದು ಸಣ್ಣ ಮೊಟಕು ಹಾಕಿ, "ಮುಂಡೇದೆ! ಕಂಡ ಹರಟೇ ಎಲ್ಲ ಮಾಡಬೇಡ. ಸಂಕ್ರಾಂತಿ ಆದ ಮೇಲೆ ಮುಡುಕತೊರೆ ಜಾತ್ರೆ. ಈಗ ಇನ್ನೂ ಗೌರಿ ಕೂಡ ಬಂದಿಲ್ಲ. ಅದೆಲ್ಲ ಇರಲಿ. ಬಾಯಿಮುಚ್ಚಿಕೊಂಡು ಕೇಳು. ಮಗ್ಗುಲ ಹಳ್ಳೀಲಿ ಒಂದು ಮೊಗ ಬಂದದೆ. ಯಾರೋ ದೊಂಬರು ತಂದವರಂತೆ. ಹೆಣ್ಣುಮೊಗ, ಒಳ್ಳೆ ಜಾಜಿ ಮಲ್ಲಿಗೆ ಹೂವಿ ನಂಗೆ ಅದೆಯಂತೆ. ನೋಡಿದರೆ ಯಾರದೋ ಉತ್ತಮರ ಮೊಗ ಇದ್ದಂಗೆ ಅದೆ. ಅದ ನಾನು ತಕೋಬೇಕು ಅಂತ ಇದ್ದೀನಿ. ನೀವು ಏನಂದೀರೋ ಅಂತ—"

ಮಲ್ಲಣ್ಣ ಯೋಚಿಸಿದ. ಏನೇನೋ ಅಳೆದು ಸುರಿದು. "ಆಯಿತು. ಅಂಗಾದರೆ ನಿಂಗೆ ಮಕ್ಕಳಾಗೋ ವಯಸಾ ಆಗೋಯಿತು ಅಂತಲೋ!" ಅಂದ.

" ಹಂಗಲ್ಲ ! ಯಾವುದೂ ನೋಡು. ಬೇಕೂಂದಾಗ ಬಂದರೆ ಚೆನ್ನ. ಅದು ಬಿಟ್ಟು ಬೇಸಗೇಲಿ ಬಂದ ಕಂಬಳಿ ಆದರೆ ಏನು ಚೆಂದ ಹೇಳು."

" ನನ್ನ ಮಾತಿಗೆ ಏನು ಹೇಳಿದಂಗಾಯಿತು ಮತ್ತೆ ? "

" ಅದಾ ! ಆ ಮೊಗಬಂದ ಪುಣ್ಯಕ್ಕೆ ಹೊಟ್ಟೇನೂ ತುಂಬಿ ಬಂದರೆ, ಒಂದಕ್ಕೆರಡು ಆಯಿತು. ಅಂದು ಶಿವನಿಗೆ ಕೈಮುಗಿಯೋದು."

" ತಲೆಗೆ ಎರಡು ತುರುಬಾದಂಗಾದರೆ ? "

" ಹಂಗಲ್ಲ ಕಣ್ಣೇಮುಕ್ಕ ; ತುರುಬಿಗೆ ಎರಡು ಹೂವಾದಂಗೆ ಅನ್ನಬಾರದೇನೊ."

" ಹಂಗಾದರೆ ಮಾತಿಲ್ಲ. ಆಗಬೋದು ನಮ್ಮ ಅಡ್ಡಿಯೇನಿಲ್ಲ. ಆದರೆ, ಆ ಮೊಗ ಬಂದರೆ ಹಾಲು ಬೆಣ್ಣೆ ಅದು ! "

" ಅಂಯ್ ! ಹುಟ್ಟಿಸಿದ ದೇವರು ಹುಲ್ಲುಮೇಯಿಸ್ತಾನ ! ಕರಾ ಬರೋ ವೇಳೆಗೆ ಕೆಚ್ಚಲು ಬಿಟ್ಟೇ ಇರುತ್ತದೆ."

" ಹಂಗೆ ಆಗಲೇಳು ತಂದುಕೊ."

ಆ ವೇಳೆಗೆ ಊಟ ಆಗಿ ಮಲ್ಲಣ್ಣ ಢರ್ ಅಂತ ತೇಗಿದ್ದ. ಕೈ ತಣಿಗೇಲೇ ಕೈತೊಳೆದು ವಸ್ತ್ರದಲ್ಲಿ ಕೈಒರಸಿಕೊಳ್ಳುತ್ತಾ ಎದ್ದ. ಕೆಂಪಿ ಅವಸರವಸರವಾಗಿ ಅಡಕೆಲೆ ಮುಂದಿಟ್ಟು "ಹಂಗಾದರೆ ಹೋಗಿ ತರಲಾ ! " ಅಂದಳು.

" ಈಗ ಈ ಉರಿಬಿಸಿಲಿನಲ್ಲಿ ಮುಗ್ಗಲೂರಿಗೆ ಹೋಗಿಬಂದೀಯಾ?"

" ಇಲ್ಲೇ ಆ ಅರಳಿಕಟ್ಟೆಹತ್ತಿರ ಬಂದವರೆ ! "

" ಹಂಗಾದರೆ ಎಲ್ಲಾ ಆಗದೆ ಅನ್ನು ! "

" ಹೂಂ ! "

" ಹಂಗೆ ತರೋ ಅಂಗಿದ್ದರೆ ಇಲ್ಲಿಂದ ನಿನ್ನ ಬಟ್ಟೆ ತಕೊಂಡು ಹೋಗು. ಆ ದೊಂಬರ ಬಟ್ಟೆ ಗಿಟ್ಟೆ ಮನೆಗೆ ತರಬೇಡ. ಅವರ ಸೊಂಕು ಬಂದು ನಾವೂ ಅವರಂಗೆ ಲಾಗಾಹಾಕೋ ಹಂಗಾದೀತು. ಒಂದು ಪಸ ಹಿಡಕೊಂಡು ಹೋಗಿ ಅದರ ಹೊಟ್ಟೆ ಒಳಗೆ ಈಸಿಕೊ, ಅವರನ್ನೆಲ್ಲ ಕರೆದು ಒಂದು ಹೊತ್ತು ಚೆನ್ನಾಗಿ ಪಾಯಸ ಮಾಡಿ ಅವರ

ಹೊಟ್ಟೆ ತಣ್ಣಗೆ ಮಾಡಿ ಕಳಿಸು. ಅವರೇನು ಕೇಳ್ತಾರೆ ?"

"ಅವಳಿಗೆ ಒಂದು ಗಟ್ಟಿಯಾಗಿರೋ ಸೀರೆ ಬೇಕಂತೆ !"

"ಮೊಗಕ್ಕೊಂದು ಸೀರೆ ಏನೂ ಎಚ್ಚಲ್ಲ ! ಆದರೆ ಆ ಮಾತು ಊರಿಗೆ ತಿಳೀಬಾರದು. ನೋಡಿಕೊ. ಮಲ್ಲಣ್ಣ ಏನಪ್ಪಾ ! ಸೀರೆ ಕೊಟ್ಟ ಮೊಗಾ ತಕೊಂಡ ಅನ್ನೊ ಮಾತು ಹಬ್ಬಿದರೆ, ನಾವೇನೋ ಸಿರಿವಂತರಾಗೇವೋ ಅಂದುಕೊಂಡೇತು ಜನಾ !"

"ಅದೂ ನಿಜ. ಅಂಗಾದರೆ ಈಗ !"

"ಮುಚ್ಚಂಜೆವರೆಗೂ ಇರ್ತೀ ಅನ್ನೋ. ಪಾಯಸ ಮಾಡ ಬೇಡವಾ !"

"ಮಾಡಿಟ್ಟೆನ್ನಿ ;"

"ಹಂಗಾದರೆ ಇನ್ನೇನು !"

"ಮೊಗ ನೀನಾ ತಂದು ನಂಗೆ ಕೊಡಬೇಕು."

"ಓ ಅಂಗೋ! ಆಗಲಿ ಏಳಿದ್ದರೆ ಆಗುತಿರಲಿಲ್ಲವಾ! ಅಂತೂ ಅದು ಬಂದರೂ ನನ್ನ ಕೈಯಿಂದಲೆ ನಿನ್ನ ಕೈಗೆ ಬರಬೇಕು. ಅಲ್ಲವಾ! ನಡಿ"

ಇಬ್ಬರೂ ಹೋಗಿ ಮಗುವನ್ನು ತಂದರು.

ಬರುತ್ತಾ ದಾರೀಲಿ ಮಲ್ಲಣ್ಣ "ಈ ಮೊಗೀಗೆ ಏನು ಎಸರಿಡತಿ ?" ಎಂದು ಕೇಳಿದ.

ಕೆಂಪಿ ಸುಮ್ಮನೆ ಅವನ ಮೊಕವನ್ನು ನೋಡಿ "ಇನ್ನೇನೆಸದು ? ಮಲ್ಲಿ" ಅಂದಳು. ಅವಳ ಕಣ್ಣು, ಆ ನಗು, ಆ ನೊಟ್ಟ ನೋಟ, ಆ ಇನ್ನೇ ನಿನ್ನೇನೇನೋ ಹೇಳಿದ ಏನೇನೋ ಎಲ್ಲಾ ಅವನಿಗೆ ಅರ್ಥವಾಯಿತು.

ಆದರೂ ತುಂಬಿದ ಕೊಡದ ಗಾಂಭೀರ್ಯದಿಂದ ತಲೆಯಲ್ಲಾಡಿಸುತ್ತಾ "ಈ ಬಣ್ಣ, ಈ ಮೊಕ, ಈ ನಗ, ಎಲ್ಲಕ್ಕೂ ಸರಿಯಾಗಿದೆ ನಿನ್ನ ಎಸರು" ಎಂದು ಒಪ್ಪಿಕೊಂಡು, ಆ ತಿಂಗಳ ಬೊಮ್ಮಟೆಯನ್ನು ಮುತ್ತಿಟ್ಟುಕೊಂಡು ಮಡದಿಯ ಕೈಗೆ ಕೊಟ್ಟ. ಅವಳು ಆನಂದದಿಂದ ಕಣ್ಣು ತುಂಬ ನೀರಿಟ್ಟುಕೊಂಡು, "ನನ್ನ ಮನೆಗೆ ಮಹಾಲಕ್ಷ್ಮಿಯಾಗವ್ವ" ಎಂದು ತೆಗೆದುಕೊಂಡು ಮುತ್ತಿಟ್ಟುಕೊಂಡು ಮಡಿಲಲ್ಲಿ ಸೇರಿಸಿಕೊಂಡಳು.

ಪಟೇಲ್ ಪುಟ್ಟಸಿದ್ದಪ್ಪ ನಾಯಕನ ಮನೆಯಲ್ಲಿ ಅಂದು ಅಮಲ್ದಾರ್ರಿಗೆ ಔತಣ. ತಾಲ್ಲೋಕಿನ ದಣಿಯೆಂದು ಅಮಲ್ದಾರ್ರಿಗೆ ಗೌರವವಾದರೆ, ಆಗರ್ಭ ಶ್ರೀಮಂತನೆಂದು ಪಟೇಲನಿಗೆ ಗೌರವ. ಸಾಲದೆ ದಿವಾನ್ ಪೂರ್ಣಯ್ಯನವರನ್ನೂ ತನ್ನ ಮನೆಗೆ ಕರೆದುಕೊಂಡು ಬಂದು ಫಲತಾಂಬೂಲ ಒಪ್ಪಿಸಿದ ಮನೆತನ ಎಂದು ಪಟೇಲನಿಗೆ ಸ್ವಾಭಿಮಾನ. ಜೊತೆಗೆ ತುಂಬಿದ ಮನೆ. ಬೇಕು ಅಂದರೆ ಆ ಮನೆಯಲ್ಲಿ ಒಂದು ತಾಲ್ಲೂಕು ಕಚೇರಿಗೆ ಇಡಬಹುದು ಅಷ್ಟು ದೊಡ್ಡ ಮನೆ. ಅದಕ್ಕೆ ತಕ್ಕ ಐಶ್ವರ್ಯ. ಅವನು ಸೈ ಅಂದರೆ ಒಬ್ಬಿಬ್ಬರು ಅಮಲ್ದಾರರನ್ನಲ್ಲ ಸಬ್ ಡಿವಿಜನ್ ಆಫೀಸರ್‌ಗಳನ್ನು ಸಂಬಳಕ್ಕಿಟ್ಟುಕೊಳ್ಳಬಹುದು ಎನ್ನುವಷ್ಟು ಭಾರಿಯ ಕುಳ – ಅಷ್ಟೇನು ಅಲ್ಲಿಗೆ ಯಾರು ಬಂದರೇನು? ಐದು ಸಾವಿರ ಚಿಲ್ಲರೆ ತನ್ನ ಸ್ವಂತ ಕಂದಾಯ ಕಟ್ಟುವ ಧಣಿಯನ್ನು ಗೌರವಿಸದೆ ಇರುವುದುಂಟೆ? ಆ ಸುತ್ತುಮುತ್ತಿನಲ್ಲಿ ಯಾರೂ ಅವನ ಎದುರು ನಿಂತು ಮಾತನಾಡು ತ್ತಿರಲಿಲ್ಲ. ಮಾತನಾಡಲೇಬೇಕಾಗಿ ಬಂದರೆ, "ಬುದ್ಧಿ" ಎಂದು ಕೈಮುಗಿದು ಮಾತು.

ಅಮಲ್ದಾರ್ರು ಸ್ವಜಾತಿಯೆಂದು ನಾಯಕನಿಗೆ ಅಭಿಮಾನ ಇನ್ಮಡಿಯಾಗಿತ್ತು. ಆಗ ಮೇಲಿನ ಅಧಿಕಾರಗಳೆಲ್ಲ ಹಾರುವರಿಗೆ ತಪ್ಪಿದರೆ ಮುಸಲ್ಮಾನರಿಗೆ ಮೀಸಲಾಗಿದ್ದ ಕಾಲ. ಅದರಿಂದ ಪೂರ್ವ ಸಂಧ್ಯೆಯ ನಕ್ಷತ್ರಗಳಂತೆ ಅಲ್ಲೊಬ್ಬರು ಇಲ್ಲೊಬ್ಬರು ಇತರರು ಬಂದರೆ ಅವರವರ ಜಾತಿಯವರು ಸಹಜವಾಗಿ ಅಭಿಮಾನ ಪಡುವರು. ಆಪೊತ್ತಿನ ಔತಣಕ್ಕೆ ಊರೂ ಕಾಡೂ ಎರಡೂ ಕಾಣಿಕೆ ಕೊಟ್ಟಿದ್ದುವು. ಕುರಿ ಕೋಳಿ ಜೊತೆಗೆ ಜಿಂಕೆ ನವಿಲೂ ಬಂದಿದ್ದುವು. ಅಲ್ಲದೆ ವಿಲಾಯಿತಿ ಯಿಂದ ಬಂದ ಬಾಟಲಿ ದೇವತೆಯೂ ಗುಟ್ಟಾಗಿ ಕಾದಿದ್ದಳು.

ಹೆಸರಿಗೆ ಅಮಲ್ದಾರ್ರ ಔತಣ. ನಿಜವಾಗಿ ಊರಿಗೆಲ್ಲಾ

ಔತಣ. ಬಡವರು ಬಗ್ಗರು ಇರಲಿ, ಹಾರುವರಿಂದ ಹೊಲೆಯರವರೆಗೆ ಎಲ್ಲರಿಗೂ ಔತಣ. ಮಜಬೂತಾದ ಊಟ. ಸುಮಾರು ಸಾವಿರ ಜನದ ಮೇಲೆ ಆ ದಿನ ಊಟವಾಗಿದೆ.

ನಾಯಕನು ಊಟವಾದ ಮೇಲೆ ಅಮಲ್ದಾರ್ರನ್ನು ದಿವಾಣಖಾನೆಗೆ ಕರೆತಂದನು. ಹೊಸದಾಗಿ ಬಂದಿದ್ದ 'ಗುಳೋಪು'ದೀಪ ಪ್ರಕಾಶಮಾನವಾಗಿ ಉರಿಯುತ್ತಿದೆ. ದಂತದ ಕೆಲಸ ಮಾಡಿರುವ ಬಾಗಿಲನ್ನು ದಾಟಿ ಒಳಗೆ ಬಂದರೆ ಅಂಗೈಯ ದಪ್ಪದ ಹಸುರು ರತ್ನ ಕಂಬಳಿ. ಕಾಲಿಟ್ಟರೆ ಮಾಸೀತು ಎನ್ನುವಂತಹ ಸೊಗಸಾದ ಕೆಲಸದ್ದು. ಅಮಲ್ದಾರರು ತಮ್ಮ ಜನ್ಮದಲ್ಲಿ ಅಂತಹ ರತ್ನಗಂಬಳಿ ನೋಡಿರಲಿಲ್ಲ.

ಬಾಗಿಲ ಎದುರಿಗೆ ಎರಡು ಚೌಕಿಗಳ ಮೇಲೆ ಕಿಂಕಾಬಿನ ಕುತ್ತನಿ ಮೆತ್ತೆ; ಅದಕ್ಕೆ ತಕ್ಕಂತೆ ಒರಗುದಿಂಬು. ಗಾಳಿಯು ಪೊರೆ ಎನ್ನುವಂತಹ ಬಿಳಿಯ ಮಲ್ಲಿನ ಮುಸುಕು ಹಾಕಿದೆ. ಗರಿ ಮುರಿಯದ ಮಡಿಯು ಆ ಮಲ್ಲು ದೊಡ್ಡವರ ಬಳಿ ಹೆದರುತ್ತಾ ಕುಳಿತುಕೊಳ್ಳುವ ಬಡವರ ಹಾಗೆ, ಹೆದರಿಕೊಂಡು ಗೌರವವನ್ನೆಲ್ಲ ಒರಗು ದಿಂಬು ಮೆತ್ತೆಗಳಿಗೆ ಬಿಟ್ಟು, ತಾನು ಹಗುರವಾಗಿ ಎಲೆಯ ಕೊನೆಯಲ್ಲಿ ಕುಳಿತುಕೊಳ್ಳುವ ಇಬ್ಬನಿಯ ಹನಿಯ ಹಾಗೆ ಕುಳಿತಿದೆ. ಆ ಎರಡು ಸುಖಾಸನಗಳ ನಡುವೆ ಒಂದು ಗೇಣೆತ್ತರದ ಮಂತವ ಕಾಲುಮಣೆಯ ಮೇಲೆ ಒಂದು ಚಿನ್ನದ ತಟ್ಟೆ. ಅದೂ ಬಡವರ ಮನೆಯ ತಳಿಗೆಯಷ್ಟು ಅಗಲವಿದೆ. ಅದರಲ್ಲಿ ಬೆಳ್ಳಿಯ ತಗಡುಗಳು ಎನ್ನುವಂತಿರುವ ಚಿಗುರೆಲೆ ಅದರ ನಡುವೆ ಅಂದವಾಗಿ ಓರಣವಾಗಿ ಒಪ್ಪವಾಗಿ ಇಟ್ಟಿರುವ ಕುಂದಣದ ಸಣ್ಣ ತಟ್ಟೆಯಲ್ಲಿ ಚಿನ್ನದ ರೇಕು ಒತ್ತಿರುವ ಉಜ್ಜಡಿಕೆ. ಅದರ ಮೇಲೆ ಮತ್ತೊಂದು ಕುಂದಣದ ಕುಪ್ಪಿ! ಅವರಲ್ಲಿ ಕಾಚಿನಿಂದ ಹಿಡಿದು ಕಸ್ತೂರಿಯವರೆಗೆ ಎಲ್ಲಾ ಸರಂಜಾಮೂ ಹಾಕಿ ಪನ್ನೀರಿನಲ್ಲಿ ಕಲಸಿರುವ ಕೆನೆ ಸುಣ್ಣ. ಆ ಎರಡು ಆಸನಗಳಿಗೂ ಅಷ್ಟು ದೂರದಲ್ಲಿ ಒಂದು ಬೆಳ್ಳಿಯ ಕಂಬದ ಮೇಲೆ ಒಂದು ಚಿನ್ನದ ಆನೆ. ಅದಕ್ಕೆ ಅಂದವಾದ ರತ್ನಖಚಿತವಾದ ಗೌಸು. ಆನೆ ಸೊಂಡಿಲು ಎತ್ತಿಕೊಂಡಿದೆ. ಸೊಂಡಿಲಿನಲ್ಲಿ ಒಂದು ಧೂಪದಾನಿಯನ್ನು ಹಿಡಿದಿದೆ. ಅದಕ್ಕೆ

ನಾಲ್ಕೇ ನಾಲ್ಕು ಊದು ಬತ್ತಿಗಳನ್ನು ಸೆಕ್ಕಿದೆ. ಯಾವ ಕಡ್ಡಿಯೂ ದಪ್ಪ ಹೆಂಚಿಕಡ್ಡಿಗಿಂತ ದಪ್ಪಗಿಲ್ಲ. ಅವರಿಂದ ಬರುತ್ತಿರುವ ಹೊಗೆಯೂ ಅಷ್ಟು ದಪ್ಪವಾಗಿಲ್ಲ. ಆದರೂ ಪರಿಮಳ ಮಾತ್ರ ಮೂಗಿಗೆ ಇರಲಿ, ಕೈ ಹಾಗೆಂದರೆ ಸಿಕ್ಕುವುದೇನೋ ಅನ್ನುವಷ್ಟು ಮಂದವಾಗಿ ಹರಡಿದೆ.

ಆ ದಿವಾನಖಾನೆಯಲ್ಲಿ ಆ ಆಸನದಲ್ಲಿ ಹೋಗಿ ಕುಳಿತುಕೊಂಡಾಗ ಅಮಲ್ದಾರನಿಗೆ ತಾನು ಸ್ವರ್ಗದಲ್ಲಿ ಇದ್ದೇನೋ ಅನ್ನಿಸಿತು. ಇಷ್ಟು ವೈಭವಸಂಪನ್ನನಾದ ಈ ಶ್ರೀಮಂತನನ್ನು ಏನೆಂದು ಮಾತನಾಡಿಸಬೇಕು ಎಂದು ತೋರದೆ, "ಏನು ಸ್ವಾಮಿ, ತಾವೇನು ಪಟೇಲರೋ, ಹಿಂದಿನ ಪಾಳೆಯಗಾರರೋ? ತಮ್ಮನ್ನು ಎಲ್ಲರೂ ಬುದ್ಧಿ ಬುದ್ಧಿ ಅನ್ನೋದು ತಪ್ಪೇನೂ ಅಲ್ಲ?" ಎಂದು ಆರಂಭಿಸಿದನು.

ನಾಯಕನು ತುಂಬಿ ವಿಶಾಲವಾಗಿರುವ ನೀರಿನ ಹರಹುಳ್ಳ ಭಾರಿಯ ಕೆರೆಯು ಶಾಂತವಾಗಿರುವಾಗ ನಗುವ ಹಾಗೆ ನಕ್ಕು "ತಾವು ಅಂದದ್ದು ನಿಜ. ನವಾಬರ ಹಿಂದಿನ ಕಾಲದಲ್ಲಿ ನಾವು ಪಾಳೆಯಗಾರರು. ಈಗ ಏನೋ ಕಸ್ತೂರೀ ಕಟ್ಟಿದ ಬಟ್ಟೆ. ಹಿಂದೆ ವಿಜಯನಗರದವರು ಹಾಕಿಕೊಟ್ಟ ಶಾಸನಗಳೂ ಅವೆ. ಅತ್ತಾಗಿ ಕೊಳ್ಳೇಗಾಲದಿಂದ ಹಿಡಿದು ಪಡುವಲಾಗಿ ಆನೇಕಾಡು ಬಳಸಿಕೊಂಡು, ನಂಜನಗೂಡು, ಚಾಮುಂಡೇಶ್ವರಿಬೆಟ್ಟ, ಸಂಗಮ, ಸೋಸಲೆ, ತಲಕಾಡು, ಮುಡುಕತೊರೆಬೆಟ್ಟ, ಶಿವನಸಮುದ್ರ, ಎಲ್ಲಾ ಬಳಸಿದ ಈ ದೇಶವೆಲ್ಲಾ ನಮ್ಮದಂತೆ! ನಮ್ಮ ಮನೆಗೆ ಆನೇಕಾಡಿನ ಪಾಳೆಯಗಾರರ ಮನೆ ಅಂತ ಹೆಸರಂತೆ. ಅದೆಲ್ಲ ಹೋಗಿ, ಈಗ ಹಿಂಗದೆ. ಕಾವೇರಮ್ಮ ಇಲ್ಲವಾ? ಹಂಗೆ. ಆಗ ಆಷಾಢಮಾಸದ ತುಂಬುಹೊಳೆ; ಈಗ ಮಾಗಮಾಸ. ಅಷ್ಟೇ!"

"ಆನೇಕಾಡಿನ ಪಾಳೆಯಗಾರರು ಅಂತಲೇ ನಿಮ್ಮ ಮನೆತನ?"

"ಹೌದು, ಪಾದ! ಅಕೋ! ಅದೋ! ಆ ಆನೆಯೇ ನಮ್ಮ ಗುರುತು. ಪಾದ!"

"ನೀವು ಪಾದಗೀದ ಅನ್ನಬೇಡೀಪ್ಪ. ಅದಿರಲಿ, ಪ್ರಿನ್ಸ್ ಆಫ್ ವೇಲ್ಸ್ ಬರೋದು ಗೊತ್ತೇನು ನಿಮಗೆ?"

"ಅದೇನೋ ಎಲ್ಲರೂ ಅಂತಿದ್ದಾರೆ."

"ನಿಜ. ಏಪ್ರಿಲ್ ವೇಳೆಗೆ ಬರುತ್ತಾರೆ. ನನ್ನ ಅಲ್ಲಿಗೆ ಡೆಪ್ಯೂಟ್ ಮಾಡಿದ್ದಾರೆ. ಸಾಹೇಬರಿಗೆ ಹೇಳ್ತೀನಿ. ತಾವೂ ಬರುತ್ತೀರ? ಪ್ರಿನ್ಸ್ ಆಫ್ ವೇಲ್ಸ್‌ರಿಗೆ ತಮ್ಮನ್ನು ಭೇಟೀ ಮಾಡಿಸೋ ಹಂಗೆ ಹೇಳ್ತೀನಿ. ಮಹಾರಾಜರೂ ಬರುತ್ತಾರೆ?"

"ಚಕ್ರವರ್ತಿಗಳ ಮಕ್ಕಳು: ಚಕ್ರವರ್ತಿಗಳಾಗೋರು! ಅವರೆಲ್ಲಿ ನಾವೆಲ್ಲಿ ಪಾದ?"

"ಅವರು ದೊಡ್ಡವರು ನಿಜ. ಹಾಗೆಂದು ಇಲ್ಲಿಯ ದೊಡ್ಡ ಮನುಷ್ಯರನ್ನು ನೋಡಬೇಡವೆ? ಅಷ್ಟೇನು? ತಮ್ಮ ಈ ರತ್ನದುಂಗುರ ಗಳೂ ಕಪ್ಪ ಹಾಕಿಕೊಂಡಿರುವ ಕೈಹಿಡಿದು ಕುಲುಕೋಕೆ ಅವರಿಗೆ ಅದೃಷ್ಟವಿರಬೇಡವೆ?"

"ಉಂಟೀ ಬುದ್ಧಿ! ಎಷ್ಟಾಗಲಿ, ಅವರು ದೇವರ ಹಂಗೆ. ನಮ್ಮ ಮಹಾರಾಜರು ಅಂದರೆ ಸಾಕ್ಷಾತ್ ದೇವರೇ! ಅವರಂಥವ ರಿಂದಲೂ ಕೈಮುಗಿಸಿಕೊಂಡು ಅವರಮೇಲೂ ತಮ್ಮ ಅಧಿಕಾರನಡೆ ಸೋರು ಎಂದರೆ ಸಾಮಾನ್ಯವೆ? ಏನೋ ನೋಡಿ".

"ಇನ್ನೇನೂ ಇಲ್ಲ ಬುದ್ಧೀ! ನಾನೂ ನಿಮ್ಮನ್ನು ಬುದ್ಧಿ ಅಂತಲೇ ಅಂದುಬಿಡುತೀನಿ ಹೋಗಿ. ನೀವು ಈ ದಿನ ನನಗೆ ಮಾಡಿದ ಈ ಮರ್ಯಾದೆಗೆ ನಾನು ಏನೂ ಮಾಡಬೇಡವೆ? ತಾವೇ ಹೇಳಿ. ಈ ಖೆಡ್ಡಾ ಅರೇಂಜ್‌ಮೆಂಟಿಗೆ ನನ್ನ ಸ್ಪೆಷಲ್ ಡ್ಯೂಟಿಗೆ ಹಾಕಿದ್ದಾರೆ. ತಾವು ಕ್ಯಾಂಪಿಗೆ ಬಂದು ನನ್ನ ಜೊತೆಯಲ್ಲಿ ಇದ್ದುಬಿಡಿ. ನನುಯನೋಡಿ ನಾನೂ ಕೆಲಸ ಸಾಧಿಸಿಬಿಡುತ್ತೇನೆ."

"ಏನೋ ತಾವು ಎಷ್ಟೇ ಆಗಲಿ ಪ್ರಭುಗಳು. ತಮ್ಮ ಇಷ್ಟ ಹಾಗೆ ಇದ್ದರೆ ನಡೆದುಹೋಗಲಿ. ಆಯಿತು. ಈಗ, ತಮಗೆ ತಾಂಬೂಲ ಆಗುತ್ತಲೂ ಮತ್ತೆ ಸಂಗೀತದ ಏರ್ಪಾಟು ಮಾಡೋ ಣವೋ ಹೇಗೆ?"

"ಅಲ್ಲರೀ! ಅವೊತ್ತು ಇದ್ದ್ಯಾರೋ ನಮ್ಮೂರಲ್ಲಿ ತಂದಾನಾಪದ ದೋನು ಇದಾನೆ. ತತ್ವ ಬಹಳ ಚೆನ್ನಾಗಿ ಹೇಳುತಾನೆ ಅಂದರಲ್ಲ!"

"ಹೌದು ಮರೆತೇಬಿಟ್ಟಿದ್ದೆ. ಯಾರೋ ಅಲ್ಲಿ! ಮಲ್ಲಣ್ಣನ ಕರೆಯೋ!"

ಮಲ್ಲಣ್ಣ ಬಂದು ಕೈಮುಗಿದ.

"ಏನಯ್ಯಾ! ದಣಿಗಳಿಗೆ ನಿನ್ನ ತತ್ವ ಕೇಳಬೇಕು ಅನ್ನಿಸದೆ. ನಿನ್ನ ಪುಣ್ಯ ಅಲ್ಲವಾ?"

"ಹೌದು ಬುದ್ಧಿ. ಅಪ್ಪಣೆ ಆದರೆ....?"

"ಏನು ಹೇಳು."

"ನಮ್ಮ ಮಗ ಮಲ್ಲಿ ಬಾಯಲ್ಲಿ ಬೋ ಚೆನ್ನಾಗಿ ನುಡೀತದೆ".

"ಅಲ್ಲ ಕಣೋ, ಮಲ್ಲಣ್ಣ, ನಿನ್ನ ಹಾಡು ನಾವು ಕೇಳಿದೀವಿ. ಪರವಾಯಿಲ್ಲ. ಆ ಮಗದಕೈಲಿ ತತ್ವ ಹೇಳಿಸೋದಾ? ಅದೂ ಇವೊತ್ತು ಮೂಗೋರೋಳ ಸಂಗೀತ ಆಗಿರುವಾಗ ಅದಕ್ಕೆ ಅರ್ಥಗಿರ್ಥ ಇಲ್ಲದಿದ್ದರೆ ಆದೀತಾ?"

"ಬುದ್ಧಿಯೋರ ಪಾದದಾಣೆ! ಅದೆಲ್ಲ ಗಿಣಿಮಾತಿನಂಗೆ ಪಾದ! ಗಿಣಿ ಅವರಿವರ ಮಾತುಕೇಳಿ ತಾನೇ ಕಲೀತದೆ! ಹಾಗಂತ ತಮ್ಮಂಥಾ ದಣಿಗಳು ಅದನ್ನು ಕೇಳದೆ ಬಿಟ್ಟಾರಾ?"

"ನೋಡಿದಿರಾ ಬುದ್ಧಿ! ನಮ್ಮ ಮಲ್ಲಣ್ಣ ಹಿಂಗೆ ಮಾತಿಗೆ ಮಾತು ಪೋಣಿಸೋದರಲ್ಲಿ ಬೋ ಜಾಣ! ಏನೋ ಮಲ್ಲಣ್ಣ! ಈ ಜಾಣತನ ಎಲ್ಲಿ ಕಲಿತೆ?"

"ಏನು ಹೇಳಲಿ ನಿಮ್ಮ ಪಾದಾ! ಆ ತತ್ವ ಹೇಳಿ ಹೇಳಿ ನನ್ನ ಬಾಯೂ ಎಣ್ಣೇ ಅಳೆದ ಮಾನ ಆಗದೆ ಅಷ್ಟೇ! ಬರೀ ಜಿಡ್ಡೇ ಬುದ್ಧಿ! ಎಣ್ಣೆ ಇಲ್ಲ."

"ಆಗಲಿ, ಕರತತ್ತಾ! ಎರಡು ತತ್ವ ಹೇಳಲಿ. ಆಮೇಲೆ ನೀನು ಹೇಳೋವಂತೆ!"

"ಆಗಬೋದು ನಿಮ್ಮ ಪಾದಾ!"

"ಆಮೇಲೆ ತಮ್ಮಲ್ಲಿ ಇನ್ನೊಂದು ವಿಚಾರ ಹೇಳಬೇಕಲ್ಲಾ! ಪಟೇಲರೆ?"

"ಅಪ್ಪಣೆಯಾಗಬೇಕು. ಬುದ್ಧಿ!"

"ನಮಗೆ ಬುದ್ಧಿ ಇಲ್ಲಾಪ್ಪಾ! ನಿಜ. ಇನ್ನಾದರೂ ಬುದ್ಧಿ ಅನ್ನಬೇಡಿ. ತಾವು ಪಗಡೆ ಬಹಳ ಚೆನ್ನಾಗಿ ಆಡುತ್ತೀರಂತೆ."

"ಅಂಯ್! ನಾನು ಅಷ್ಟು ಚೆನ್ನಾಗಿ ಆಡೋದೆಲ್ಲಿ ಬಂತು? ಏನೋ ಆಡುತೀನಿ ಹೊತ್ತು ಹೋಗೋಲ್ಲ ಅಂತ! ಈಗ ಪಗಡೇ ಗಂಜೀಫ್ ಎಲ್ಲಾ ಹೋಯಿತು ಬುದ್ಧಿ! ಸತ್ತ ಕಾಗದದ ಆಟ ಹೆಚ್ಚಾಗುತ್ತಾ ಅದೆ. ಅದರಲ್ಲೂ ಅದು ಯಾವ ಗುಲಾಮು ತಂದನೋ ಆ ಗುಲಾಮನ ಆಟ! ಅದೇ ಎಲ್ಲೆಲ್ಲೂ ಆಗುತಾ ನಮ್ಮೋರೆಲ್ಲಾ ಗುಲಾಮರೇ ಆಗುತಾ ಅವರೆ ಬುದ್ಧಿ!"

"ಅದು ಹೋಗಲಿ. ನನಗೆ ಪಗಡೇಲಿ ಬಹು ಷೋಕಿ. ನಿಮಗೆ ಗೊತ್ತೋ?"

"ಬೇಕಾದರೆ ಯಾರನಾದರೂ ಕರೆಸೋದು."

"ನೀವೇ ಆಡಬೇಕೂಂದರೆ?"

"ನಾವು ಆಡಬೋದು. ಆದರೆ, ತಾವು ದಣಿಗಳು ಹೆಂಗೆ ಹೇಳೋದು?"

"ನಾವೇ ಬಲವಂತಮಾಡಿದರೆ?"

"ಬರಿಕೈಯಲ್ಲಿ ಆಡೋದೆ ಬುದ್ಧಿ!"

"ಹಾಗಂತ ನಾವು ಬಳೆ ತೊಟ್ಟುಕೊಳ್ಳೋಣವೆ?"

"ಹಹಹಾ! ಹೆಂಗಲ್ಲ. ಏನೂ ಇಲ್ಲದೆ ಆಡಬಾರದು ಬುದ್ಧಿ! ಬರಿಕೈ ನೆಕ್ಕೊಳ್ಳೋದೂ ಉಂಟಾ?"

"ಆದೂ ಆಗಲಿ. ನಾವು ಪಗಡೆ ಹಾಕೋಣ. ಮಲ್ಲಣ್ಣನ ತತ್ವ ನಡೀಲಿ. ಆಗಬಹುದಲ್ಲಾ!"

"ಎರಡೇ ಆಟ ಬುದ್ಧಿ!"

"ಎರಡು ಅಂತ ಆರಂಭವಾಗಲಿ."

"ಹಂಗಲ್ಲ. ನಾಳೆ ಅಷ್ಟುಹೊತ್ತಿಗೇ ಕುದುರೆಮೇಲೆ ಹೋಗೋದು ಅದೆ! ಅಲ್ಲದೇ...."

"ಹಂಗೂ ಆಗಲಿ."

ಮಲ್ಲಣ್ಣ ಮಗಳ ಜೊತೇಲಿ ಏಕನಾದ ತಂದ. ಪಗಡೆಯ

ಕಾಯಿ ಚಾರಿಯೂ ಬಂತು. ಕೆಂಪು ಕಪ್ಪು ಹಸುರು ಹಳದಿ ಕಲ್ಲುಗಳ ಕಾಯಿಗಳು, ಚಿನ್ನದ ದಾಳ; ಮೊಕಮಲ್ಲಿನಮೇಲೆ ಕಲಾಪತ್ತಿನ ಕೆಲಸ ಮಾಡಿರುವ ಚಾರಿ.

ತತ್ವಗಳು ಆರಂಭವಾಯಿತು. ಗುರುವಿನ ಸ್ತೋತ್ರವಾಯಿತು. ಶಾರದಾ ಗಣಪತಿಯರು ಬಂದು ಹೋದರು. ಅಮಲ್ದಾರ್ರು ಕೈಯಲ್ಲಿ ದಾಳ ಹಿಡಿದವರು ಹಾಗೇ ಕುಳಿತುಬಿಟ್ಟರು. ಐದು ವರ್ಷದ ಮಲ್ಲಿ ಬಹಳ ಭಾರಿಯ ಶಿವಭಕ್ತಳಂತೆ ಮೂರೆಳೆ ವಿಭೂತಿ ಹಣೆಗೆ ಹಚ್ಚಿ ಏಕನಾದ ಕೈಲಿಹಿಡಿದುಕೊಂಡು ತತ್ವ ಹೇಳುತ್ತಿದ್ದಾಳೆ. ಯಾರೋ ಹಿರಿಯ ಅನುಭವಿಗಳ ಬಾಯಲ್ಲಿ ಬಂದಹಾಗೆ ಬರುತ್ತಿದೆ. ಎಲ್ಲರೂ ಬಾಯಲ್ಲಿ ನೊಣಹೋಗುವುದೂ ತಿಳಿಯದೆ ಕೇಳುತ್ತಾ ಇದ್ದಾರೆ.

ನಾಯಕನಿಗೆ ಆ ಹುಡುಗಿಯ ದುಂಡುದುಂಡಾಗಿ ನೀಳವಾಗಿರುವ ಕೈಗಳು, ನೀಳವಾದರೂ ಪೂರ್ಣವಲವಾದ ಕೆನ್ನೆಗಳು, ಮುದ್ದಾದ ಬಾಯಿ, ಆ ಮೂಗು, ಮುಚ್ಚಿದ್ದರೂ ಮೆಚ್ಚಿಕೆಯಾಗುವ ಆ ಕಣ್ಣು, ಎಲ್ಲದಕ್ಕಿಂತ ಅವಳು ಹಚ್ಚಿರುವ ವಿಭೂತಿಯಂತೇ ಬೆಳ್ಳಗಿರುವ ಆ ಬಣ್ಣ, ಎಲ್ಲ ಮನಸ್ಸಿಗೆ ಹಿಡಿದಿದೆ. ಮನಸ್ಸು ವರ್ಷಾಂತರಗಳು ಮುಂದೋಡಿ, "ಈ ಬೊಡ್ಡೀದು ಈಗಲೇ ಹಿಂಗದೆ! ಇನ್ನು ಇವಳಿಗೆ ವಯಸ್ಸು ಬಂದರೆ, ಗಂಡು ಅಂದವ ನೋಡಿ ಬದುಕಬೋದಾ!" ಎಂದು ಯೋಚನೆ ಮಾಡುತ್ತಿದೆ.

ಅಮಲ್ದಾರನಿಗೆ, "ಎಲಾ! ಐದು ವರ್ಷದ ಕಂದಮ್ಮ! ಇವಳ ಬಾಯಲ್ಲಿ ಹೀಗೆ ನುಡೀತದಲ್ಲ! ಹಿಂಗೂ ಉಂಟೆ? ನ್ಯಾಯವಾಗಿ ಈ ವಯಸ್ಸಿನಲ್ಲಿ ಇನ್ನೂ ತೊಸ್ಸ ಪಸ್ಸ ಅಂತ ಮುದ್ದು ಮಾತು ಆಡಿಕೊಂಡಿರಬೇಕು" ಎಂದು ಮನಸ್ಸು ಆಶ್ಚರ್ಯಮಗ್ನವಾಗಿ ಹೋಗಿದೆ.

ಮಲ್ಲಣ್ಣನಿಗೆ ಬಹು ಆನಂದವಾಗಿದೆ. ಆದರೆ ಒಂದೇ ಯೋಚನೆ: ಹೆಂಡಿತಿ ಬಂದವಳು ಎಲ್ಲಿ ಕೂತಿದ್ದಾಳೋ! ಕೇಳುತ್ತಿದ್ದಾಳೋ ಇಲ್ಲವೋ ಅಂತ. ಜೊತೆಗೆ ತನ್ನ ಮಾತು ಗೆದ್ದಿತಲ್ಲಾ ಎಂದು ಅದು ಬೇರೆ ಸಂತೋಷ; ಕಟ್ಟಿದ್ದ ಪಣ ಗೆದ್ದವರ ಮೊಕದ ಮೇಲಿರುವ ಕಳೆ ಇದೆ.

ಹೀಗೆಯೇ ಒಂದು ಗಂಟೆ ಆಯಿತು. ಅಮಲ್ದಾರ್ರು "ಸ್ವಾಮಿ!

ಸಾಕು ಅನ್ನಿ ! ಎಷ್ಟೇ ಆಗಲಿ ಮಗು ! ” ಅಂದು ತಡೆದರು. ಪಟೇಲ ಸನ್ನೇಮಾಡಿ ಒಳಕ್ಕೆ ಕಳುಹಿಸಿ, “ಏನು ಮಲ್ಲಣ್ಣ ಇವಳ ಹೆಸರೇನೋ ? ಇಷ್ಟು ದಿವಸ ಆಗದೆ : ನಮ್ಮ ಅರಿಕೇಗೆ ಬಂದೇ ಇಲ್ಲ ! ” ಎಂದನು.

“ನಮ್ಮ ಮಲ್ಲಿ ಹೆಸರು, ಬುದ್ಧಿ, ಮಲ್ಲಿಕಾಂಬೆ. ದಣಿಗಳ ಕಣ್ಣಿಗೆ ಬಿದ್ದಿಲ್ಲ ಅಷ್ಟೇ! ಅರಮನೇಲಿ ಜನಾನಾಕ್ಕೆಲ್ಲ ಗೊತ್ತು! ಅವಳು ತೊಟ್ಟಿರೋ ಕಲಾಪತ್ತಿನ ಲಂಗ ಕಲಾಪತ್ತಿನ ರವಿಕೆ ಎಲ್ಲಾ ಅರ ಮನೇಲೇ ಅಪ್ಪಣೇ ಆದ್ದು ! ”

“ ಓಹೋ ! ಹಂಗಾ ! ಹಂಗಾದರೆ ನಿಮ್ಮ ಮಲ್ಲಿ ನಮಗೆ ತಿಳೀದೇನೇ ಜನಾನಾವರೆಗೂ ಹತ್ತವಳೆ ಅನ್ನು. ಇನ್ನುಮೇಲೆ ಆಗಾಗ ಬಂದು ನಮಗೂ ಅಷ್ಟು ತಪ್ಪ ಹೇಳಲಿ ಕಣಪ್ಪ ! ಇವಳ ಬಾಯಲ್ಲಿ ಬಲು ಚೆನ್ನಾಗಿ ನುಡೀತದೆ. ”

“ ಅಪ್ಪಣೆ ಬುದ್ಧಿ ! ”

ಆ ವೇಳೆಗೆ ಒಳಗಿಂದ ಒಂದು ತಟ್ಟೆಯಲ್ಲಿ ಹತ್ತುರೂಪಾಯಿ, ಒಂದು ಕಲಾಪತ್ತಿನ ಕಿರಿಗೆ, ಒಂದು ಕಲಾಪತ್ತಿನ ಕಣ, ವೀಳ್ಯ ಬಂತು. ಪಟೇಲನು ಅಮಲ್ದಾರ್ರ ಕೈಯ್ಯಿಂದ ಅದನ್ನು ಅವಳಿಗೆ ಕೊಡಿಸಿ, “ಹೋಗು ಮಲ್ಲಿ, ಉಡಿಸಿಕೊಂಡು ಬಂದು ಬುದ್ಧಿಯೋರ ಪಾದಕ್ಕೆ ಬೀಳು ” ಎಂದನು.

ಅವಳು ಕಲಾಪತ್ತಿನ ಕಿರಿಗೆ ಉಟ್ಟುಕೊಂಡು ಪುಟ್ಟ ಗೌರಿಯ ಹಾಗೆ ಬರುತ್ತಿದ್ದರೆ ಪಟೇಲನ ಕಣ್ಣಿಗೆ ಅವಳು ನಿಲುಗೌರಿಯ ಹಾಗೆ ಕಂಡಳು. ಮನಸ್ಸು “ ಈ ಹಕ್ಕಿಗೆ ಈಗಲೇ ಒಂದು ಪಂಜರ ಮಾಡಬೇಕು ” ಎಂದುಕೊಳ್ಳುತ್ತ ಏನೋ ಯೋಚಿಸುತ್ತಿರುವಾಗ, ಅಮಲ್ದಾರ್ರು “ ನಮಗಿರಲಿ ಕಣವ್ವ, ಅಲ್ಲಿ ನೋಡು, ನಿಮ್ಮ ಧಣಿಗಳು ಅವರಿಗೆ ಮೊದಲುಮಾಡು. ಇವೆಲ್ಲ ಅವರದಲ್ಲವಾ ?” ಎಂದರು.

ಮಲ್ಲಣ್ಣನು “ ಇಬ್ಬರಿಗೂ ಪಾದಮುಟ್ಟಿ ಶರಣುಮಾಡವ್ವ ! ಒಬ್ಬರು ದೊರೆಗಳು ಕಳಿಸಿರೋ ಬುದ್ಧಿಗಳು : ಇನ್ನೊಬ್ಬರು ನಮ್ಮನ್ನ ಹೊಟ್ಟೇಲಿಟ್ಟುಕೊಂಡು ಸಾಕೋ ಬುದ್ಧಿಗಳು ” ಎಂದನು.

ಮಲ್ಲಿಯು ಇಬ್ಬರಿಗೂ ನಮಸ್ಕಾರಮಾಡಿ ಬಂದಳು. ಆ ವೇಳೆಗೆ

ಎಲ್ಲಿಯೋ ಇದ್ದ ಕೆಂಪಿ ಬಂದು ಅವಳನ್ನು ಎತ್ತಿಕೊಂಡು ಅವಳಿಗೆ ಆಗಿರ ಬಹುದಾದ ದೃಷ್ಟಿದೋಷವನ್ನೆಲ್ಲಾ ಹೀರಿಕೊಳ್ಳುವಂತೆ ಮುತ್ತಿಟ್ಟು, "ನನ್ನ ಚಿನ್ನಾ! ಸಾವಿರಕಾಲ ಸುಖವಾಗಿರು!" ಎಂದು ನಿವಾಳಿಸಿ ನೆಟಿಕೆ ಮುರಿದು ಕರೆದುಕೊಂಡುಹೋದಳು.

ಅಮಲ್ದಾರ್ರು "ಬುದ್ಧಿಯೋರು ಬರುವಾಗ ಈ ಮಗೂನ ಕರೆತರಬೇಕು" ಎಂದರು.

ಪಟೇಲನಿಗೆ ವೈದ್ಯ ಹೇಳಿದ್ದೂ ಹಾಲೂ ಅನ್ನ ರೋಗಿ ಬಯಸಿದ್ದೂ ಹಾಲೂ ಅನ್ನ ಎಂಬಂತೆ ಆಯಿತು.

೩

ಡೆಪ್ಯುಟೀಕಮೀಷನರ್ ಸ್ವಂತವಾಗಿ ಸೈನ್ಮಾಡಿರುವ ಪತ್ರ ಬಂದಿದೆ ಪಟೇಲರಿಗೆ. ಊರಿಗೆ ಊರೇ ಬೆರೆತುಕೊಂಡುಹೋಗಿದೆ. "ರಾಣಿ ಮೊಮ್ಮಗ ಬರುತಾರಂತೆ: ಈಗ ನಮ್ಮ ಬುದ್ಧಿಯವರು ಹೋಗಬೇಕಂತೆ" ಎಂದು ಊರಿನವರಿಗೆಲ್ಲಾ ಸಂತೋಷ. "ಏನೇ ಅನ್ನು, ದೊಡ್ಡಬುದ್ಧಿಯವರಂಗಲ್ಲ ಇವರು. ಅವರು ಊರುಬಿಟ್ಟು ಇನ್ನೆಲ್ಲೂ ಹೋಗುತ್ತಲೇ ಇರಲಿಲ್ಲ. ಇರೋವರೆಗೂ ಎಲೇಮರೇ ಕಾಯಂಗೆ ಇದ್ದು ಶಿವನ ಪಾದ ಸೇರಿದರು. ಇವರು ಹಂಗಲ್ಲ. ನೋಡು ಸುಬೇದಾರ್ರು, ಸಬ್‌ಡಿವಿಜರ್ರು, ದುಪಟೀಕಮೀರ್ಷರವರೆಗೂ ಹತ್ತಿ ಬುಟ್ಟವರೆ. ಈಗ ರಾಣಿ ಮೊಮ್ಮಗನ್ನೇ ನೋಡತಾರೆ ಅಂದಮೇಲೆ ಮಹಾರಾಜರವರೆಗೂ ಹೋಗಲೇಬೇಕೋ? ಹುಟ್ಟಿದರೂ ಇಂತಾ ಮಗ ಹುಟ್ಟಬೇಕು ಮನೇಲಿ. ನೋಡು, ಆನೇಕಾಡನೋರ ಮನೆತನ ಎಂಥಾದ್ದು ಅಂತ ಭೂಲೋಕಕ್ಕೆಲ್ಲ ಹಬ್ಬಿ ಬಿಡುತದೋ! ಭಲೇ ಭಲೇ" ಎಂದು ಒಬ್ಬ ಮುದುಕ ಅಂದ.

"ಈ ನಮ್ಮ ಬುದ್ಧಿಯೋರಿಗೆ ಇಂಗ್ಲೀಸು ಅಷ್ಟು ಬಂದಿರೋದಲ್ಲಾ,

ಬೇಕಾದರೆ ರೆವಿನ್ಯೂ ಕಮಿಷ್ನರು, ಕೌನ್ಸಲ್ಲರು, ಕೊನೆಗೆ ದಿವಾನಗಿರಿ ಕೂಡ ಮಾಡೇ ಮಾಡೋ ಬುದ್ಧಿ. ಏನು ಮಾಡೋದು; ಕಲೀಲಿಲ್ಲ."

"ಹಂಗಂತ ಅವರಿಗೇನಾ ಕಮ್ಮಿಯಾಗಿರೋದು? ಈ ಸುತ್ತ ಮುತ್ತಲಿನಲ್ಲಿ, ಯಳಂದೂರು ಜಹಗೀರುದಾರ್ರನ್ನ ಬಿಟ್ಟರೆ, ಈ ಗತ್ತು, ಈ ಗಮ್ಮತ್ತು, ಯಾರಿಗುಂಟು? ಅವರಿಗೆ ಇಂಗ್ಲೀಷ್ ಬಂದು ಅವರು ಅಧಿಕಾರ ಮಾಡಿದ್ದರೆ, ಅದು ನಮ್ಮ ಪುಣ್ಯಕ್ಕೆ ಆಯಿತಿತ್ತು."

"ಈಗತಾನೇ ಏನಂತೆ? ಇನ್ನೂ ಅವರಿಗೆ ಮುಪ್ಪತ್ತೋ ಮುಪ್ಪತ್ತೈದೋ? ಈಗಲೂ ಕಲೀಬೇಕು ಅಂದರೆ ಬಹಳ ದೊಡ್ಡದಾ! ಅವರು ಮನಸ್ಸು ಮಾಡಲಿ. ಈ ಠಸ್‌ಪುಸ್ ಹ್ಯಾಟ್‌ಬೂಟ್ ಎಲ್ಲಾ ಒಂದೇ ವರುಷದಲ್ಲಿ ಕಲೀದಿದ್ದರೆ, ನನ್ನ ಹೆಸರು ಬೇರೆ ಇಡು."

ಹೀಗೆ ಊರ ಅರಳಿಯ ಕಟ್ಟೆಯಮೇಲೆ ಎಲ್ಲರೂ ಎಳೆ ಬಿಸಿಲು ಕಾಯಿಸಿಕೊಳ್ಳುತ್ತ ಹರಟೆ ಹೊಡೆಯುತ್ತ ಕುಳಿತಿರುವಾಗ, ಕೆಂಪಿಯು ಅತ್ತಕಡೆ ನೀರಿಗೆ ಹರವಿ ತಕೊಂಡು ಹೊರಟಿದ್ದಳು. ಊರ ಗೌಡರೆಲ್ಲ ಕೂತಿರುವಾಗ ತಾನು ಬಿರುಬೀಸಾಗಿ ಹೊರಟರೆ ಆದೀತೆ? ಮುಸುಕು ನೇರವಾಗಿ ತಲೆತುಂಬಾ ಹೊದೆದುಕೊಂಡು, ಸೆರಗು ಎಳೆದುಕೊಂಡು ಮೈತುಂಬಾ ಹೊದೆದುಕೊಂಡು, ತಲೆ ಬಗ್ಗಿಸಿಕೊಂಡು ಹೊರಟಳು. ಅಲ್ಲಿ ಅಡಕೆಲೆ ಹಾಕಿಕೊಂಡು ಹೊಗೆಸೊಪ್ಪು ತಿಕ್ಕುತ್ತ ಕುಳಿತಿದ್ದ ಗೌಡನೊಬ್ಬನು "ಏನು ಕೆಂಪಕ್ಕ, ನಿಮುಗೂ ಪಯಣವಂತೆ?" ಅಂದನು.

ಅವಳು ತನ್ನ ಸಂತೋಷವನ್ನು ಮುಚ್ಚಿಕೊಳ್ಳಲಾರದೆ, ಹೊರಸೂಸುವವಳಂತೆ ಮೊರದಗಲವಾಗಿರುವ ಮೊಕದ ತುಂಬಾ ನಗುವನ್ನು ಹಿಡಿತವಾಗಿ ನಗುತ್ತಾ, "ಏನೋ ಹಿರೀಕರ ಪುಣ್ಯ ನಿಮ್ಮ ಪಾದ. ನಿಮ್ಮೂರು ಬಂದು ಸೇರಿದೋ; ನಿಮ್ಮ ಹೊಟ್ಟೆಯಲ್ಲಿ ಇಟ್ಟುಕೊಂಡು ಕಾಪಾಡುತಿದೀರಿ." ಅಂದು ಮುಂದೆ ಹೊರಟು ಹೋದಳು.

ಇನ್ನೊಬ್ಬನು "ಏನೇ ಅನ್ನು, ಮಾನವಂತೆ. ಹಲ್ಕಾಗಿಲ್ಲಾ ಅಲ್ಲ!" ಅಂದನು.

"ಅಂತಾ ಚೆಲ್ಲಾಟ ಆಡಿದ್ದರೆ, ನಮ್ಮೂರಲ್ಲಿ ನಿಲ್ಲಾಕೇ ಆಗು

ತಿರಲಿಲ್ಲ. ಒಂದೇ ಜಿನ. ಓಡಿಸಿ ಬುಡುತ್ತಿದ್ದೊ! ಅದೂ ನಾಯ ಬುಟ್ಟು" ಅಂದ ಇನ್ನೊಬ್ಬ.

ಆ ಕೊನೆಯಲ್ಲಿ ಕೂತಿದ್ದವನು, "ಅವಳ ಮೊಕದ ಮೇಲೆ ಆ ರೂಪಾಯಗಲದ ಕುಂಕುಮ, ಮೊಕದ ತುಂಬಾ ಅರಶಿಣ, ನೋಡಿದರೆ, ಎಷ್ಟು ಸಂತೋಷವಾಗುತ್ತದೆ ಅಂತೀಯಾ?" ಅಂದ.

"ಎಲಾ! ಬಿಸಿಲಾಯಿತು. ಇನ್ನು ಹೊಲ ಗದ್ದೆ ಕಡೆ ನೋಡಿ ಕೊಂಡು ಬರೋಕಿಲ್ಲವಾ? ಏಳೇಳಿ. ಹಗಲ ಮಾತು ಕೆಲಸ ಗೇಡು."

ಎಲ್ಲರೂ ಎದ್ದು ಒದರಿಕೊಂಡು ಹೊರಟರು.

೪

ನಾಯಕನು ಶಿವಪೂಜೆ ಮುಗಿಸಿಕೊಂಡು, ನಾಷ್ಟಾ ಮಾಡಿ ಕೊಂಡು, ಬಂದು ಗಿರಿಜಾಮೀಸೆಯನ್ನು ತೀಡುತ್ತಾ ದಿವಾನ್‌ಖಾನೆಯಲ್ಲಿ ಕುಳಿತಿದ್ದನು. ಮನೆವಾರ್ತೆಯು ಬಂದು ಬಾಗಿಲಲ್ಲಿ ನಡುಕಟ್ಟಿ ಕೊಂಡು ನಿಂತಿದ್ದನು. ಅವನ ಕಂಕುಳಲ್ಲಿ ಒಂದು ಕಟ್ಟು ಕಾಗದ. ಜೊತೆಗೆ ಆಳು ಕಾಳು ಎಲ್ಲರೂ ಅಂಗಳದಲ್ಲಿ ಕಾದಿದ್ದರು.

"ಹಂಗಾದರೆ, ಸುಬೇದಾರ ತನ್ನ ಮಾತು ಉಳಿಸಿಕೊಂಡ?"

"ಹೌದು ಬುದ್ಧಿ."

"ನಾವು ಹೊರಟರೆ ಯಾವೊತ್ತು ಹೊರಡಬೇಕು?"

"ಬ್ರೇಸ್ಪತಿವಾರ ಹೊರಡಬೇಕು!"

"ಶುಕ್ರವಾರದ ಲಕ್ಷ್ಮೀಪೂಜೆ?"

"ಜನಾನಾದಲ್ಲೇ ನಡೀಬೋದು, ಅಪ್ಪಣೆಯಾದರೆ?"

"ಅಂಯ್! ಉಂಟಾ ನಂಜಪ್ಪಾ! ಆ ತಾಯಿಯಲ್ಲವಾ ನಮ್ಮ ನ್ನೆಲ್ಲಾ ಕಾಪಾಡೋಳು? ಅವಳ ಪೂಜೆ ತಪ್ಪೋದು ಅಂದರೇನು? ಸಂಜೆ ಅಷ್ಟು ಹೊತ್ತದೆ ಅನ್ನುವಾಗ ಬರೋದು; ಮಡಿಗಿಡಿ ಮಾಡಿ

ಪೂಜೆ ತೀರಿಸಿ, ಬೆಳಗಿನ ಝಾವಕ್ಕೆ ಎದ್ದು ಶಿವಪೂಜೆ ನಾಷ್ಟಾ ಮುಗಿಸಿಕೊಂಡು ಊಟದ ಹೊತ್ತಿಗೆ ಅಲ್ಲಿಗೆ ಹೋಗಿ ಸೇರಿ ಬುಡೋದು ?"

"ಸರಿ. ಅವರೂ ಅಲ್ಲಿಗೆ ಶನಿವಾರವೇ ಬರೋದು ! ಡೆಪ್ಯುಟೀ ಕಮೀಷನರು ಮಾತ್ರ ಶುಕ್ರವಾರ ಬರುತ್ತಾರೆ."

"ಸರಿ. ಯಾರು ಯಾರು ಹೊರಡೋರು ?"

"ಬಿಡದಿಯೋರನಕ ಹೊರಟೇ ತೀರಬೇಕು. ಅವರು ಬುಧುವಾರ ರಾತ್ರೀನೇ ಹೊರಡುತ್ತಾರೆ. ಇನ್ನು ನಾಲ್ಕು ಆಳು ಆದರೆ ಸಾಕು ಅಂತ ಕಾಣ್ತದೆ."

"ಆಮೇಲೆ ?"

"ದಣಿ ಚಿತ್ತ."

"ನಮ್ಮವು ನಾಲ್ಕು ಕುದುರೆಗೆ ಎರಡೆರಡಾಳು. ಜೋಡುನಲ್ಲಿ ಬಂದೂಕು ನಾಲ್ಕು, ಎರಡು ಬಾಕು, ಹಲಗೆ ಕತ್ತಿ, ಎರಡು ಭಲ್ಯ, ಗುರಾಣಿ, ಮಿಣಿ, ಒಂದು ರಿವಾಲ್ವರ್, ಇಷ್ಟು ಹೋಗಬೇಕು, ಅದರದರ ಸಿಬ್ಬಂದಿ ಸಮೇತ. ಇವೆಲ್ಲ ಯಾಕೆ ತಿಳೀತೋ ? ಸರಿ. ಅದಕ್ಕೆ ಬೇಕಾದ ಸಿಬ್ಬಂದಿಯೆಲ್ಲ ಜೊತೇಲೇ ಇರಲಿ."

"ಒಂದು ಡಬ್ಬಲ್‌ಪೋಲ್ ಟೆಂಟ್, ಒಂದು ಸಿಂಗಲ್‌ಪೋಲ್ ಕೊಡುತೀವಿ ಅಂತ ಬರೆದಿದ್ದಾರೆ."

"ನಾವು ಅವರ ಟೆಂಟ್ ಕಾದು ಕುಳಿತರೆ ಆಗುತದಾ. ನೀವು ಇವೊತ್ತೆ ಹೋಗಿ, ಪಕ್ಕದ ಊರಲ್ಲಿ ನಮ್ಮ ಕುದುರೆ, ಎತ್ತು, ಇವಕ್ಕೆ ಭದ್ರವಾದ ಒಂದು ತಡಿಕೆ ಗೋಡೆ ಮನೆ ಮಾಡಿಸಿ ಬುಡಿ. ಬರುವಾಗ ಯಾರಾದರೂ ಬಡವರಿಗೆ ಕೊಟ್ಟು ಬರೋವ. ನಮಗೆ ಇಲ್ಲಿಂದ ಎರಡು ಟೆಂಟ್ ತೆಗೆಸಿಕೊಂಡು ಹಾಕಿಸಿಬುಡಿ. ನಾವು ಬೇರೆ ಇಲ್ಲದಿದ್ದರೆ ನಮಗೆ ಮಾನ ಬಂದೀತಾ ? ನಾಳೆ ಡೆಪ್ಯುಟೀಕಮೀಷನರೂ ಇಲ್ಲೇ ಇರುತೀನ್ರಿ ಅನ್ನೋ ಹಂಗೆ ಇರಲಿ."

"ಅಪ್ಪಣೆ ಬುದ್ಧಿ !"

"ಹಣ ಎಷ್ಟು ತಕೊಂಡು ಹೋಗೋದು ?"

"ಮೂರು ಸಾವಿರ ಸಾಕು ಅಂತ ಕಾಣ್ತದೆ."

"ಅಂಯ್ ! ಉಂಟಾ ! ಹೋಗೋದು ಭಾರೀ ಜಾಗ, ಐದಾದರೂ ಇರಲಿ."

"ಮಾದೇಗೌಡರೂ ಅಪ್ಪಣೆಯಾದರೆ...."

"ಬರಲಿ, ಆದರೆ ನಮ್ಮ ಕ್ಯಾಂಪ್ನಲ್ಲಿ ಇರೋದಾ. ಅವರಿಗೆ ಬೇರೆ ಒಂದು ಟೆಂಟ್ ಹಾಕಿಸಿಬುಡಿ. ಜನಾನಾದೋರು ಆನೆ ಕಟ್ಟೋ ದಿನ ಬರುತ್ತಾರೆ. ಆ ದಿನ ಮಂಟಪ ಗರೀಲಾದರೂ ಕಟ್ಟಿಸಿರಬೇಕು. ಅವನೋ ? ಅವನನ್ನೇನು ಮಾಡುತ್ತೀರಿ ? "

"ಯಾರು ಮಲ್ಲಣ್ಣನ್ನೇ ? "

"ಹೂ ! ಅವನೂ ಅವನ ಮಗಳೂ ಬರಬೇಕಲ್ಲ ? ".

"ಅಪ್ಪಣೆ ಆದರೆ ಲಾಯದ ಮಗ್ಗುಲಲ್ಲಿ ಒಂದು ಅಂಕಣ ಹಾಕಿಸೋದು."

"ಆ ಬೊಡ್ಡೀಮಗ ಪೂರಾಮಗ. ಬೋ ರಸಿಕ. ಆ ಹೆಂಡತಿ ಬಿಟ್ಟಿರಲಾರ. ಅವನು ಹೆಂಡ್ತೀನೂ ಕರಕೊಂಡು ಬರೋದಾದರೆ ಲಾಯದ ಮಗ್ಗುಲಲ್ಲೇ ಅವನಿಗೆ ಜಾಗಾಕೊಡಿ. ಇಲ್ಲದಿದ್ದರೆ ನಮ್ಮ ಜೊತೇಲಿ ಇದ್ದು ಬುಡಲಿ."

"ಅವನೇ ಬಂದಿದ್ದಾನೆ."

"ಬರಹೇಳಿ."

ಮಲ್ಲಣ್ಣ ಬಂದು ಕಾಲೂರಿ ಕೈಚಾಚಿ ಶರಣುಮಾಡಿ ನಿಂತುಕೊಂಡನು. ನಾಯಕನು ನಗುತ್ತಾ "ಇನ್ನು ಮೇಲೆ ನಿನ್ನ ಏನನ್ನ ಬೇಕು ಮಲ್ಲಣ್ಣ ? ಈಗ ಏನು ನೀನು ಬಾನು ಮುಟ್ಟುತಿದ್ದೀ ? " ಎಂದನು. ಮಲ್ಲಣ್ಣನು ಗಂಭೀರವಾಗಿ ನಗುತ್ತಾ ಕೈಮುಗಿದುಕೊಂಡು "ಬುದ್ಧಿಯವರು ಬಾನುಮುಟ್ಟ ಬೆಳೆದವರೆ ಅಂತ ತಾನೇ ನಾವೂ ಹತ್ತಿಕೊಂಡು ಹೋಗೋದು ! " ಎಂದನು.

ಪಟೇಲನು ಆ ಸ್ತುತಿಯನ್ನು ಒಪ್ಪಿಕೊಳ್ಳುತ್ತಾ ಕೇಳಿದನು: "ಆಯಿತು. ಏನು? ಹೊರಡೋದು ಯಾಪೊತ್ತು ? ಯಾರ್‍ಯಾರು ಹೊರಡುತೀರಿ ? ಹೆಂಗೆ ? "

ಮಲ್ಲಣ್ಣನೂ ವಿನಯದಿಂದ ಹೇಳಿದನು: "ಬುದ್ಧಿಯೋರು ಅಪ್ಪಣೆ ಕೊಡಿಸತಾ ಇದ್ದದ್ದೆಲ್ಲ ಕೇಳಿದೆ. ಸೊರ್ಗದಲ್ಲಿ ಎರಡು ದಿನ ಇರಬೇಕು ಅಂದರೆ ಬೇಡ ಅನ್ನೋರು ಯಾರು? ಮೊಗಾ ಕರಕೊಂಡು ನಾನೊಬ್ಬನೇ ಬರುತೀನಿ."

"ಆಮೇಲೆ ನಮ್ಮನ್ನೇ ಅಡಕೆಲೇ ತತ್ತಾ ಅಂದರೆ?"

ಎಲ್ಲರಿಗೂ ನಗುಬಂತು: ಕೆಲವರು ತಡೆಯಲಾರದೆ ನಕ್ಕುಬಿಟ್ಟರು. ಮಲ್ಲಣ್ಣ ಮಾತ್ರ ಗಾಬರಿಯಾಗಿ, "ಶಿವ ಶಿವಾ! ಬುದ್ಧಿಯೋರು ಅಡಕೆಲೆ ಉಗಿದಕಡೆ ನಿಲ್ಲೋರು ನಾವು?" ಎಂದು ಅಡ್ಡಬಿದ್ದನು.

"ಹಂಗಾದರೆ, ನೀನೊಬ್ಬನೇ ಬರೋನು? ಆಗಲೇಳು. ಬಿಡದೀಲಿರೋ ಯಾರಾದರೂ ಆ ಹೆಣ್ಣು ನೋಡಿಕೊಳ್ತಾರೆ. ಹಂಗೇ ಮಾಡು. ಏನ್ರೀ! ಈ ಮಲ್ಲಣ್ಣನಿಗೆ ಒಂದು ಮೆತ್ತೆ, ಒಂದು ಉಜ್ಜುಗಂಬಳಿ ಒಂದು ಜೊತೆ ದುಪ್ಪಟಿ, ಇವೊತ್ತೇ ಕೊಡಿಸಿ. ಬಟ್ಟೆಬರೇಗೆಲ್ಲ ಒಂದು ಐವತ್ತು ರೂಪಾಯಿ ಸಾಕೋ?"

"ಐವತ್ತು ರೂಪಾಯಿ ಆದರೆ ಒಂದು ಮನೆಕಟ್ಟಬಹುದು. ಬೇಕಾದಷ್ಟು ಆಯಿತು."

"ಆ ಏಕನಾದಕ್ಕೆ ಒಂದಷ್ಟು ಬಣ್ಣಗಿಣ್ಣ ಹಾಕಿಸಿ, ಎಲ್ಲಾ ಪಸಂದುಮಾಡು."

"ಹೌದು ಬುದ್ಧಿ. ರಾಣಿ ಮೊಮ್ಮಗನ ಮುಂದೆ ಹಿಡಿಯೋವಾಗ ಅದೂ ಅಲ್ಲಿಗೆ ತಕ್ಕಂತೇ ಇರಬೇಡವಾ?"

"ಸರಿ. ನಿಂದಾಯಿತು. ಎಲ್ರಿ? ನೀವು ಏಳಿ. ನಾನು ಹೋಗಿ ಕುದುರೆಲಾಯ ನೋಡುತೀನಿ."

ಮಲ್ಲಣ್ಣ ಅಡ್ಡಬಿದ್ದು ಹೊರಟನು. ನಾಯಕನು ಏನೋ ಯೋಚಿಸಿಕೊಂಡು "ನಿನ್ನ ಹೆಂಡ್ರುನೂನೂ ಕರಕೊಂಡು ಬಾರೋ. ಆಮೇಲೆ ಬಯ್ಕೋಬೇಡ" ಅಂದನು.

ಮಲ್ಲಣ್ಣನು ಬಹು ಸಂತೋಷಪಟ್ಟುಕೊಂಡು ಆ ಸಂತೋಷ ತೋರಿಸಿಕೊಳ್ಳುತ್ತಾ 'ಅಪ್ಪಣೆ! ಪಾದ' ಎಂದು ಕೈಮುಗಿದು ಹೋದನು.

ಮನೆವಾರ್ತೆ ಎಲ್ಲರ ಮೊಕನೋಡಿದನು. ಒಬ್ಬೊಬ್ಬರಾಗಿ ಸಡಿಲಿದರು. ಎಲ್ಲರೂ ಹೊರಟುಹೋದಮೇಲೆ, ಅವನು ಕೊಂಚ ಹತ್ತಿರ ಬಂದು, ಬಾಯಿಗೆ ಕೈ ಅಡ್ಡವಾಗಿ ಹಿಡಿದು, "ಹೋಗುವಾಗ ದಾರೀಲಿ ಮೂಗೂರಿಗೆ ಹೋಗಲೋ ? ತಿರುಮಕೂಡ್ಲಿಗೆ ಹೋಗ ಲೋ ? " ಎಂದು ಕೇಳಿದನು

ಪಟೇಲನು ಒಂದು ಗಳಿಗೆ ಸುಮ್ಮನಿದ್ದು "ಅದಕ್ಕೇ ನಾನು ಬೇರೆ ಇರೋವ ಅಂದದ್ದು. ಈ ದೊಡ್ಡಸಾಹೇಬರಿಗೆ ನಮಗಿಂತ ಚಪಲ. ಕಾಗೆ ತಂದದ್ದು ಹದ್ದು ಹಾರಿಸಿಕೊಂಡು ಹೋದಂಗಾದೀತು. ಆ ಸುತ್ತಮುತ್ತಿನವೇ ಯಾವಾದರೂ ನೋಡಿ."

"ಬಂಡೀಪುರದ ಮಗ್ಗುಲಲ್ಲಿ ಸೂಳೇರು ಪೊಗದಸ್ತಾಗಿರುತಾರೆ ಅಂತಾರೆ."

"ಸರಿ, ಅಲ್ಲೇ ಒಂದು ಗೊತ್ತುಮಾಡಿ. ಹೋದ ಹೋದ ಕಡೇಲೆಲ್ಲಾ ಒಬ್ಬೊಬ್ಬ ಸೂಳೆ ಬೇಕು ಇವನಿಗೆ ಅಂತ ಸುಮ್ಮ ಸುಮ್ಮನೆ ಕೂಗೋ ಜನದ ಮಾತು ನಿಜವಾದರೂ ಆಗಲಿ."

ಮನೆವಾರ್ತೆ ಕೈಮುಗಿದು ಹೊರಟನು.

೫

ಶಾಸ್ತ್ರಾರರ ಮುಖಂಡ ಹಕೀಂ ಬಂದು ಸಲಾಂ ಹೊಡೆದು ನಿಂತನು.

" ಏನೋ ಬಂದೆ ಹಕೀಂ ! "

" ಏನಿಲ್ಲಾ ಖಾವಂದ್ ! ನಾಲ್ಕು ಕುದುರೆ ಅಲ್ಲಿಗೆ ಹೊರಡ ಬೇಕು ಅಂತ ಅಪ್ಪಣೆ ಆಯ್ತಂತೆ. ಯಾವುದು ಯಾವುದು ಅಂತ ಅಪ್ಪಣೆ ಅಂತ ಬಂದೆ ಖಾವಂದ್ ! "

"ಒಂದು ಜೊತೆ ಗಾಡಿ ಕುದುರೆ, ಅದೂ ಆ ಭಾರಿ ಕರೀ ಕುದುರೆ

ಗಳು. ಅವು ಬೇಕೇ ಬೇಕು. ನಾವು ಕ್ಯಾಂಪಿನೊಳಕ್ಕೆ ಸಾರೋಟಿನಲ್ಲಿ ಹೋಗುತ್ತಿದ್ದರೆ, ನೋಡೋರ ಕಣ್ಣೆಲ್ಲ ಕುದುರೇನೆ ನೋಡುತಿರಬೇಕು. ಹೌದೋ ಅಲ್ಲವೋ ?"

"ಬರಾಬರ್ ಖಾವಂದ್ ! ಹಂಗೇ ಇರಬೇಕು."

"ಆಮೇಲೆ ಬೇಟೆಗೆ ಹೋಗುವಾಗ ಯಾವುದರ ಮೇಲೆ ಹೋಗೋದು ?"

"ಅಪ್ಪಣೆ ಆದರೆ, ಸುಲ್ತಾನ್, ರಾಣಿ, ಎರಡೂ ಭೇಷಾದ ಕುದುರೆ ಖಾವಂದ್! ಆದರೆ ರಾಣಿ ನೋಡಿ ಮಹಾರಾಜಾ ಸಾಹೆಬ್‌ರು ನಜರ್ ಹಾಕಿದರೆ, ಖಾವಂದ್‌ರಿಗೆ ಹೆಂಗಾಗ್ತದೋ ?"

"ಬಿಡೋ ! ದೇಶ ಆಳೋ ದೊರೆ ಬೇಕೂಂದರೆ, ಸಂತೋಷವಾಗಿ ಕೊಟ್ಟು, ನಮ್ಮ ಕೈಮೇಲಾಯ್ತು ಅಂತ ಮೀಸೆ ತಿರುವೋದಲ್ಲವಾ ?"

ಹಕೀಂಗೆ ತಿಳಿಯದೆಯೇ ಕೈ ಮೀಸೆ ಮೇಲಕ್ಕೆ ಹೋಗಿತ್ತು. ಅಷ್ಟರಲ್ಲಿ ತಾನು ಇರುವುದೆಲ್ಲಿ ಎಂಬುದು ನೆನಪಾಗಿ, ಆ ಕೈಯ್ಯಿಂದ ಹಾಗೆಯೇ ಬಾಯಿ ಮುಚ್ಚಿಕೊಂಡು, "ಬಾಳಾ ಸರಿ, ಖಾವಂದ್. ಹೌದು ಖಾವಂದ್. ಅದೇ ಅಲ್ಲಾನ ದಯಾ ಅನ್ನೋದು" ಎಂದನು. ಅವನ ಮನಸ್ಸು ಪಟೇಲನನ್ನು ಬಹಳ ಮೆಚ್ಚಿಕೊಂಡಿತು.

"ಹಂಗಾದರೆ ಸುಲ್ತಾನ್, ರಾಣಿ, ಎರಡೂ ?"

"ಅಲ್ಲಿ ಭಾರೀ ಷಿಕಾರಿಗಳು ಬರುತಾರಂತೆ. ಅವರ ಮುಂದೆ ನಮ್ಮದೂ ಒಂದು ಕೈ ತೋರಿಸೋಣ ಅಂತ. ನೀನೇನಂತೀ ಹಕೀಂ ?"

"ಖಾವಂದ್, ಈ ಬೆಳ್ಳೀ ಜನ ಏನಿದ್ದರೂ ಗುಂಡಲ್ಲಿ ಹೊಡೆಯೋದೆ ಹೊರ್ತು, ಮೊಖಾಮೊಖಿ ಷಿಕಾರಿ ಮಾಡೋಕಾದೀತಾ ಇವರ ಕೈಲಿ ? ನಮ್ಮೋರ ಝೋಕು ಅವರಿಗಿಲ್ಲ ಖಾವಂದ್. ತಮ್ಮಂಗೆ ಅವರು ಸುವರ್‌ನ ಹೊಡೆದಾರ ! ದೊಡ್ಡ ಸಾಹೇಬರಿಗೂ ಹುಜೂರಿಗೂ ಹೇಳಿಕೊಂಡಾದರೂ ಸುವರ್ ಷಿಕಾರಿ ಝೋಕು ತೋರಿಸಬೇಕು ಖಾವಂದ್ ! ಅರೇ ಅಲ್ಲಾ ಅವೊತ್ತು, ಆಹಾಹಾ ! ಆ ಕುದುರೆ ಕಾಲೆತ್ತಿಸಿ ಗಿರ್ಕೀ ಹೊಡೆದು ಖಾವಂದ್ ಆ ಸುವರ್ ಭರ್ಜಾ— ಹೊಡೆದದ್ದು, ಅದು ಉರುಳಿ ಬಿದ್ದದ್ದು, ಭಲ್ಲೆ ತಿವಿದದ್ದು – ಆ ಆ,

ಅರೇ ಅಲ್ಲಾ! ದುನಿಯಾದಲ್ಲಿ ಇನ್ನೊಬ್ಬರಿಗೆ, ಉಹುಂ, ಹಣೇಲೂ ಬರೀಲಿಲ್ಲ. ಖಾವಂದ್."

ಹಕೀಂ ಆವೇಶದಲ್ಲಿ ಅವಾಚ್ಯ ನುಡಿದದ್ದು ಪಟೇಲನಿಗೆ ಕೋಪ ಬರಲಿಲ್ಲ. ಅವನು ಆ ಕುದುರೆಯ ಹಾಗೆ ಕಣ್ಣು ಅರಳಿಸಿಕೊಂಡು ಕೈಯೆತ್ತಿಕೊಂಡು ಗರ್‍ರನೆ ತಿರುಗಿದ್ದಂತೂ ಬಹು ಪಸಂದಾಯಿತು.

ಆ ಸುಮ್ಮಾನದಲ್ಲಿಯೇ ಮುಂದುವರೆದು ಪಟೇಲ ಕೇಳಿದ: "ಯಾಕೋ ಹಕೀಂ! ಪೋಲೋದಲ್ಲಿ ಅವರೇನು ಕಮ್ಮಿ ಕುದುರೆ ಕಸರತ್ತು ಮಾಡತಾರೇನೋ?"

"ಸೈ ಖಾವಂದ್! ಮಾಫ್ ಕರ್‍ನಾ ಖಾವಂದ್! ಈ ಬೆಳೀ ಜನಾ ಪೋಲೋ ಚೆನ್ನಾಗಾಡ್ತಾರೆ. ಸಚ್ ಬಾತ್. ಆದರೆ ಮೈಸೂರ್ ಜಂಖಾನಾದಲ್ಲಿ ಬಂದು ಬಂದು ಸಲಾಂ ಹೊಡೆದು ಹೋಗೋಕಿಲ್ವಾ! ಖಾವಂದ್! ನಮ್ಮ ಮಹಾರಾಜಾ ಸಾಹೆಬ್, ಯುವರಾಜಾ ಸಾಹೆಬ್, ಬನ್ನಿಸಿಂಗ್ ಸಾಹೆಬ್, ಪ್ರಿನ್ಸ್ ಗೋಪಾಲ್ ಬುದ್ಧಿ ಸಾಹೆಬ್, ನಾಲ್ಕು ಜನ ನಿಂತು ಬಿಟ್ಟರೆ ಹತ್ತು ಹನ್ನೆರಡೂ ಗೋಲ್ ಹೊಡೆಯೋಲ್ಲವಾ ಖಾವಂದ್! ನಮ್ಮ ಜನ ಯಾಕೋ ಬೆಳೀ ಜನ ಕಂಡರೆ ಹೆದರ್ತದೆ. ಆ ಹೆದರಿಕೇ ಬಿಟ್ಟು ಅಖಾಡಾಕ್ಕೆ ಇಳಿದರೆ ಅವರ ಕೈಲಾದೀತಾ ಖಾವಂದ್?"

ನಾಯಕನೂ ಏಕಮನಸ್ಕನಾಗಿ ಕೇಳುತ್ತಿದ್ದನು. ಅವನು ಸುಮ್ಮನಿರುವುದನ್ನು ಕಂಡು ಹಕೀಂನು ಇನ್ನೂ ಮುಂದೆ ಹೇಳಿದ:

"ಖಾವಂದ್‌ರು ಮಾಫ್ ಮಾಡಬೇಕು. ಹಿಂದೆ ಫ್ರೇಸರ್ ಸಾಹೆಬ್‌ರು ಇದ್ದಾಗ ನಮ್ಮ ಮಹಾರಾಜಾ ಸಾಹೆಬ್‌ರನ್ನ ಇಂಡಿಯಾ ಎಲ್ಲ ನೋಡೋಕೆ ಸರ್ಕೀಟು ಕರಕೊಂಡು ಹೋಗಿದ್ದರು ಖಾವಂದ್. ಆಗ ಬೀಜಾಪುರಕ್ಕೂ ಹೋದರು. ಅಲ್ಲಿ ನಮ್ಮ ಸುಲ್ತಾನರು ಆಳುತಾ ಇದ್ದಾಗ ಮಾಡಿಸಿದ್ದ ಒಂದು ಕಬ್ಬಿಣದ ಗುಂಡಪೆ, ಖಾವಂದ್. ಅದನ್ನು ನೋಡಿ ಇದನ್ನು ಯಾರು ಎತ್ತೀರಿ ಅಂದರು ಫ್ರೇಸರ್ ಸಾಹೆಬ್‌ರು. ಬೆಳೀಜನ ಒಬ್ಬೊಬ್ಬರಾಗಿ ಬಂದು ನೋಡಿದರು. ಕಂಬರ್ ಮಟ್ಟದ ಮೇಲೆ ಎತ್ತೋಕೆ ಯಾರಿಗೂ ಆಗಲಿಲ್ಲ ಖಾವಂದ್.

ಆಗ, ಮಹಾರಾಜಾ ಸಾಹೆಬ್ ಪ್ರಿನ್ಸ್ ಗೋಪಾಲ್ ಬುದ್ಧಿ ಸಾಹೆಬ್ ಮೊಕಾ ನೋಡಿದರು. ಅವರು ಮುಂದೆ ಬಂದದ್ದೂ ಏಕದಂ ಎತ್ತಿ ಅದನ್ನು ಅಷ್ಟು ದೂರ ಎಸ್ತೇ ಬಿಟ್ಟರು. ಬೆಳೀ ಜನ ಎಲ್ಲಾ ಬೇಸ್ತು ಬಿದ್ದು 'ಹುರೇ ಸ್ಯಾಂಡೊ' ಅಂದು ಬಿಟ್ಟರು ಖಾವಂದ್."

ಪಟೇಲನು ಬಾಯಿ ಬಿಟ್ಟುಕೊಂಡು ಕೇಳುತ್ತಾ ಇದ್ದವನು ಕೇಳಿದ: "ಇದು ನಿನಗೆ ಹೇಗೆ ಗೊತ್ತು ಹಕೀಂ !"

"ಕ್ಯೊಂವ್ ಖಾವಂದ್! ನಮ್ಮ ಸೋದರಮಾವ ಕರೀಂಖಾನ್ರು ಹುಜೂರು ತಬೇಲೀಲೇ ಅಲ್ವಾ ಇರೋದು. ಅವರು ಆಗ ಜೊತೇಲೇ ಇದ್ದರು ಖಾವಂದ್ ! ಅವರ ಸ್ವಂತ ಬಾಯಿಂದ ಕೇಳಿದ್ದು ! ಈಗಲೂ ಹಾಗೇ ನಮ್ಮ ಖಾವಂದ್‌ರು ಈ ಬೆಳೀ ಜನ ನೋಡದೆ ಇದ್ದದ್ದೇ ತೋರಿಸಬೇಕು ಖಾವಂದ್ !"

ಪಟೇಲನಿಗೆ ಹಕೀಂನ ಮಾತು ಸರಿ ಎನ್ನಿಸಿತು. ಅವರಿಗೆ ನಜರ್ ಕೂಡ ಏನಾದಗೂ ಈ ರಾಜ್ಯದ ನೆನೆಪಿರೋ ಅಂಥಾದ್ದೇ ಒಪ್ಪಿಸಬೇಕು ಎನ್ನಿಸಿತು.

ಪಟೇಲನಿಗೆ ಸಂತೋಷವಾದರೆ ಅದರ ಗುರುತಾಗಿ ಏನಾದರೂ ಒಂದು ಕಾರ್ಯವಾಗಬೇಕು. ಸಂತೋಷ ಕಾರಣನಾದವನಿಗೆ ಏನಾದರೂ ಸಂಭಾವನೆ ಸಿಕ್ಕಲೇ ಬೇಕು. ಅದೇ ನಿಯಮ. ಆ ನಿಯಮಕ್ಕೆ ಇಂದೂ ಲೋಪಬರಲಿಲ್ಲ. ಅವನಾಡಿದ ಮಾತಲ್ಲೆಲ್ಲಾ ಒಂದು ಮಾತು ಪಟೇಲನಿಗೆ ಪೂರಾ ಹಿಡಿಯಿತು: ಅದು ಬಾಯಲ್ಲೂ ಬಂತು: ದೀರ್ಘವಾಗಿ ಯೋಚನೆಯಲ್ಲಿದ್ದವನಂತೆ, ವಜ್ರ ತೂಕಮಾಡುವ ವ್ಯಾಪಾರಿಯಂತೆ. ಅವನು ಹೇಳಿದನು: "ಹಾಗಂತೀಯಾ ! ಹಕೀಂ ! ನಮ್ಮೋರು ಈ ಬಳಿಯೋರಿಗಿಂತ ಹೆಚ್ಚು ಅಂತೀಯಾ ! ನಾವೇ ಹೆದರ್ಕೊಂಡು ಅವರ್ನ ತಲೇ ಮೇಲೆ ಕೂರಿಸಿಕೊಂಡಿದೀವಿ ಅಂತೀಯಾ ! ಆ !" ಎಂದು ಕೇಳಿದನು.

"ಹೌದು ಖಾವಂದ್ ! ಬರಾಬರ್ ಖಾವಂದ್ ! ರಾಣಿ ಮೊಮ್ಮಗನೂ ಅಲ್ಲೀಗೆ, ಲಂಡನ್ನಿಗೆ, ಹೋದ ಮೇಲೆ, 'ಅರರೇ, ಮಜ್ಜಿಗೇಹಳ್ಳಿ ಪಟೇಲ್ ಪುಟ್ಟಸಿದ್ದಪ್ಪನಾಯಕರು ಸುವರ್ಕು ಕೈಸೆ

ಮಾರಾ! ಹಹ್ಹಾ!' ಅಂತ ಬೆರಳು ಕಚ್ಚಿಕೋ ಬೇಡವಾ ಖಾವಂದ್!"

ಆ ಸ್ತುತಿ ತನ್ನ ಕೆಲಸವನ್ನು ಬಲು ಚೆನ್ನಾಗಿ ಮಾಡಿತು. ಹಕೀಂಸು ಯಾವೊತ್ತೋ ಒಂದು ದಿನ ಬೂಟಾಪೇಟ ಕಟ್ಟಬೇಕು ಅಂತ ಹೇಳಿಕೊಂಡಿದ್ದ ಅಹವಾಲು ಅವೊತ್ತು ಫಲವಾಯಿತು. ಸೊಗಸಾದ ಬಿಳೀ ಬೂಟಾಪೇಟ ಒಂದು ಖಾವಂದರಿಂದ ಅಪ್ಪಣೆಯಾಯಿತು.

ಹಕೀಂನು ಆನಂದದಲ್ಲಿ "ಹಂಗಾದರೆ ಸುಲ್ತಾನ್, ರಾಣಿ, ಇಬ್ಬರಿಗೂ ಹುಕುಂ ಆಯ್ತು ಖಾವಂದ್" ಎಂದನು.

ಪಟೇಲನು "ಹುಂ" ಎಂದನು.

೬

ಕಾರಾಪುರದ ಖೆಡ್ಡಾ ಕ್ಯಾಂಪು ಎಂದರೆ ಜಗತ್ಪ್ರಸಿದ್ಧವಾದುದು. ಆನೆಗಳ ಹಿಂಡನ್ನು ಅಟ್ಟಿಕೊಂಡು ಬಂದು ಒಂದು ಆವರಣದಲ್ಲಿ ಸೋಲಿಗರು ಸೇರಿಸುವರು. ಕಾಡಿನಲ್ಲಿ ಅಂಕೆಶಂಕೆಗಳಿಲ್ಲದೆ ನಿರಂಕುಶವಾಗಿ ಸ್ವೇಚ್ಛೆಯಾಗಿ ಬೆಳೆದ ಆನೆಗಳು ಮನುಷ್ಯನ ಬುದ್ಧಿಶಕ್ತಿಯೆನ್ನುವ ಬಲೆಗೆ ಸಿಕ್ಕಿ ತಪ್ಪಿಸಿಕೊಳ್ಳಲಾರದೆ ಬಂದು ಒಂದು ಖೆಡ್ಡಾದಲ್ಲಿ ಸೇರುವುವು. ಅದು ಒಂದು ವಿಚಿತ್ರವಾದ ವಿನೋದ.

ಸೋಲಿಗರು ಹಿಂಡುಗಳಿಗೆ ಗೊತ್ತಿಲ್ಲದಂತೆ ಮೊದಲು ಅದನ್ನು ಬಳಸುವರು. ಒಡೆದ ಬಿದಿರಿನ ತುಂಡುಗಳಿಂದ ಆ ವಿಕಾರವಾದ ಶಬ್ದವನ್ನು ಮಾಡುತ್ತಾ ಆ ಆನೆಗಳ ಮನಸ್ಸಿನಲ್ಲಿ ಅನಿರ್ದಿಷ್ಟವಾದ ಭಯವನ್ನು ಹುಟ್ಟಿಸಿ ಹಿಂಡಿಗೆ ಹಿಂಡೇ ಸ್ಥಳವನ್ನು ಬಿಟ್ಟು ಮುಂದೆ ಸರಿಯುವಂತೆ ಮಾಡುವರು. ಅಗು ಮುಂದೆ ಸರಿಯುವಾಗಲೂ ಅಲ್ಲಲ್ಲಿ ಗುರುತಿನ ಬೆಂಕಿಗಳನ್ನು ಹಾಕಿ, ಸನ್ನೆ ಹಾಕಿ, ರಥವು ಗೊತ್ತಾದ ಹಾದಿಯಲ್ಲಿಯೇ ನಡೆಯುವಂತೆ ಮಾಡುವ ಹಾಗೆ, ಹಿಂಡು ಗುರುತಾದ ಹಾದಿಯನ್ನೇ ಹಿಡಿದು ಹೋಗಿ ಗೊತ್ತಾದ ಆವರಣಕ್ಕೆ

ಹೋಗುವಂತೆ ಮಾಡುವರು. ಅಲ್ಲಿ ಆನೆಗಳೆಲ್ಲವೂ ಒಳ ಸೇರಿದ ಮೇಲೆ ಆ ಆವರಣದ ಬಾಗಿಲನ್ನು ಮುಚ್ಚುವರು – ಬಾಗಿಲೆಂದರೆ ಅದು ಊರಿನ ಬಾಗಿಲುಗಳಂತೆ ಅಲ್ಲ ! ಭಾರಿ ಭಾರಿ ಮರಗಳನ್ನು ಕಟ್ಟಿ ಮಾಡಿರುವ, ದೆವ್ವನಂತಹ ಬಾಗಿಲು. ಅದಕ್ಕೆ ಹಿಂದೆ, ಊರು ಗೋಲಾಗಿ ಕೊಟ್ಟಿರುವ ಮರವೊಂದೊಂದನ್ನೂ ಸರಿಯಾಗಿ ಗರಗಸ ಹಾಕಿಸಿದರೆ, ಭಾರಿಯ ತೊಲೆ ಎರಡು ನೂರಾದರೂ ಆದಾವು.

ಆ ಆವರಣದ ಸುತ್ತ ಭಾರಿಯ ಕಂದಕ. ಆ ಕಂದಕ ಇರುವ ಜಾಗವೇ ಖೆಡ್ಡಾ ! ಆನೆ ಇಳಿಯುವುದಕ್ಕೂ ಆಗದು ; ದಾಟುವುದಕ್ಕೂ ಆಗದು ಅಷ್ಟು ಭಾರಿ ಕಂದಕ. ಅಬ್ಬಾ ! ಆ ಆನೆಗಳು ಅದರಲ್ಲಿಯೂ ಗಂಡಾನೆಗಳು ತಾವು ಸೆರೆ ಸಿಕ್ಕಿದೆವು ಎಂದು ತಿಳಿದುಕೊಂಡು ಬಿಟ್ಟರೆ, ಅಲ್ಲಿಗೆ ಬಂದ ಮನುಷ್ಯರ ಮೊಕ ಕಂಡ ಕೂಡಲೇ ರೇಗಿ, ಅಷ್ಟಷ್ಟು ಗಾತ್ರದ ಕಲ್ಲುಗಳನ್ನು ಮನುಷ್ಯರ ಕಡೆಗೆ ಒದೆಯುತ್ತವೆ. ಆ ಭಾರಿಯ ಕಲ್ಲುಗಳು ಕೈಯಲ್ಲಿ ಗುರಿಯಿಟ್ಟು ಹೊಡೆದುದಕ್ಕಿಂತ ಹೆಚ್ಚಾಗಿ ರೊಯ್ಯನೆ ಬರುತ್ತವೆ. ಅವಕ್ಕೆ ಸಿಕ್ಕಿದ ಮರಗಳು, ಹೆಮ್ಮರಗಳು ಮುರಿದು ರೊಪ್ಪನೆ ಬೀಳುತ್ತವೆಂದ ಮೇಲೆ, ಆ ಕಲ್ಲಿನೇಟಿಗೆ ಮನುಷ್ಯ ಸಿಕ್ಕಿದರೆ, ಹೇಳಬೇಕಾದುದೇ ಇಲ್ಲ. ಆದರೆ ಆ ಮನುಷ್ಯರು ಏಟಿಗೆ ಸಿಕ್ಕುವುದಿಲ್ಲ.

ಖೆಡ್ಡಾದಲ್ಲಿ ಬೇಕಾದ ಹಾಗೆ ಹಸುರು ಇರುತ್ತದೆ. ಆದರೆ ಆನೆಗಳಿಗೆ ಸೆರೆ ಸಿಕ್ಕಿದೆವೆಂದು ಗೊತ್ತಾದ ಕೂಡಲೇ ಅವಕ್ಕೆ ಆಹಾರ ನೀರು ಯಾವುದೂ ಬೇಕಾಗುವುದಿಲ್ಲ. ಘೀ ಎಂದು ಕೂಗುತ್ತ ತಪ್ಪಿಸಿ ಕೊಳ್ಳುವುದಕ್ಕೆ ಹಾದಿಯನ್ನು ಹುಡುಕುತ್ತ ತಿರುಗುತ್ತವೆ. ಕೆಲವು ಕೊಂಬಿನಿಂದ ತಿವಿದು ಮಣ್ಣೆತ್ತಿ ಹಳ್ಳ ತುಂಬಿ ಹೊರಟು ಹೋಗಲು ಯತ್ನಿಸುತ್ತವೆ. ಅವು ಹಾಗೆ ಮಾಡದಂತೆ ಬಿದಿರಿನ ಅಂಡೆ ಅಲ್ಲಾಡಿಸುತ್ತಾ ಕಾವಲು ಕಾಯುತ್ತಾ ಜನರು ಕುಳಿತಿರುತ್ತಾರೆ. ಹೀಗೆ ಎಂಟು ಹತ್ತು ದಿನ ಅವು ಹೆಣ್ಣು, ಗಂಡು, ಮರಿ ಎಲ್ಲವೂ ಸೊರಗಿ, ಹೆದರಿ, ನಿಸ್ತೇಜವಾದ ಮೇಲೆ, ಕುಂಕಿ ಆನೆಗಳನ್ನು ತೆಗೆದುಕೊಂಡು ಹೋಗಿ, ಒಂದೊಂದನ್ನೂ ಬೇರೆ ಮಾಡಿ ಅವುಗಳಿಗೆ ಹಗ್ಗ ಹಾಕಿ ಕಟ್ಟುತ್ತಾರೆ. ಹಾಗೆ ಗುಂಪಿನಿಂದ ಒಂದೊಂದನ್ನೂ ಬೇರ್ಪಡಿಸಿ, ಹಗ್ಗ

ಹಾಕಿ ಕಟ್ಟುವುದೇ ಪ್ರಸಿದ್ಧವಾದ ಖೆಡ್ಡಾ ಆಪರೇರ್ಷ.

ಬಹುಶಃ ಮೈಸೂರಲ್ಲಿ ಈ ಖೆಡ್ಡಾ ಆಪರೇರ್ಷ ನಡೆಯುವುದಕ್ಕೂ ಒಂದು ವಿಚಿತ್ರ ಕಾರಣವಿತ್ತೇನೋ ? ಮೈಸೂರಿನ ಹುಲಿ ಟಿಪ್ಪುಸುಲ್ತಾನನು ಸೋತು ಅಥವ ಸತ್ತ ಮೇಲೆ ಬ್ರಿಟಿಷರ ರಾಜ್ಯ ಇಂಡಿಯದಲ್ಲಿ ಸ್ಥಿರವಾದುದು. ಅದಕ್ಕೇ ಏನೋ ಇಲ್ಲಿ ಅದ್ಭುತ ದೇಹ ಬಲ ಸಂಪನ್ನವಾದ, ಮೃಗಗಳಲ್ಲೆಲ್ಲಾ ಸೂಕ್ಷ್ಮಬುದ್ಧಿಗೆ ಹೆಸರಾದ ಗಜ ರಾಜನನ್ನು ಯಃಕಶ್ಚಿತ್ ಮನುಷ್ಯ ಹಿಡಿದು ಪಗ್ಗದಲ್ಲಿ ಕಟ್ಟಿಹಾಕುವ ದೃಶ್ಯವನ್ನು ಮೈಸೂರು ತೋರಿಸುತ್ತಿದ್ದುದು ! ನೀವೂ ಹೀಗೇ ಭಾರಿಯ ಇಂಡಿಯವನ್ನು ಕಟ್ಟಿಹಾಕಿದಿರಿ ಎಂದು ಭಾರತಮಾತೆಯು ಮಹಾ ರಾಣಿಯ ಮೊಮ್ಮಗನಿಗೆ ತನ್ನ ದುಃಖವನ್ನು ಆನೆಗಳ ಗೋಳಾಗಿ ಹೇಳಿ ಕೊಳ್ಳುತ್ತಿದ್ದಳೇನೋ ?

ಆನೆಯ ಪ್ರತಾಪವನ್ನು ನೋಡಬೇಕೆನ್ನುವವರು ಖೆಡ್ಡಾ ನೋಡಿ ಬರಬೇಕು. ಪಳಗಿ, ಸಿಂಗಾರ ಮಾಡಿಸಿಕೊಂಡು ಅಂಬಾರಿ ಹೊತ್ತು ಹೋಗುವುದರಿಂದ ಹಿಡಿದು, ಸರ್ಕಸ್ಸಿನಲ್ಲಿ ಹೇಳಿದ ಹಾಗೆ ದೇಹ ಬಗ್ಗಿಸಿಕೊಂಡು ಕುಣಿಯುವ ಆನೆಯನ್ನು ನೋಡಿದರೆ ಏನಿದೆ? ಗುಂಪಿನಿಂದ ಬೇರ್ಪಡಿಸಿ, ಎಳೆ ತಂದು, ಸ್ಟಾಕೇಡಿನಲ್ಲಿ ಸೇರಿಸುತ್ತಾರೆ. ದಪ್ಪದಪ್ಪ ದಿಮ್ಮಿಗಳನ್ನು ಆಳಾಳುದ್ದ ಅಗೆದು ಮೊಳಕ್ಕೊಂದರಂತೆ ಹೂಳಿ, ಅದರ ಮೇಲೆ ಅಟ್ಟವನ್ನು ಕಟ್ಟಿರುತ್ತಾರೆ. ಆನೆಗಳನ್ನು ಅಲ್ಲಿಗೆ ತಂದು ಅಕ್ಕಪಕ್ಕದಲ್ಲಿ ಪಳಗಿದ ಆನೆ ಕುಂಕಿ ಕೊಡುತ್ತಾರೆ. ಅವು ಆನೆಯ ಸೊಂಡಿಲಿಗೆ ಸೊಂಡಿಲು ಸೇರಿಸಿ, ಮೈಗೆ ಮೈಗೆ ಒತ್ತಿಕೊಂಡು 'ವೈಸ್'ನಲ್ಲಿ ಹಿಡಿದುಕೊಂಡಹಾಗೆ ಮಾಡಿಕೊಂಡು ನಿಲ್ಲುತ್ತವೆ. ಮನುಷ್ಯನು ಹಿಂದಿನಿಂದ ಹೋಗಿ ನೂಲುಹಗ್ಗ ಕಾಲಿಗೆ ಹಾಕಿ ಎಳೆದು ದಿಮ್ಮಿಗಳಿಗೆ ಕಟ್ಟುತ್ತಾನೆ. ಕುಂಕಿ ಆನೆ ಮುಂದೆ ಸಾಗುತ್ತಲೂ, ಆ ಆನೆಯು ರೇಗಿ ಆರ್ಭಟಿಸುತ್ತಾ ಮುಂಗಾಲೂರಿ, ತನ್ನ ಕಾಲಿನ ಕಟ್ಟನ್ನು ಕೀಳುವುದಕ್ಕೆ ಯತ್ನಿಸುತ್ತದೆ. ಆಗ, ಆ ಭಾರಿಯ ದಿಮ್ಮಿಗಳು ನಡುಗುತ್ತವೆ. ಅಟ್ಟಣೆಯು ಅಳ್ಳಾಡಿ ಹೋಗುತ್ತದೆ. ಮೇಲಿರುವ ಜನ ಕಟ್ಟಿ ಹಾಕಿರುವ ಆನೆಯನ್ನೇ ಮೃತ್ಯುವೆಂದು ಕೊಂಡು ಹೆದರಿ ಕಿರಿಚಿ

ಕೊಂಡು ಅಲ್ಲಿಂದ ಹಾರಿ ಓಡಿ ಹೋಗುವವರೆಗೂ ಆಗುತ್ತದೆ. ಬಹುಶಃ ಬ್ರಿಟಿಷರ ಕೈಗೆ ಸಿಕ್ಕಿ ಯತ್ನವಿಲ್ಲದೆ ಒದ್ದಾಡುತ್ತಿದ್ದ ಭಾರತದ ಹೃದಯವು ಹಾಗೆಯೇ ಒದ್ದಾಡುತ್ತಿತ್ತೇನೋ? ಆದರೆ ಆಗ ಬ್ರಿಟಿಷರಿಗೆ ಬೇಕಾದ ಕುಂಕಿ ಆನೆಗಳು ಬೇಕಾದಹಾಗೆ ಇದ್ದುವು. ಬ್ರಿಟಿಷರಿಗೆ ಆಗಾಗ ಭಾರತದ ಹೃದಯದ ನೋವಿನ ಕೂಗು ಕಿವಿಯು ಬಿರಿಯುವಂತೆ ಕೇಳಿಸುತ್ತಿತ್ತು. ಬಂಗಾಲವನ್ನೊಡೆದಾಗ ಕೂಗಿದ ಕೂಗು ಕರ್ಜನ್ನನನ್ನೂ ಕೆರಳಿಸಿದರೂ ಹೆದರಿಸಿತು. ಅದಕ್ಕಾಗಿಯೇ ಅವರು ತಮ್ಮ ಕುಂಕಿ ಆನೆಗಳು ಹೆಚ್ಚಲಾಗಲೆಂದು ಹಿಂದೂ ಮುಸ್ಲಿಂ ಭೇದ ತಂದೊಡ್ಡಿದರು. ಆಗಿನ ವೈಸರಾಯ್, 'ಎಷ್ಟಾಗಲಿ ಮುಸ್ಲಿಂರು ನಮ್ಮ ಹಿಂದೆ ರಾಜ್ಯವಾಳುತ್ತಿದ್ದವರು. ಅವರಿಗೆ favourite wife treatment, ಮೋಹದ ಮಡದಿಯ ಮಮತೆ ಸಲ್ಲಬೇಕು' ಎಂದು ವಿಷಬೀಜವನ್ನು ನೆಟ್ಟನು. ಮುಂದೆ ನಲವತ್ತು ವರ್ಷದಮೇಲೆ ಅದು ಪಾಕಿಸ್ತಾನನೆಂಬ ವಿಷಫಲವನ್ನೂ ಕೊಟ್ಟಿತು.

ಪ್ರಿನ್ಸ್ ಆಫ್ ವೇಲ್ಸ್‌ನು ಪತ್ನೀಸಮೇತನಾಗಿ ಮೈಸೂರಿಗೆ ಬಂದನು. ದಿವಾನರು ಬೆಂಗಳೂರಲ್ಲಿ ಸಂಧಿಸಿ ರಾಜಧಾನಿಗೆ ಕರೆ ತಂದರು. ಮಹಾರಾಜರು ಅವರನ್ನು ರೈಲ್ವೆಸ್ಟೇಷನಲ್ಲಿ ಎದುರುಗೊಂಡು ರೆಸಿಡೆನ್ಸಿಯಲ್ಲಿ ಇಳಿಸಿದರು. ಭೇಟಿ ಮರುಭೇಟಿಗಳಾದುವು. ರೆಸಿಡೆಂಟರ ಸಮ್ಮುಖದಲ್ಲಿ ಮೈಸೂರಿನಲ್ಲಿ ಗಣ್ಯರಾದವರ ಪರಿಚಯವೂ ಆಯಿತು. ರಾಜಧಾನಿಯಲ್ಲಿ ದೀಪೋತ್ಸವವು ನಡೆಯಿತು. ಸುತ್ತಮುತ್ತಲಿಂದ ಜನಗಳು ಬೇಕಾದಹಾಗೆ ಬಂದರು. ಪ್ರಿನ್ಸ್‌ನನ್ನು ನೋಡುವುದಕ್ಕೆ ಬಂದವರು ರಾಜಧಾನಿಯಲ್ಲಿ ನಿಲ್ಲುವುದಕ್ಕೆ ಎಡೆಯಿಲ್ಲ ಎನ್ನುವ ಮಟ್ಟಿಗೆ ಆಯಿತು. ಭಾನುವಾರ ಬೆಳಿಗ್ಗೆ ಮಹಾರಾಜರು ಅತಿಥಿಗಳೊಡನೆ ಕಾರಾಪುರದ ಕ್ಯಾಂಪಿಗೆ ಬಂದರು. ನಾಯಕನು ಒಂದು ದಿವಸ ಮುಂಚಿತವಾಗಿ ಅಲ್ಲಿಗೆ ಬಂದಿದ್ದನು.

ಮಹಾರಾಜರು ಅತಿಥಿಗಳೊಡನಿರುವಾಗ ಡೆಪ್ಯುಟೀಕಮೀಷನರು ನಾಯಕನನ್ನು ಕರೆತಂದರು. ನಾಯಕನು ಆರಡಿಯ ಮನುಷ್ಯ. ಎತ್ತರಕ್ಕೆ ತಕ್ಕ ದಪ್ಪವೂ ಸೇರಿ ನಡೆಯುತ್ತಿದ್ದರೆ ನೆಲ ಜಗ್ಗುವುದು

ಎನ್ನುವಹಾಗಿದೆ. ಮೊದಲೇ ಪರಿಚಯ ಪತ್ರಿಕೆಯು ನಾಯಕನ ವಿಷಯವನ್ನೆಲ್ಲ ಪ್ರಿನ್ಸ್‌ಗೆ ತಿಳಿಸಿತ್ತು. ನಾಯಕನು ಚಿನ್ನದಲ್ಲಿ ಮಾಡಿದ್ದ ಅಂಬಾರಿಯ ಆನೆಯನ್ನು ಕಾಣಿಕೆಯಾಗಿ ಒಪ್ಪಿಸಿದನು. ಅದು ಸುಮಾರು ಐದು ಸೇರು ತೂಕ ಒಂದು ಅಡಿಯ ಎತ್ತರವಿತ್ತು. ಆ ರತ್ನ ಖಚಿತವಾದ ಗೌಶ್, ಆಭರಣಗಳು, ಅಂಬಾರಿ, ಎಲ್ಲವೂ ಸೇರಿ ಆಗಿನ ಬೆಲೆ ಸುಮಾರು ಐದುಸಾವಿರ ರೂಪಾಯಿ. ಎಲ್ಲಕ್ಕಿಂತ ವಿಚಿತ್ರ ವಾಗಿದ್ದುದು ಆ ಆನೆಯ ಹಣೆಯ ಮೇಲೆ ಕೆತ್ತಿದ್ದ ಸುಮಾರು ಅವರೆಯಕಾಳು ದಪ್ಪದ ಕೆಂಪು.

ಪ್ರಿನ್ಸ್ ಆ ಆನೆಯನ್ನು ತೆಗೆದುಕೊಳ್ಳಲು ಎರಡು ಕೈಗಳನ್ನೂ ನೀಡಬೇಕಾಯಿತು. ಅದನ್ನು ಹಿಡಿದುಕೊಂಡು ಹಿಂದು ಮುಂದೆ ನೋಡುತ್ತ, ಅದರ ಅಂದವನ್ನು ಒಪ್ಪಿಕೊಳ್ಳುತ್ತ, ಅದರ ಹಣೆಯಲ್ಲಿರುವ ಕೆಂಪುಕಲ್ಲು ನೋಡಿ ಬಹಳ ಸಂತೋಷಪಟ್ಟು "ಇದು ಗ್ರೇಟ್ ಕಾರ್ಬಂಕಲ್ ಅಲ್ಲವೆ?" ಎಂದರು. ಎಲ್ಲರೂ ನಕ್ಕರು. ಪ್ರಿನ್ಸ್ ತನ್ನ ಸಂತೋಷವನ್ನು ತೋರಿಸುವುದಕ್ಕೆ ನಾಯಕನ ಕೈ ಹಿಡಿದು ಕುಲುಕಿದನು. "ನೀವು ಬಹಳ ದೊಡ್ಡ ಷಿಕಾರಿದಾರರಂತೆ. ನಿಮ್ಮ ಹಂದಿಯ ಬೇಟೆ ಬಲು ಸೊಗಸಂತೆ! ನಾವು ಅದನ್ನು ನೋಡುವುದು ಯಾವಾಗ?" ಎಂದು ಕೇಳಿದನು.

ನಾಯಕನು "ಹುಜೂರು ಅಪ್ಪಣೆಯಾದಾಗ?" ಎಂದು ಮಹಾರಾಜರ ಮುಖವನ್ನು ನೋಡಿದನು. ಅವರು ಡೆಪ್ಯುಟಿಕಮೀಷನರ ಮುಖವನ್ನು ನೋಡಿದರು. ಆತನು "ಮೊದಲ ಎರಡು ದಿವಸ ಅಂದರೆ ನಾಳೆ ನಾಡಿದ್ದು ಆನೆ ಕಟ್ಟುವುದು. ಆಮೇಲೆ ಭಾರಿಯ ಷಿಕಾರಿಗೆ. ಇಂದಿಗೆ ಐದನೆಯ ದಿನ ಎಂದರೆ ಗುರುವಾರ ಇವರ ಷಿಕಾರಿ ನೋಡುವುದು" ಎಂದನು.

ಮಹಾರಾಜರು "ಬುಧವಾರ ಇವರದಾಗಲಿ. ಬೃಹಸ್ಪತಿವಾರ ಷಿಕಾರಿ ಅನ್ನಿ" ಅಂದರು. ಅದರಂತೆಯೇ ಗೊತ್ತಾಯಿತು.

ಅಂದಿನ ಸಂಜೆ ಅರ್ಧಗಂಟೆಯ ಹೊತ್ತು ಏಕಾಂತವಾಗಿ ತತ್ವಗಳನ್ನು ಹೇಳುವುದು ಎಂದು ಗೊತ್ತಾಯಿತು.

ಆ ದಿನ ಮಹಾರಾಜರು ಸಪತ್ನೀಕನಾದ ಅತಿಥಿಯನ್ನು ಕರೆದು ಕೊಂಡು ಅರಣ್ಯ ಸೌಂದರ್ಯವನ್ನು ನೋಡಲು ಹೋದರು. ಒಂದೇ ಸಮನಾಗಿ ನಾಟಿಹಾಕಿ ಬೆಳೆಸಿರುವ, ಗಗನಚುಂಬಿಯಾಗಿ ಬೆಳೆದಿರುವ ತೇಗದ ಗಿಡಗಳು, ಅತಿಥಿಗೆ ಬಹಳ ಮೆಚ್ಚಿಗೆಯಾಯಿತು. ಅಲ್ಲಿ ಎತ್ತ ತಿರುಗಿದರೂ ಹೂವು ಹಸುರು. ಅಲ್ಲಿ ಪ್ರಿನ್ಸೆಸ್ ಕೋರಿಕೆಯಂತೆ ಕುರುಬರ ಹಾಡಿಗೆ ಹೋದರು. ಕಪ್ಪಗೆ ಗುಂಡು ಗುಂಡುಗೆ ಇರುವ ಆ ಕುರುಬರ ದೇಹಸೌಷ್ಟವನ್ನು ನೋಡಿ ಅತಿಥಿಗಳಿಗೆ ಆಶ್ಚರ್ಯವಾಯಿತು. ಆ ಕಾಡಿನಲ್ಲಿ ಎಲೆಗಳುದುರಿ ಕಷಾಯ ವಾಗಿರುವ ನೀರನ್ನು ಕುಡಿದು, ಕೊಳೆತ ಎಲೆಗಳ ನಾತ ತುಂಬಿರುವ ಗಾಳಿಯನ್ನು ಸೇವಿಸುತ್ತ, ಸಿಕ್ಕಿದ ಆಹಾರದಿಂದ ಹೊಟ್ಟೆ ತುಂಬಿ ಕೊಂಡು, ಅರೆಬಟ್ಟೆಯನ್ನು ಉಟ್ಟು ಬಾಳುವ ಆ ಕುರುಬರ ಆರೋಗ್ಯ ಭಾಗ್ಯವನ್ನು ಕಂಡು ಆಶ್ಚರ್ಯಪಡದಿರಲೆಂತು? ಪ್ರಿನ್ಸೆಸ್‌ಗೆ ಅವರ ಮಕ್ಕಳನ್ನು ಎತ್ತಿಕೊಳ್ಳಬೇಕೆಂದು ಆಸೆ. ಗರ್ವ ಗಂಧಿತನವಿಲ್ಲದಿದ್ದರೆ, ಆಕೆಯು ಅವರ ಮನೆಯೊಳಕ್ಕೆ ಹೋಗಿ ಅವರ ಅಡುಗೆಯ ರುಚಿಯನ್ನೂ ನೋಡುತ್ತಿದ್ದಳೋ ಏನೋ? ಆದರೆ ಪದವಿಯ ಬಿಂಕ ಅದಕ್ಕೆಲ್ಲ ಅವಕಾಶ ಕೊಡುವುದೇನು? ಬೆಟ್ಟದಾಕೋಡಲ್ಲಿ ಮನೆ ಕಟ್ಟದರೆ, ಗಾಳಿಯ ಏಟನ್ನು ತಡೆಯಲೇ ಬೇಕು. ಕಡಲ ಮಗ್ಗುಲಲ್ಲಿ ಮನೆ ಕಟ್ಟಿದವನು, ಮೊರೆತವನ್ನು ಸಹಿಸಬೇಕು.

ಕುರುಬರು ಅತಿಥಿಗಳ ಗೌರವಾರ್ಥವಾಗಿ ಒಂದು ಕುಣಿತ ಕುಣಿದರು. ಅಂಡೆಯಲ್ಲಿ ತುಂಬಿಟ್ಟಿದ್ದ ಕಿರಿಜೇನು ತಂದುಕೊಟ್ಟರು. ತಾವು ತಿನ್ನುವ ತೊಡೆಯಗಾತ್ರದ ಹೆಗ್ಗಣಸು ಕಾಣಿಕೆಮಾಡಿದರು. ಅತಿಥಿಗಳು ಅವರಿಗೆ ಕಂಬಳಿ, ದುಪ್ಪಟಿ, ಸೀರೆಗಳನ್ನು ಕೊಟ್ಟು, ಅವರು ಮಾಡಿದ ನಮಸ್ಕಾರಗಳನ್ನು ಒಪ್ಪಿಸಿಕೊಂಡು ಹಿಂತಿರುಗಿದರು.

ಅಂದು ಕುರುಬರಿಗೆ ಎಂದೂ ಇಲ್ಲದ ಸಂತೋಷ ರಾಣಿ ಯಾರೋ ಅವರು ಕಾಣರು. ಚಕ್ರವರ್ತಿಯನ್ನು ಅಷ್ಟಕ್ಕೂ ಕಾಣರು. ಆದರೂ ಅವರಿಗೆ ಸಂಭ್ರಮ. ಅವರ ಕಣ್ಣಲ್ಲಿ ತಮ್ಮನ್ನು ನೋಡುವು ದಕ್ಕೆ ಬಂದಿದ್ದವರು ಮನುಷ್ಯಮಾತ್ರದವರಲ್ಲ. ಯಾರೋ ಮೇಲಿನಿಂದ

ಇಳಿದು ಬಂದಿದ್ದ ದೇವತೆಗಳು. ಸಾಲದೆ, ಅವರ ಬಣ್ಣ ಅರ್ಥವೊಂಕು ಹಿಡಿಸಿತ್ತು. ತಮ್ಮ ಮೈಬಣ್ಣ ನೋಡಿಕೊಂಡು ಅವರನ್ನು ನೋಡಿದರೆ, ತಾವು ಆನೆಯ ಬಣ್ಣವಾದರೆ ಅವರು ದಂತದ ಬಣ್ಣ ; ತಾವು ಅಮಾವಾಸ್ಯೆಯಾದರೆ ಅವರು ಹುಣ್ಣಿಮೆ.

ಪಾಪ ! ಆ ಕಾಡು ಕುರುಬರು ಬೆರೆತುಹೋದುದು ಏನು ಅತಿಶಯ ! ಮಹಾ ಮಹಾ ವಿದ್ವಾಂಸರೂ ಕೂಡ ಬ್ರಿಟಿಷರನ್ನು ದೇವತೆಗಳಿಗೆ ಹೋಲಿಸಿ ಹಾಡಿ ಹೊಗಳಿ ದಣಿಸಿರಲಿಲ್ಲವೇನು ? ತಪಸ್ವಿಗಳಾದ ಅವರೆಲ್ಲರ ಆಶೀರ್ವಾದ ಇದ್ದುದರಿಂದಲೇ ಏನೋ ಇಂಡಿಯಕ್ಕೆ ಸ್ವರಾಜ್ಯ ಬರುವುದು, ಇಲ್ಲಿ ಸ್ವಾತಂತ್ರ್ಯೋದಯವಾದುದು, ಅಷ್ಟು ತಡವಾದುದು. ಬಹುಶಃ ಅವರು ಹೊರಟುಹೋದಮೇಲೂ, ಕೆಲವರೇನು ? ಎಷ್ಟೋ ಜನ, ಸ್ವರ್ಗಸ್ಥನಾದ ಪತಿಯನ್ನು ನೆನೆಸಿಕೊಂಡು ಅಳುವ ಪತಿವ್ರತೆಯಂತೆ ಅಳುತ್ತಿಲ್ಲವೆ ?

ಅತಿಥಿಗಳಿಗೆ ಆ ಊಟ ಉಪಚಾರ ! ಎಲ್ಲೂ ನಡೆಯದ ವೈಭವದಿಂದ ನಡೆಯಿತು. ಸಂಜೆ ಐದುಗಂಟೆಯಾಯಿತು. ಅವರ ಮುಂದೆ ಮಲ್ಲಿಯ ತತ್ವಗಳ ಹಾಡುವಿಕೆ. ಮಲ್ಲಣ್ಣನು ನಡುಗಟ್ಟಿಕೊಂಡು ಈಶ್ವರನ ಸಭೆಯಲ್ಲಿ ಇರಬೇಕಾದಷ್ಟು ಭಯಭಕ್ತಿಗಳಿಂದ ಬಂದು ನಿಂತಿದ್ದಾನೆ. ನಾಯಕನು ನಡುಗಟ್ಟಿಕೊಂಡಿದ್ದರೂ ದರ್ಪದಿಂದ ನಿಂತಿದ್ದಾನೆ. ಮಗು ಮಲ್ಲಿ ಮಾತ್ರ ಗಾಬರಿ ಭಯ ಏನೂಇಲ್ಲದೆ, ಹಣೆತುಂಬ ಇಟ್ಟುಕೊಂಡಿರುವ ವಿಭೂತಿಯು ಮುಖಕ್ಕೆ ಅಪೂರ್ವವಾದ ಕಾಂತಿಯೊಂದನ್ನು ಬೀರುತ್ತಿರಲು, ಆ ಕಲಾಪತ್ತಿನ ಕಿರುಗೆಯನ್ನುಟ್ಟು, ಕಲಾಪತ್ತಿನ ರವಿಕೆ ತೊಟ್ಟು ನಿಂತಿದ್ದಾಳೆ. ನಾಯಕನ ಅರಮನೆಯ ಬಾಲತೊಡುಗೆಯ ಆಭರಣಗಳೆಲ್ಲ ಅವಳನ್ನು ಅಲಂಕರಿಸಿವೆ. ಬೆರಳು ಬೆರಳಿಗೂ ಸಣ್ಣಸಣ್ಣ ಹರಳಿನ ಉಂಗುರಗಳು. ಆ ಉಂಗುರಗಳು ಜಾರಿಬೀಳದಂತೆ ಸಣ್ಣ ಮುತ್ತಿನ ಸರಗಳು. ಆ ಸರಗಳನ್ನೆಲ್ಲ ಹಿಡಿದುಕೊಂಡಿರುವ ಒಂದು ಸಣ್ಣ ಪದಕ. ಅದರಮೇಲೆ ಮುಂಗೈಯಲ್ಲಿರುವ ರತ್ನಖಚಿತವಾದ ಪಟ್ಟಿಕಡಗ. ಅದರಮೇಲೆ ಮುದ್ದಾದ ಪೌಂಚಿ. ಅದರಮೇಲೆ ಸಿಂಹಲಲಾಟದ ಕಡಿಯ. ತೋಳಿಗೆ ಬಾಜೂ ಬಂದು.

ಕತ್ತಿನಲ್ಲಿ ಅಡ್ಡಿಕೆ, ಅಸಲಿ, ಬಂದಿ, ಜೋಮಾಲೆ, ಏಕಾವಳಿಸರ, ಹನುಮನ ತಾಳಿ, ಹುಲಿಯುಗುರು. ನಡುವಿಗೆ ನಾಗರಹೆಡೆಯ ಚಿನ್ನದ ಡಾಬು, ಬೈತಲೆಗೆ ಬೈತಲೆಯ ಬಟ್ಟು. ತಲೆಯಮೇಲೆ, ಮಲಕು: ಸೊಗಸಾಗಿ ಕಟ್ಟಿರುವ ತುರುಬಿಗೆ ಒಂದು ಜಡೆಬಿಲ್ಲೆ : ಹೂವಿನ ಕುಚ್ಚುಗಳು. ಕಿವಿಗೆ ಓಲೆ, ಚಳತುಂಬು, ಬುಗುಡಿ. ಕಾಲಿಗೆ ಗಗ್ಗರ, ಪಿಲ್ಲಿ, ಸರಪಳಿ. ಮಲ್ಲಿಯು ಚಿನಿವಾರರ ಅಂಗಡಿಯ ಬೊಂಬೆಯಾಗಿದ್ದಾಳೆ.

ಪ್ರಿನ್ಸೆಸ್ ಅದನ್ನು ನೋಡಿ ಆಶ್ಚರ್ಯಚಕಿತಳಾದಳು. ಮಗ್ಗುಲಲ್ಲಿದ್ದ ಮಹಾರಾಜರನ್ನು, "ನಿಮ್ಮ ದೇಶದಲ್ಲಿ ಮಕ್ಕಳಿಗೆ ಇಷ್ಟು ರತ್ನಾಭರಣಗಳನ್ನು ಅಲಂಕರಿಸುವಿರಾ?" ಎಂದು ಕೇಳಿದಳು: ಅವರು "ಇನ್ನೊಂದೆರಡು ಮೂರು ಬಿಟ್ಟುಹೋಗಿದೆ" ಎಂದರು.

"ಹಾಗೆಯೇ? ಅವಳನ್ನು ಹತ್ತಿರ ಕರೆದು ಅದನ್ನೆಲ್ಲಾ ನೋಡಬೇಕಲ್ಲಾ!"

"ಆಗಬಹುದು ಈ ಹಾಡುಗಳಾಗಲಿ."

ಮಲ್ಲಿಯು ಹಾಡು ಆರಂಭವಾಯಿತು. ಏಕನಾದವನ್ನು ಶುದ್ಧವಾಗಿ ಬಾರಿಸಿಕೊಳ್ಳುತ್ತಾ, ಅದರ ನಾದಕ್ಕೆ ತಕ್ಕಂತೆ ಹೊಂದಿಕೊಂಡು ತತ್ವಗಳನ್ನು ಮುದ್ದಾಗಿ ಹಾಡಿದಳು.

"ಅನುದಿನ ಎನ್ನೊಳಿದ್ದು, ಎನಗೊಂದುಮಾತ।
ಹೇಳದೆ ಪೋದೆಯಾ ಹಂಸ ॥ಪ॥
ಕೆರೆಯ ನೀರನು ಏರಿ। ತಡೆದುಕೊಂಡಿದ್ದಂತೆ।
ನಾ ನಿನ್ನ ತಡೆದುಕೊಂಡಿದ್ದೆನಲ್ಲಾ! ॥ಹಂಸ॥
ಅಟ್ಟಬೆಟ್ಟದ ನಡುವೆ ಇಟ್ಟೆಡೆಮೆಳೆಯೊಳು ಜೇನು।
ಕಟ್ಟಿತು ತನ್ನ ಸುಖಕಾಗಿ ॥
ತಟ್ಟಾನೆ ತಾನೆದ್ದು ಜೇನುಂಡು ಹೋಗುವಾಗ ಹುಳತನ್ನ।
ಅಟ್ಟಿಗೆ ಹೇಳಿ ಹೋಯಿತೆ ಒಂದು ಮಾತ॥—

ಜನಪದಗೀತಿಕೆಯ ರಾಗದಲ್ಲಿ ಗಂಭೀರವಾಗಿ ಹಾಡುತ್ತಿರುವ ಮಗುವಿನ ಸಂಗೀತವು ಅತಿಥಿಗಳಿಗೆ ಅರಮನೆಯ ಭಾರಿ ಸಂಗೀತಗಾರರ ಸಂಗೀತಕ್ಕಿಂತ ಚೆನ್ನಾಗಿ ಹಿಡಿಸಿತು. ತಮ್ಮ ಜೊತೆಯಲ್ಲಿ ಬಂದಿದ್ದ

ಸಂಗೀತಗಾರನನ್ನು ಕರೆದು ಇದರ ನೊಟೇಷನ್ ಬರೆದುಕೊ ಎಂದು ಹೇಳಿ, ಪ್ರಿನ್ಸ್‌ನು ಮಹಾರಾಜರನ್ನು "ಇದರ ಅರ್ಥವೇನು?" ಎಂದು ಕೇಳಿದನು. ಅವರು "ಇದು ವೇದಾಂತ! ಜೀವಕ್ಕೂ ದೇಹಕ್ಕೂ ನಡೆದ ಸಂಭಾಷಣೆ" ಎಂದರು.

ಹಾಗೆಯೇ ಆತನು, "ಇಂಡಿಯದ ಹಳ್ಳಿ ಹಳ್ಳಿಯಲ್ಲೂ ಇಂತಹ ವೇದಾಂತದ ಹಾಡುಗಳನ್ನು ಹಾಡುವ ಜನರಿದ್ದಾರೆ. ಅವರು ನಿರಾಶ್ರಯರಾಗಿ ತಿರುಗಿಕೊಂಡಿರುತ್ತಾರೆ." ಎಂದು ತಿಳಿದು, "ಹಾಗಿದ್ದರೆ ನಿಮ್ಮ ಜನದ ವಿಚಾರವಾಗಿ ಪ್ರೊಫೆಸರ್ ಮ್ಯಾಕ್ಸ್ ಮುಲ್ಲರು ಹೇಳಿರುವುದು ನಿಜ. ನೀವೆಲ್ಲ ವೇದಾಂತಿಗಳು?" ಎಂದು ಅಭಿನಂದನ ಮಾಡಿದನು.

ಮಲ್ಲಿಯ ಕಚೇರಿ ಅರ್ಧಗಂಟೆಯಾಯಿತು. ಅದಾದ ಮೇಲೆ ಪ್ರಿನ್ಸೆಸ್‌ಳು ಆ ಮಗುವನ್ನು ಹತ್ತಿರ ಕರೆದು ಕೂರಿಸಿಕೊಂಡು ಅವಳ ಮೈ ಮೇಲಿದ್ದ ಒಂದೊಂದು ಒಡವೆಯನ್ನೂ ಮುಟ್ಟಿ ಮುಟ್ಟಿ ನೋಡಿ, ಅದರ ಹೆಸರು ಕೇಳಿ ತಿಳಿದುಕೊಂಡು, ಅದನ್ನು ಹಾಕಿ ತೆಗೆಯುವ ವಿಧಾನವನ್ನೂ ಅರಿತುಕೊಂಡು ಬಹಳ ಸಂತೋಷಪಟ್ಟಳು. ಅವಳು ಗಂಡನ ಕಿವಿಯಲ್ಲಿ "ನಮ್ಮಲ್ಲಿ ಇಷ್ಟು ನಾಜೋಕಾದ ಒಡವೆಗಳಿಲ್ಲ: ಇಷ್ಟು ಜಾತಿಯೂ ಇಲ್ಲ." ಎಂದಳು.

ಕೊನೆಗೆ ಅವರು ಅಲ್ಲಿರುವವರೆಗೂ ತಪ್ಪದೆ ದಿನವೂ ಮಲ್ಲಿಯ ಕಚೇರಿ ಆಗಬೇಕು ಎಂದು ಅಪ್ಪಣೆಯಾಯಿತು.

ಮಲ್ಲಣ್ಣ ಯಾವುದೋ ಲೋಕಕ್ಕೆ ಹೋಗಿದ್ದ. ನಾಯಕನ ಮನಸ್ಸು ಹತ್ತಾರು ವರ್ಷ ಮುನ್ನಡೆದು ತರುಣಿಯಾದ ಮಲ್ಲಿಯೊಡನೆ ಸರಸ ಸಲ್ಲಾಪಗಳನ್ನಾಡುತ್ತ ಕಾಮಕೇಳಿಗೆ ಸಿದ್ಧವಾಗುತ್ತಿತ್ತು.

ನಾಯಕನು ಸಾರೋಟಿನಲ್ಲಿ ಹಿಂತಿರುಗಿದನು. ಮಲ್ಲಣ್ಣನಿಗೆ ತಾನು ಅಲ್ಲಿಗೆ ಹೋಗುವಾಗ ಸಾರೋಟಿನಲ್ಲಿ ಕುಳಿತು ಕೊಳ್ಳುವುದು ಹೇಗೆ ಎನ್ನಿಸಿತ್ತು. ಈಗಂತೂ ಏನೋ ಆಗಿಹೋಗಿದೆ. ನಾಯಕನು ಅವನು ತಡೆಯುತ್ತಿರುವುದನ್ನು ನೋಡಿ, "ಹತ್ತೋ ಪುಣ್ಯಾತ್ಮ! ಆಗಲೇ ಹೊಟ್ಟೆ ಪದ ಹೇಳುತ್ತಿದೆ" ಎಂದು ಒದರಿದನು. ಅವರು ಮನೆಗೆ

ಬಂದು ಊಟಕ್ಕೆ ಕುಳಿತುಕೊಳ್ಳುವ ವೇಳೆಗೆ ಒಂಭತ್ತು ಗಂಟೆಯಾಗಿ, ಕ್ಯಾಂಪಿನಿಂದ ಸಂತ್ರಿಗಳ ತುತ್ತೂರಿಯು ಕೇಳಿಸಿತು.

ಆ ದಿನ ಮಲ್ಲಿ ನಾಯಕನ ಜೊತೆಯಲ್ಲಿ ಊಟಮಾಡಿದಳು. "ಪಾಪ! ಮಗು!" ಎಂದು ಅವನು ಅವಳನ್ನು ತನ್ನ ಹಾಸುಗೆಯ ಮೇಲೆ ಮಲಗಿಸಿಕೊಂಡನು.

ಮಲ್ಲಣ್ಣ ನಾಯಕನ ಗುಡಾರದಲ್ಲಿಯೇ ಮಲಗಿದನು : ಅವನಿಗೆ ಏನೇನೋ ಕನಸುಗಳು. ಎಲ್ಲಾ ವೈಭವದ ಕನಸುಗಳೇ! ಆ ವೈಭವಕ್ಕೆ ಮಲ್ಲಿ, ನಾಯಕ, ಹೇಗೆ ಹೇಗೊ ಕಾರಣರು ಎನ್ನಿಸಿದ್ದರೂ, ಬೆಳಗಾದಾಗ ಆ ವಿವರಗಳು ಒಂದೂ ನೆನೆಪಿರಲಿಲ್ಲ.

೬

ಮದರಾಸಿನ ಬಿಷಪ್ಪನು ಬಂದು ಪ್ರಿನ್ಸ್‌ನ್ನು ನೋಡಿದನು. ಆತನು ಅಲ್ಲಿಗೆ ಬಂದು ನೋಡಬೇಕೆಂದು ಆಹ್ವಾನವು ಹೋಗಿತ್ತು. ಬೆಳಿಗ್ಗೆ ಒಂಭತ್ತು ಗಂಟೆಯಿಂದ ಹನ್ನೊಂದು ಗಂಟೆಯುವರಿಗೆ ಸ್ಟಾಕೇಡಿನಲ್ಲಿ ಆನೆ ಕಟ್ಟುವ ಸಂಭ್ರಮವನ್ನು ನೋಡಿ ದಂಪತಿಗಳು ಹಿಂತಿರುಗಿದರು. ಕೊಂಚ ಆಯಾಸ ಪರಿಹಾರವಾದಮೇಲೆ ಸುಮಾರು ಹನ್ನೊಂದೂವರೆಗಂಟೆ ಇರಬಹುದು. ಬಿಷಪ್ಪನಿಗೆ ಚಕ್ರವರ್ತಿ ಕುಮಾರನ ದರ್ಶನವಾಯಿತು. ಪರಸ್ಪರ ಕುಶಲಪ್ರಶ್ನೆಗಳಾದಮೇಲೆ ಮಾತುಕಥೆಗಳು ವ್ಯವಹಾರ ದೃಷ್ಟಿಯಲ್ಲಿ ಮುಂದೆ ಹರಿದುವು :—

"ಇಲ್ಲಿ ತಮ್ಮ ಕೆಲಸಕಾರ್ಯಗಳು ಹೇಗಿವೆ ?"

"ಇಲ್ಲಿ ನಮಗೆ ಬಹಳ ಕಷ್ಟ. ಇಲ್ಲಿ ಸಮಾಜವು ಬಹು ಭದ್ರವಾಗಿದೆ. ಜನಸಾಮಾನ್ಯರಲ್ಲೂ ಇವರ ವೇದಾಂತಗಳು ಬಲವಾಗಿ ಬೇರೂರಿವೆ. ಪ್ರತ್ಯಕ್ಷವಾಗಿ ವೇದಶಾಸ್ತ್ರಗಳೆಂದು ಹೇಳಿಕೊಂಡು ಕರ್ಮಗಳನ್ನು ಮಾಡುವ ಬ್ರಾಹ್ಮಣರ ಆಚರಣೆಗಳು ಮೆಟ್ಟಿಲು ಮೆಟ್ಟಿಲಾಗಿ

ಕೆಳಗಿನವರೆಗೆ ಇಳಿದು ಬಂದಿವೆ. ನಾವು ಉಪನ್ಯಾಸಗಳ ಮೂಲಕ, ಶಾಲೆಗಳ ಮೂಲಕ, ಪುಸ್ತಕಗಳ ಮೂಲಕ, ಬೇಕಾದಹಾಗೆ ಈ ಜನದ ಆಚಾರ ಸಂಪ್ರದಾಯಗಳನ್ನು ತೆಗಳುತ್ತಾ ಇದ್ದೇವೆ. ಆದರೂ ಸಮುದ್ರ ತೀರದಲ್ಲಿ ಮರಳಲ್ಲಿ ಕಟ್ಟಿದ ಮನೆಯಂತಾಗಿದೆ ನಮ್ಮ ಪ್ರಯತ್ನ. ಒಂದು ಹಬ್ಬ ಬಂತು ಎಂದರೆ ಈ ಹಳ್ಳಿಯವರು ಎಷ್ಟು ಉತ್ಸಾಹದಿಂದ ಸಂಭ್ರಮದಿಂದ ನಡೆಸುತ್ತಾರೆಯೋ ಅಷ್ಟೇ ಉತ್ಸಾಹ ಸಂಭ್ರಮಗಳಿಂದ ನಗರದವರೂ ನಡೆಯುತ್ತಾರೆ. ನಾವು ವರ್ಷವೆಲ್ಲಾ ಪಟ್ಟ ಶ್ರಮ ಆ ಒಂದು ದಿವಸದಲ್ಲಿ ಬುಡಕೂಡ ಉಳಿಯದೆ ಹೊರಟುಹೋಗುತ್ತದೆ. ಅವರ ಗಣಪತಿ, ತಾವು ನೋಡಿದ್ದೀರಾ! ಆ ಗಣಪತಿಯ ಹಬ್ಬದಲ್ಲಿ, ಇಪ್ಪತ್ತೊಂದು ದಿವಸ ಅವರು ವಿದ್ವಾಂಸರನ್ನು ಕರೆಯಿಸಿ ವಾದವನ್ನು ಮಾಡಿಸುತ್ತಾರೆ. ಅವರು ತಮ್ಮ ಶಾಸ್ತ್ರಗಳನ್ನು ಕುರಿತು ಭಾರಿ ಭಾರಿ ಉಪನ್ಯಾಸ ಮಾಡುತ್ತಾರೆ. ನಾವು ಅವರ ಉಪನ್ಯಾಸಗಳನ್ನು ಕುರಿತು ಪ್ರಶ್ನೆಮಾಡಿದೆವು. ಅವರಂತೆ ವೇಷ ಧರಿಸಿದೆವು. ಏನು ಮಾಡಿದರೂ ನಮ್ಮ ಕೆಲಸ ಸಫಲವಾಗಲಿಲ್ಲ."

"ಏನು ಮಾಡಿದರೆ ಗೆಲ್ಲಬಹುದು ?"

"ಯುವರ್ ಹೈನಸ್ ! ಒಂದೇ ಒಂದು ದಾರಿಯಿರುವುದು. ಎಂದಿನವರೆಗೆ ಈ ಬ್ರಾಹ್ಮಣ ಈ ಸಮಾಜದ ಮುಖಂಡನಾಗಿರುತ್ತಾನೆ ಅಂದಿನವರೆಗೂ ಇಂಡಿಯ ಯಾರಿಗೂ ಬಗ್ಗುವುದಿಲ್ಲ. ಇದನ್ನು ಔರಂಗಜೀಬ್ ಕಂಡುಕೊಂಡು ಕಾಶ್ಮೀರದ ಬ್ರಾಹ್ಮಣರನ್ನೆಲ್ಲಾ ಮುಸಲ್ಮಾನರನ್ನು ಮಾಡಿಸಿದ. ಬಲವಂತವಾಗಿ ಅವರ ಜುಟ್ಟು ಕತ್ತರಿಸಿ, ಅವರ ಜನಿವಾರ ಕಿತ್ತುಕೊಂಡು ಅವರನ್ನು ಜಾತಿಕೆಡಿಸಿದ. ಹಿಮಾಲಯದಲ್ಲಿ ಚಮರಿ ಎಂಬ ಒಂದು ಜಾತಿ ಇದೆ. ಅದರ ಬಾಲ ದಿಂದ ಈ ಚಾಮರಗಳು ಆಗುವುದು. ಅದನ್ನು ಓಡಿಸಿಕೊಂಡು ಬಂದರೆ, ಮುಳ್ಳು ಪೊದೆಯೊಳಕ್ಕೆ ಹೋದರೆ ತನ್ನ ಬಾಲದ ಅಂದ ಕೆಡು ವುದು ಎಂದು ಅಲ್ಲಿಯೇ ನಿಂತು ಅದು ಬೇಟೆಗಾರನಿಗೆ ಸಿಕ್ಕಿಹೋಗುವು ದಂತೆ. ಹಾಗೇ ಈ ಬ್ರಾಹ್ಮಣರೂ ಕೊಂಚ ಜಾತಿಕೆಟ್ಟಿತು ಎಂದರೆ ಆ ಜಾತಿ ಹೋಯಿತು ಎನ್ನುತ್ತಾರೆ. ದೇವರು ಜಾತಿ ಕೊಟ್ಟಿದ್ದರೆ,

ಆ ಜಾತಿ ಎಂದಿಗೂ ಹೋಗುವುದಿಲ್ಲ ಎನ್ನುವುದು ಅವರ ಮನಸ್ಸಿಗೆ ಹೊಳೆದಿಲ್ಲ. ಇಲ್ಲಿದೆ ಇಂಡಿಯಾದ ಮರ್ಮ! ಇಂಗ್ಲೀಷಿನಲ್ಲಿ ನಾವು ಅವರ ಧರ್ಮಶಾಸ್ತ್ರ, ವೇದ, ವೇದಾಂತ ಎಲ್ಲವನ್ನೂ ಬಹುವಾಗಿ ಖಂಡಿಸಿದ್ದೇವೆ. ಈಗ ಇನ್ನೊಂದು ಹೊಸ ಗುಂಪು ಬರಬೇಕು. ಈ ಸಂಸ್ಕೃತ ಓದುವವರು ಕಮ್ಮಿಯಾಗಿ ಇಂಗ್ಲಿಷ್ ಓದುವವರು ಹೆಚ್ಚಾಗ ಬೇಕು. ಅವರಿಗೆ ನಾವು ಬರೆದಿರುವ ಪುಸ್ತಕಗಳಲ್ಲಿ ನಂಬಿಕೆ ಬರಬೇಕು. ಆಗ ಬ್ರಾಹ್ಮಣರ ಪ್ರಭಾವ ಕಡಿಮೆಯಾಗುತ್ತದೆ. ಆಗ ಇಂಡಿಯಾದ ಸಮಾಜ ನಮ್ಮ ಬೈಬಲ್ಲಿನಲ್ಲಿ ಹೇಳುವ ಕುರುಬನಿಲ್ಲದ ಮಂದೆಯಾಗು ತ್ತದೆ. ಆಗ ಗೆಲ್ಲಬಹುದು. ಮಹಮ್ಮದೀಯರು ಈ ಗುಟ್ಟು ಹಿಡಿಯ ಲಿಲ್ಲ. ಔರಂಗ್‌ಜೀಬನಂತೆ ಇನ್ನಿಬ್ಬರು ಹುಟ್ಟಿ ಈ ಬ್ರಾಹ್ಮಣರನ್ನು ಮಟ್ಟಹಾಕಿದ್ದರೆ ಇಂಡಿಯ ಉಳಿಯುತ್ತಿರಲಿಲ್ಲ."

"ಏನು ಅವರು ಸಾಮಾನ್ಯವಾಗಿ ಬಡವರು ಅಂತಾರಲ್ಲ!"

"ಹೌದು ಬ್ರಾಹ್ಮಣರು ಬಡವರು ಅವರಲ್ಲಿ ವೈರಾಗ್ಯವಿದೆ. ತಮ್ಮ ಬಡತನ ಇತರರ ಐಶ್ವರ್ಯಕ್ಕಿಂತ ಹೆಚ್ಚು ಎಂಬ ಭಾವನೆಯಿದೆ. ಅದರಿಂದಲೇ ಅವರ ಜಾತಿ ಬದುಕಿರುವುದು. ಬಡವನಾಗಿದ್ದವನು ದೇವರ ಹತ್ತಿರದವನು ತಾನು ಎನ್ನುತ್ತಾನೆ. "ಈ ಜನ್ಮದಲ್ಲಿ ಯಾವುದೋ ಪಾಪದಿಂದ ಬಡತನ ಬಂದಿದೆ. ಇದು ಎರಡು ದಿವಸ ಸೇರವಾಗಿದ್ದು ಕಳೆದರೆ, ಮುಂದಿನ ಜನ್ಮ ಸ್ವರ್ಗದಲ್ಲಿ ಸೂರೆಹೊಡೆಯಬಹುದು" ಎಂದು ಅವರು ಧೈರ್ಯವಾಗಿದ್ದಾರೆ. ನಮ್ಮ ಗುರು ಕ್ರಿಸ್ತದೇವನು ಹೇಳುವ ಮಾತೇ ಅದು. ಕ್ರಿಸ್ತದೇವನು ಹೇಳುವ ಎಷ್ಟೋ ಮಾತು ಬೈಬಲ್ಲಿ ಗಿಂತ ಚೆನ್ನಾಗಿ ಅವರ ಉಪನಿಷತ್ತುಗಳಲ್ಲಿ ಹೇಳಿದೆ. ಅವರ ಮೇಲೆ ವಾದಮಾಡುವುದಕ್ಕೆ ನಮಗೆ ಸಾಧ್ಯವಿಲ್ಲ. ಅವರು ಏನು ಕೊಟ್ಟರೂ ಬೇಡ ಎನ್ನುತ್ತಾರೆ. ಆದರಿಂದ ಅವರ ಪ್ರಭಾವ. ಯಾವೊತ್ತು ಬ್ರಾಹ್ಮಣನಿಗೆ ಈ ಲೋಕದ ಭಾಗ್ಯ ಬೇಕು ಎನಿಸುತ್ತದೆ, ಯಾವೊತ್ತು ಅವನಿಗೆ ಹಣದ ಮೇಲೆ ಆಸೆ ಹೆಚ್ಚುತ್ತದೆ, ಅವೊತ್ತು ನಾವು ಉಳಿದೆವು. ಅದುವರೆಗೆ ಏನು ಮಾಡಿದರೂ ಸಾಧ್ಯವಿಲ್ಲ. ಬಲ್ಲಿರಾ? ಯುವರ್ ಹೈನೆಸ್! ಒಬ್ಬ ಬ್ರಾಹ್ಮಣರ

ಹುಡುಗ, ಹದಿನಾಲ್ಕು ವರ್ಷದವನು, ಬಂದು ಎದುರುಬಿದ್ದ. ನಮ್ಮ ರೆವರೆಂಡ್‌ರ್ ಹೇಳುತ್ತಿದ್ದರು: 'ನಿಮ್ಮ ಬ್ರಹ್ಮ ಮಗಳನ್ನೇ ಮಾಡಿಕೊಂಡ, ನಿಮ್ಮ ವಿಷ್ಣು ಕಂಡವರ ಹೆಂಡಿರನ್ನೇ ಕೂಡಿಕೊಂಡ, ನಿಮ್ಮ ಶಿವ ತಪಸ್ಸು ಮಾಡುತ್ತಿದ್ದು ಸೈತಾನನು ಹೆಣ್ಣಾಗಿ ಮುಂದೆ ಸುಳಿದಾಗ ಅವಳನ್ನೂ ಅಟ್ಟಿಕೊಂಡು ಹೋದ. ನಿಮ್ಮ ಕೃಷ್ಣ ಮನೆಮನೆಯೂ ನುಗ್ಗುತ್ತಿದ್ದ' ಎಂದು ಅವರ ದೇವರುಗಳನ್ನು ಖಂಡಿಸುತ್ತಿದ್ದರೆ, ಅವನು 'ಏನ್ರಿ! ನಿಮ್ಮ ಗುರುವಿನ ತಂದೆ ಯಾರ್ರಿ? ಅವನು ಅಪ್ಪನ ಮಗನೋ? ಅಮ್ಮನ ಮಗನೋ?' ಎಂದ. ಸೇರಿದ್ದವರೆಲ್ಲಾ ನಕ್ಕು ಬಿಟ್ಟರು. ನಮ್ಮ ರೆವರೆಂಡ್‌ರು ಅಲ್ಲಿಂದ ಮುಂದೆ ಆ ಜಾಗದಲ್ಲಿ ನಿಂತು ಉಪನ್ಯಾಸ ಮಾಡಲಾಗಲಿಲ್ಲ. ಇನ್ನೊಮ್ಮೆ, ಯುವರ್ ಹೈನೆಸ್, ಇವರಲ್ಲಿ ಬಹು ಕೀಳು ಎನ್ನಿಸಿಕೊಂಡ ಜನ ಇದೆ. ಅದನ್ನು ಕನ್ವರ್ಟ್ ಮಾಡಿದರೆ ಕೋಟಿ ಕೋಟಿ ಜನ ನಮ್ಮವರಾಗುತ್ತಾರೆ ಅಂತ ಅವರಲ್ಲಿ ಹೋದೆವು. ಅವರು ಊರಲ್ಲಿ ಇರುವುದಿಲ್ಲ. ಊರಿನ ಆಚೆ ಅವರ ಮನೆಗಳು. ಅವರು ಮುಟ್ಟಿದನೀರು ಉತ್ತಮರು ಯಾರೂ ಮುಟ್ಟೋದಿಲ್ಲ. ಅಂಥವರು ಈ ಬ್ರಾಹ್ಮಣರ ದೇವರನ್ನು ಪೂಜಿಸುತ್ತಾರೆ. ಮೈಗಾಡ್! ಅವರು ಹಾರುವರಿಗಿಂತ ಬಿಗಿ. ನಮ್ಮನ್ನು ಬ್ರಾಹ್ಮಣರಾದರೂ ಮನೆ ಸೇರಿಸಿಯಾರು ಅವರು ಸೇರಿಸುವುದಿಲ್ಲ. ಅವರ ಬಳಿ ಒಬ್ಬ ಲೇಡಿ ರೆವರೆಂಡ್ ಕಳಿಸಿದೆವು. ಅವಳು ಹೋಗಿ 'ಪಾಪ! ನಿಮಗೆ ಎಷ್ಟು ಅವಮಾನ ಮಾಡಿದ್ದಾರೆ ಈ ಸಮಾಜ? ನೀವು ನಮ್ಮ ಶಿಷ್ಯರಾಗಿ. ನಿಮ್ಮನ್ನು ಓದಿಸುತ್ತೇವೆ. ನಿಮಗೆ ಭಾರಿ ಭಾರಿ ಅಧಿಕಾರ ಕೊಡಿಸುತ್ತೇವೆ. ನಿಮ್ಮನ್ನು ಲಂಡನ್ನಿಗೆ ಕಳಿಸುತ್ತೇವೆ' ಅಂತ ಎಲ್ಲಾ ಹೇಳಿದಳು. ಅದಕ್ಕೆ ಅವರು ಏನೆನ್ನಬೇಕು: ಒಬ್ಬ ಮುದುಕ ಎದ್ದು 'ಅವ್ವಾ, ನಮ್ಮ ದೇವರಿಗೂ ನಿಮ್ಮ ದೇವರಿಗೂ ಎಷ್ಟು ದೂರ ನೋಡಿ. ನಮ್ಮ ದೇವ್ರು ನಮಗೆ ಮನೆ ಕೊಟ್ಟವ್ನೆ, ಬಾಗಿಲು ಕೊಟ್ಟವ್ನೆ, ಮಕ್ಕಳುಮರಿಕೊಟ್ಟು, ಹೊಲಗದ್ದೆಕೊಟ್ಟು ನೂರಾರು ವರ್ಷದಿಂದ ಸುಖವಾಗಿ ಇಟ್ಟವ್ನೆ. ನಿಮ್ಮ ದೇವರು ನೋಡಿ, ಮನೆಬಾಗಿಲು ಎಲ್ಲಾ ತೊರಿಸಿ, ದೇಶವಲ್ಲದ ದೇಶಕ್ಕೆ ನಿಮ್ಮನ್ನು ಎಳೆಕೊಂಡುಬಂದು, ನಮ್ಮ ಮನೆ ಬಾಗಿಲಿಗೆಲ್ಲಾ

ಬಂದು, ಪಾಪಿ ಪರದೇಸಿ ಅನ್ನೋದೂ ನೋಡದೆ ನಮ್ಮ ಕೈಕಾಲಿಗೆ ಬಿದ್ದು ದುಡ್ಡು ಕೊಡುತೀನಿ, ಕಾಸು ಕೊಡುತೀನಿ ಓದಿಸಿತೀವಿ, ಅಧಿಕಾರ ಕೊಡಿಸುತೀವಿ ಅಂತ ಹೇಳಿ ಪುಸಲಾಯಿಸೋ ಹಂಗೆ, ಅಷ್ಟು ಕೀಳಾ ಗೋಂಗೆ ಮಾಡವ್ನೆ. ನಮಗೆ ನಿಮ್ಮ ದೇವರು ಬೇಡ ಕಣಪ್ಪ' ಅಂದು ಬಿಟ್ಟ. ಯುವರ್ ಹೈನಸ್, ತಾವೇ ಯೋಚನೆಮಾಡಿ."

"ಈ ಗುಂಪಿನ ಹೆಸರೇನು ?"

"ಅವರನ್ನು ದೇಶದಲ್ಲಿ ಒಂದೊಂದು ಕಡೆ ಒಂದೊಂದು ಹೆಸರಿನಿಂದ ಕರೆಯುತ್ತಾರೆ. ಅವರನ್ನು ಸಮಾಜ ತುಳಿದಿಟ್ಟಿದ್ದಾರೆ. ಆದರೂ ಅವರ ಕಟ್ಟುಪಾಡು, ಇನ್ನು ಯಾರಲ್ಲಿಯೂ ಇಲ್ಲ. ಅವರೆಲ್ಲ ಹಿಂದಿನ ಕಾಲದ ಕ್ಷತ್ರಿಯರು. ನೆಲದ ಒಡೆಯರಾಗಿದ್ದವರು. ಈಗಲೂ ಅವರೇ ಒಡೆಯರಾಗಿದ್ದಂತೆಯೇ ಜಂಭದಿಂದ ಇದ್ದಾರೆ. ಇನ್ನೊಂದು ಕಥೆ ತಾವು ಕೇಳಲೇಬೇಕು. ಒಂದು ದಿವಸ ನಮ್ಮ ರೆವರೆಂಡ್‌ರು ಅವರ ನಡುವೆ ಹೋಗಿ, ನೀವು ಪ್ರಶ್ನೆಕೇಳಿ ನಾವು ಉತ್ತರ ಹೇಳುತ್ತೇವೆ ಎಂದರು. ಅವರಲ್ಲೊಬ್ಬ ಮುದುಕನೆದ್ದು ಸತ್ಯ ವಾಗಿ ಹೇಳಿ ಸೋಮಿ. ಅರಂಜ್ಯೋತಿ ಹೆಚ್ಚೋ, ಪರಂಜ್ಯೋತಿ ಹೆಚ್ಚೋ ಅಂತ ಕೇಳಿದ. ರೆವರೆಂಡ್‌ರಿಗೆ ಏನೂ ತಿಳಿಯಲಿಲ್ಲ. ಅವರು ವಿಚಾರಿಸಿಕೊಂಡು ಬರುತೀನಿ ಅಂತ ಬಂದರು. ನಾವು ಹುಡುಕಿದೆವು. ತಮಿಳಿನಲ್ಲಿ ಅರಂ ಎಂದರೆ ಧರ್ಮ. ಸಂಸ್ಕೃತದಲ್ಲಿ ಪರಂ ಎಂದರೆ ಬ್ರಹ್ಮ. ಓ ದೇವರೆ, ಆ ಕೊನೆಯ ಜಾತಿಯವನು ಕೇಳಿದುದು ಇಂದಿಗೂ ದೊಡ್ಡ ಜಾತಿಯವರಲ್ಲಿ ನಡೆಯುತ್ತಿರುವ ಹೋರಾಟ. ಕೆಲವರು ಕರ್ಮ ಮಾಡ ಬೇಕು ಅದೇ ಹೆಚ್ಚು ಎನ್ನುತ್ತಾರೆ. ಇನ್ನು ಕೆಲವರು ಬ್ರಹ್ಮ ಹೆಚ್ಚು ಎನ್ನು ತ್ತಾರೆ. ಈ ಮೇಲಿನ ಜಾತಿಯವರ ಜಗಳದ ಪ್ರಶ್ನೆ ಆ ಕೆಳಗಿನ ಜಾತಿ ವರೆಗೂ ಹೇಗೆ ಹೋಯಿತು ? ರಾಜಕುಮಾರ, ಇಲ್ಲಿದೆ ಇಂಡಿಯದ ಬಿಗಿ. ಭದ್ರವಾದ ಈ ಕೋಟೆ ಒಡೆದು ಇಂಡಿಯರಿಗೆ ಹಿಂದಿನ ಸಂಸ್ಕೃತಿಯಲ್ಲಿ ಏನಿವೆ ಮಹಾ ! ಎನ್ನಿಸುವವರೆಗೂನ ಮ್ಮದೇನೂ ನಡೆ ಯುವುದಿಲ್ಲ. ಒಂದು ಸಾವಿರವರ್ಷ ಬಿಚ್ಚುಗತ್ತಿಹಿಡಿದು ರಾಜ್ಯವಾಳಿದ ಮಹಮ್ಮದೀಯ ಇಲ್ಲಿ ಏನೂ ಮಾಡಲಾರದೆ ಹೋದ. ಇನ್ನೂರು

ವರ್ಷದಲ್ಲಿ ಹೋದ ಹೋದ ಎಡೆಯಲ್ಲೆಲ್ಲಾ ಕ್ರೈಸ್ತರನ್ನು ಮಾಡಿದ ನಾವು ಇಲ್ಲಿ ಏನೂ ಮಾಡಿಲ್ಲ. ಈಗ ಬ್ರಿಟಿಷ್ ಚಕ್ರಾಧಿಪತ್ಯದ ಅಳಿವು ಉಳಿವು ಇಂಡಿಯವನ್ನು ಅವಲಂಬಿಸಿದೆ. ರಾಜಕುಮಾರ, ಇಲ್ಲಿ ಜನ ಸಾಮಾನ್ಯ ಇನ್ನೂ ಕಣ್ಣು ಬಿಟ್ಟಿಲ್ಲ. ಇವರಲ್ಲಿ ಭೇದೋಪಾಯ ಮಾಡಬೇಕು. ಮೊದಮೊದಲು ಬ್ರಾಹ್ಮಣರಮೇಲೆ ಇತರರಿಗೆ ಇರುವ ಭಕ್ತಿ ವಿಶ್ವಾಸ ಹೋಗಬೇಕು ಬ್ರಾಹ್ಮಣರಲ್ಲೇ ವಿಷಬೀಜ ಬಿತ್ತಬೇಕು. ಇವರು ಫ್ರೆಂಚರೂ ಜರ್ಮನ್ನರೂ ಕಾದಾಡುವಂತೆ ತಮ್ಮ ತಮ್ಮಲ್ಲಿ ಕಾದಾಡಿ ಮಡಿಯುವಂತೆ ಮಾಡಬೇಕು. ಆಗ ನಾವು ಏನೂ ತಿಳಿಯದವರಂತೆ, 'ನೋಡಿ. ಆ ದೋಣಿ ತೂತುಬಿದ್ದಿದೆ. ಅದು ನಿಮ್ಮನ್ನು ದಾಟಿಸಲಾರದು. ಬನ್ನಿ, ನಮ್ಮ ದೋಣಿ ಸಿದ್ಧವಾಗಿದೆ. ನಮ್ಮ ಗುರು ಕರುಣಾಳು ಕಾಯುತ್ತಾನೆ' ಎಂದು ಅವರನ್ನು ನಮ್ಮ ಕಡೆಗೆ ಎಳೆಯಬೇಕು. "

" ಇದುವರೆಗೂ ನೀವು ಗೆದ್ದಿರುವುದು ಹೇಗೆ ? "

" ನಾವು ಗೆದ್ದಿಲ್ಲ. ಇಲ್ಲಿ ಸೋತಿದ್ದೇವೆ. ಈ ದೇಶದಲ್ಲಿ ಆಗಾಗ ಕ್ಷಾಮಗಳು ಬರುತ್ತವೆ. ಆಗ ನಮ್ಮಲ್ಲಿದ್ದ ಅನ್ನ ಕೊಡುತ್ತೇವೆಂದು ಗತಿಯಿಲ್ಲದವರು ಬಂದು ನಮ್ಮನ್ನು ಸೇರಿಕೊಂಡಿದ್ದಾರೆ. ಮತ್ತೊಂದು ವಿಶೇಷ, ರಾಜಕುಮಾರ, ಇಲ್ಲಿ ಬಂದು ನಮ್ಮ ಜೊತೆ ಸೇರಿದವರಿಗೆ ಅಕ್ಷರ ಬರದು ಆದರೆ ಅವರ ಶ್ರದ್ಧೆ ಬಹಳ ಭಾರಿ. ಅವರು ಪ್ರಾರ್ಥನೆ ಜಪಮಾಡುವ ಹಾಗೆ ನಾವು ಮಾಡಲಾರೆವು. ಅವರಿಗೆ ಅನ್ನ ನೀರು ಬಟ್ಟೆ ಬರೆ ಕೂಡ ಬೇಡ. ಕ್ರೈಸ್ತನೇ ಬಂದರೆ, ಮೊದಲು ಅವರಿಗೆ ಅನುಗ್ರಹ, ಆಮೇಲೆ ನಮಗೆ. ಇಂತಹ ಕಡೆ ನಾವೇನು ಮಾಡೋದು ?

" ಏನು ಮಾಡಬೇಕೆಂತೀರಿ ? "

" ಒಂದೇ ದಾರಿ. ಕ್ರಿಶ್ಚಿಯನ್ ಶಾಲೆ ಕಾಲೇಜು ಹೆಚ್ಚಬೇಕು. ಆಸ್ಪತ್ರೆ ಹೆಚ್ಚಬೇಕು. ಸರಕಾರ ಕ್ರಿಶ್ಚಿಯನ್ನರಿಗೆ ಕೊಡುವುದರಲ್ಲಿ ಎಲ್ಲೋ ಅಲ್ಪ ನೇಟಿವ್‌ರಿಗೆ ಸಹಾಯ ಕೊಡಬೇಕು. ಇವರು ಬಹು ಕೃತಜ್ಞರು. ನಮ್ಮ ಚಾತುರ್ಯ ಇವರಿಗಿಲ್ಲ. ಉಪ್ಪು ಕೊಟ್ಟವನನ್ನು

ಮುಪ್ಪಿನ ತನಕ ನೆನೆ ಎನ್ನುತ್ತಾರೆ. ಮಲಬಾರಿನಿಂದ ಬಂದ ಮಾಪಿಳ್ಳೆ ಮಲೆನಾಡಿನಲ್ಲಿ ಒಂದು ಬುಟ್ಟಿ ಮೀನು ತಂದು, ಒಂದು ಹೇರು ಅಡಿಕೆ, ಒಂದು ಹೇರು ಭತ್ತ ಕೊಂಡು ಹೋಗುತ್ತಾನೆ. ನಾವು ಹಾಗೆ ಮಾಡಬೇಕು."

"ಆಗಲಿ, ನಾನು ವೈಸ್‌ರಾಯರ ಹತ್ತಿರ ಮಾತನಾಡುತ್ತೇನೆ. ನೀವು ಹೇಳುವುದು ಅವರ ಮನಸ್ಸಿಗೂ ಬಂದೀತು. ರೋಮನ್ನರಂತೆ ನಾವೂ ಒಡೆದು ಆಳಬೇಕು. ಕೈಬಿಚ್ಚಿದ್ದರೆ ಹಿಡಿತ ಕಮ್ಮಿ. ಹೌದು. ಹೇಳುತ್ತೇನೆ."

"ಕೊನೆಯದಾಗಿ ಇನ್ನೊಂದು ಮಾತು ಹೇಳುತ್ತೇನೆ. ತಾವು ಹೇಗೆ ಗೆದ್ದಿರಿ ಎಂದು ಕೇಳಿದಿರಿ. ಗೋವಾದ್ದೊಂದು ಕಥೆ ತಮಗೆ ತಿಳಿದಿರಬೇಕು. ಅಲ್ಲಿ ಊರಿನವರೆಲ್ಲಾ ನೀರಿಗೆ ಬರುವ ಭಾವಿ ಒಂದಿದೆ. ಅಲ್ಲಿಗೆ ಒಂದು ದಿವಸ ಒಬ್ಬ ಪಾದ್ರಿಯು ಹೋಗಿ 'ನನಗೆ ನಮ್ಮ ದೇವರ ಅಪ್ಪಣೆಯಾಗಿದೆ ಎಂದು ನಮ್ಮ ಗುರುಗಳು ನಿನ್ನೆ ಕನಸ್ಸಿನಲ್ಲಿ ಹೇಳಿದ್ದಾರೆ. ಇದೋ ಈ ಕ್ರಾಸ್ ಇದರಲ್ಲಿ ಹಾಕುತ್ತೇನೆ. ಇದು ಇನ್ನು ಮುಂದೆ ಶಿಲುಬೆಯತೀರ್ಥ. ಈ ತೀರ್ಥ ಸೇವಿಸಿದವರಿಗೆಲ್ಲಾ ಮೋಕ್ಷ. ಅವರೇ ಸನಾತನ ಕ್ರಿಸ್ತರು. ಜೈ ಗುರು ಕ್ರಿಸ್ತದೇವ!' ಎಂದು ಒಂದು ಕ್ರಾಸನ್ನು ಅದರೊಳಕ್ಕೆ ಹಾಕಿಬಿಟ್ಟ. ಆಕಾಶದ ಕಡೆ ತಲೆಯೆತ್ತಿ ನೋಡಿ, 'ಭಗವಾನ್ ಕ್ರಿಸ್ತದೇವನು ಮೋಡದಿಂದ ಇಳಿದು ಈ ತೀರ್ಥದಲ್ಲಿ ಸ್ನಾನಕ್ಕೆ ಬರುತ್ತಿದ್ದಾನೆ ನೋಡಿ. ನೋಡಿ.' ಎಂದು ಆಟ ಕಟ್ಟಿದ. ಊರಿಗೆ ಊರೇ ಕ್ರಿಸ್ತವಾಗಿ ಹೋಯಿತು."

"ಇಲ್ಲಿ ಜನ ಇಷ್ಟು ಲಘುಬುದ್ಧಿಗಳೇ?" ರಾಜಕುಮಾರನೆಂದ.

"ರಾಜಕುಮಾರ, ಲಘು ಬುದ್ಧಿಗಳಲ್ಲ. ಸರಳರು. ತಮ್ಮಂತೆಯೇ ಇತರರೂ ಸತ್ಯವಂತರು ಎಂದು ನಂಬುವ ಸಜ್ಜನರು. ಅಲ್ಲಿದೆ ನಮ್ಮ ಗೆಲುವು"

"ಸರಿ ಸರಿ. ನಾವು ಅದರ ಸಂಪೂರ್ಣ ಪ್ರಯೋಜನ ಪಡೆಯಬೇಕು."

"ಕೊನೆಯ ಮಾತು. ಇಲ್ಲಿ ಕ್ರಿಸ್ತನಾಗುವ ಒಬ್ಬೊಬ್ಬನೂ

ಚರ್ಚ್ ಆಫ್ ಇಂಗ್ಲೆಂಡಿನ ಮೆಂಬರಾಗುತ್ತಾನೆ. ಹಾಗೆ ಆದವನ ಮೇಲೆ ನಮ್ಮ ಪೂರ್ಣ ಅಧಿಕಾರ. ಅವನು ಇಂಡಿಯ ಬಿಟ್ಟು ಇಂಗ್ಲೆಂಡಿನ ದಾಸನಾದವ. ಸಾಮ್ರಾಜ್ಯ ಸರಪಳಿಯ ಹೊಸಕೊಂಡಿ."

"ಬಿಷಪ್ಪರೇ! ಅದು ಹುಸಿಕೊಂಡಿ. ನಿಜವಾದ ಸರಪಳಿ ಬ್ರಿಟಿಷ್ ಬಯೋನೆಟ್‌ಗಳು. ನಮ್ಮ ಐ. ಸಿ. ಯಸ್. ನ ಅಧಿಕಾರಿಗಳು. ಅದು ಸ್ಟೀಲ್‌ಫ್ರೇಂ. ಇರಲಿ. ತಮ್ಮ ಮಾತೂ ತೆಗೆಯತಕ್ಕದ್ದಲ್ಲ. ಹುಲ್ಲೂ ಬಿಡಬಾರದು. ಮಾಡೋಣ."

ಬಿಷಪ್ಪನು ತನ್ನ ಭೇಟಿ ಮುಗಿಸುವ ವೇಳೆಗೆ ಊಟದ ಹೊತ್ತಾಯಿತು. ಬಿಷಪ್ಪನು ಮಂಡಿಯೂರಿ ಪ್ರಾರ್ಥನೆಮಾಡಿ, "ದೇವರೇ! ನಮ್ಮ ಪ್ರಾರ್ಥನೆಯನ್ನು ಕೇಳು – ಮನ್ನಿಸು – ದಯಮಾಡು, ಇಂಡಿಯದ ನೆಲ ನಮ್ಮ ಕೈಗೆ ಸಿಕ್ಕಿದೆ. ಇಲ್ಲಿಯ ಜನ ನಮ್ಮ ಕೈಗೆ ಸಿಕ್ಕುವಂತೆ ಮಾಡು. ಮೂವತ್ತು ಕೋಟಿ ಜನರು ಒಂದೇ ಕಂಠದಿಂದ ನಿನ್ನನ್ನು ಹಾಡಲಿ" ಎಂದು ಬೇಡಿಕೊಂಡನು.

ರಾಜಕುಮಾರನು "ಈ ಭರತಖಂಡದಲ್ಲಿ ಎಷ್ಟೋ ರಾಜ್ಯಗಳು, ಸಾಂರಾಜ್ಯಗಳು ಹುಟ್ಟಿವೆ, ಸತ್ತಿವೆ. ದೇವಾ! ಈ ಭೂಮಿಯಮೇಲೆ ಬ್ರಿಟಿಷ್ ಧ್ವಜವು ಯಾವಾಗಲೂ ಹಾರುತ್ತಿರುವಂತೆ ಕರುಣಿಸು" ಎಂದು ಹೇಳಿ ಊಟಕ್ಕೆ ಹೋದನು.

ಬಿಷಪ್ಪನೂ ಊಟಕ್ಕೆ ಬಂದನು. ಅಲ್ಲಿ ಗ್ರೇಸ್ ಹೇಳುವಾಗಲೂ ಬಿಷಪ್ಪನಿಗೆ ಅದೇ ಯೋಚನೆ. "ದೇವಾ! ಅಪಾರವಾದ ನಿನ್ನ ಕರುಣೆ ನಮ್ಮನ್ನು ಯಾವಾಗಲೂ ರಕ್ಷಿಸಲಿ. ನಿನ್ನ ನಾಮವು ಎಲ್ಲರ ಬಾಯಲ್ಲೂ ಮೆರೆಯಲಿ. ನಿನ್ನ ಕೀರ್ತಿಯು ತಾನೇ ತಾನಾಗಲಿ, ನಿನ್ನ ಕೃಪೆಯು ಈ ಭೂಮಿಯನ್ನು ಕಾಪಾಡಲಿ" ಎಂದು ಸರ್ವಸಮ್ಮತವಾಗಿ ಹೇಳಿದರೂ, ಆತನ ಹೃದಯದಲ್ಲಿ ರಕ್ಷಿಸುವ ಕರುಣೆ ಎಂದಾಗ ಬ್ರಿಟಿಷ್ ವಾರ್‌ಷಿಪ್ಪ್‌ಗಳು ಗನ್ನುಗಳು, ನಿನ್ನ ನಾಮವು ಎಲ್ಲರ ಬಾಯಲ್ಲಿಯೂ ಮೆರೆಯಲಿ ಎಂದಾಗ ಕ್ರಿಶ್ಚಿಯನ್ ಪ್ರಾರ್ಥನೆ, ನಿನ್ನ ಕೀರ್ತಿ ಎಂದಾಗ ಬ್ರಿಟಿಷ್ ಪ್ರತಿಷ್ಠೆ, ನಿನ್ನ ಕೃಪೆ ಎಂದಾಗ ಬ್ರಿಟಿಷ್ ಪ್ರಭುತ್ವ, ಎಂದೇ ಇತ್ತು ಎಂದು ಚಿತ್ರಗುಪ್ತನು ಬರೆದು ಕೊಂಡನಂತೆ.

ನಾಯಕನು ವಿಚಿತ್ರವಾದ ಮನೋಭಾವದಲ್ಲಿದ್ದಾನೆ. ಅವನಿಗೆ ಆಶ್ಚರ್ಯವಾಗಿದೆ. ಐದಾರು ವರ್ಷದ ಹೆಣ್ಣು ಲೋಕದ ದೃಷ್ಟಿಯಲ್ಲಿ ಮಗು, ತನ್ನ ದೃಷ್ಟಿಯಲ್ಲಿ ಬೆಳೆದು ಬಂದ ಹೆಣ್ಣಿಗಿಂತಲೂ ಬಲವಾಗಿ ಭಾವಗ್ರಾಹಿಣಿ. ರಾಮಾಯಣದಲ್ಲಿ ಬರುವ ಛಾಯಾಗ್ರಾಹಿಣಿಯೇ ಮಲ್ಲಿಯಾಗಿ ಬಂದಿದ್ದಾಳೋ, ಎನ್ನಿಸುವಂತಿದೆ. ಅವನೂ ಅಲ್ಲಿ ಇಲ್ಲಿ ಕಾಮಶಾಂತಿಗೆಂದು ಹೋಗಿ ಬಂದ. ದೇಹದ ಕಾಮಶಾಂತಿಯಾದರೂ, ಮನಸ್ಸಿನ ಕಾಮಕ್ಕೆ ಪುಟವಿಕ್ಕುವಂತಿದೆ. ಅವನಿಗೇ ನಗು. ಸಾವಿರ ಕುದುರೆ ಸರದಾರ ಮನೆ ಹೆಂಡತಿ ಕಾಸ್ತಾರನೆಂದು ಗಾದೆ. ಹಾಗೆ ಸಾವಿರ ಯುದ್ಧದಲ್ಲಿ ಗೆದ್ದು ಬಂದ ವೀರ, ಕಂದಮ್ಮನ ಮುಂದೆ ಮುಗ್ಗರಿಸಿದ್ದಾನೆ ಎಂದರೆ, ಇತರರು ಇರಲಿ, ತಾನೇ ನಂಬುವುದು ಹೇಗೆ? ಅವನು ನಿತ್ಯವೂ ಒಂದು ಹಂಡೆ ನೀರು ಸ್ನಾನ ಮಾಡುವವನು ಇಂದು ಎರಡು ಹಂಡೆ ನೀರು ಸ್ನಾನ ಮಾಡಿದ್ದಾನೆ. ಶಿವಪೂಜೆ ತಾನೇ ಮಾಡಿ ಬೇಕಾದ ಹಾಗೆ ಪತ್ರೆ ಹೂವು ಗಂಧ ಎಲ್ಲಾ ಒಪ್ಪಿಸಿದ್ದಾನೆ. "ಕಾಮಾರಿದೇವ, ಕಾಮವನು ಕಳೆದು ಮನವ ನಿರ್ಮಲಮಾಡಿ ಕಾಪಾಡೋ ಕಾಲಕಾಲ" ಎಂದು ಹಾಡಿ ಆರತಿಯನ್ನು ಬೆಳಗಿದ್ದಾನೆ ಆದರೂ ತಿಳಿನೀರಿನಲ್ಲಿ ಬಿದ್ದ ಹೊಸ ಕಾಸು ತಳದಲ್ಲಿದ್ದರೂ ಕಾಣಿಸುವಂತೆ ಮಲ್ಲಿಯ ಮೇಲಣ ಮೋಹ ಒಳಕ್ಕೆ ಇಳಿಯುತ್ತಿರುವುದು ಅವನಿಗೆ ಕಾಣಿಸುತ್ತಿದೆ. ಪೂಜೆ ಮಾಡಿಕೊಂಡು ಚಿನ್ನದ ಹೂವು ಹಾಕಿದ ಬೆಳ್ಳಿಯ ಮಣೆಯ ಮೇಲೆ ಕುಳಿತು, ತುಪ್ಪದಲ್ಲಿ ಮುಳುಗಿರುವ ಕಡುಬು ಮೆಲ್ಲುತ್ತ, "ಮಾವಿನ ಓಟೆ ನೆಟ್ಟು ಗಿಡ ತೋರಿಸುವ ದೊಂಬರಂತೆ, ಯಾರಾದರೂ ಮಲ್ಲಿಯನ್ನು ಹೆಣ್ಣು ಮಾಡಿಕೊಟ್ಟರೆ ಒಂದು ಲಕ್ಷ ರೂಪಾಯಿ ಯಾದರೂ ಕೊಟ್ಟೇನಲ್ಲ!" ಎಂದು ಯೋಚಿಸುತ್ತಿದ್ದಾನೆ. ಆ ಯೋಚನೆಯ ಪ್ರಭಾವವೇ ಏನೋ ಮಲ್ಲಿಗೂ ಮಲ್ಲಣ್ಣನಿಗೂ ನಾಯಕನ ಜೊತೆಯಲ್ಲಿ ನಾಷ್ಟಾಕ್ಕೆ

ಕರೆಬಂದಿತ್ತು.

ಮಲ್ಲಿ ಏನೂ ಅರಿಯದೆ ಒಳಕ್ಕೆ ಹೋದಳು. ನಾಯಕನು ಕರೆಯುತ್ತಲೂ ಹೋಗಿ ಅವನ ಪಗ್ಗಲಲ್ಲಿ ಕುಳಿತಳು. ಮಲ್ಲಣ್ಣ ಮಾತ್ರ, ಕುಳಿತುಕೊಳ್ಳಲಾರದೆ ನಿಂತೇ ಇದ್ದ. "ತಮ್ಮದಾಗಲಿ ಬುದ್ಧಿ; ಪಾದ" ಎಂದು ಕೊನೆಯವರಿಗೂ ನಿಂತೇ ಇದ್ದ. ಕೊನೆಗೆ ನಾಯಕನು "ಮಲ್ಲಿ, ನಿಮ್ಮಪ್ಪನಿಗೆ ನೀನಾದರೂ ಹೇಳು" ಎಂದ. ಅವಳೂ ಹೇಳಿದಳು. ಆದರೂ ಮಲ್ಲಣ್ಣ ಕುಳಿತುಕೊಳ್ಳಲಿಲ್ಲ. ನಾಯಕನ ಉಪಾಹಾರವಾದ ಮೇಲೆ, ಅವನೇ ಎದ್ದು ಬಂದು ಭುಜ ಹಿಡಿದು ಕುಳ್ಳಿರಿಸಿ, ತಾನೇ ತನಗೆ ಕೊಡುವಂತೆ ತುಪ್ಪದಲ್ಲಿ ಮುಳುಗಿದ ಕಡುಬು ತರಿಸಿಕೊಟ್ಟ. ಅಲ್ಲಿಗೆ ಮಲ್ಲಣ್ಣ ಸೋತ. ಅವನ ನಾಲಗೆ ಮೊದಲ ಹಾಗೆ ನುಡಿಯಿತು. "ಬುದ್ಧಿ, ಇದು ಕಡುಬಿಗೆ ತುಪ್ಪ ಅಲ್ಲ: ತುಪ್ಪಕ್ಕೆ ಕಡುಬು" ಅಂದೇ ಬಿಟ್ಟ. ನಾಯಕನು ನಗುತ್ತಾ "ಏನೋ ಶಿವ ಕೊಟ್ಟಿದ್ದು!" ಅಂದ. ಮಲ್ಲಣ್ಣನಿಗೆ ಗಾಬರಿಯಾಗಿ ಕಡುಬು ಗಂಟಲಿನಲ್ಲಿ ಸಿಕ್ಕಿಕೊಳ್ಳಬೇಕಾಗಿತ್ತು. ದೇವರ ದಯೆ. ತುಪ್ಪ ಹೆಚ್ಚಾಗಿದ್ದು ಅದು ನುಸುಳಿ ಕೊಂಡು ಒಳಕ್ಕೆ ಇಳಿದು ಬಿಟ್ಟಿತು.

ನಾಯಕನು ಈಚೆಗೆ ಬರುವ ವೇಳೆಗೆ ಗುಡಾರದ ಬಾಗಿಲಲ್ಲಿ ಹಕೀಂ ಬಂದು ಕಾಣಿಸಿಕೊಂಡ. ನಾಯಕನು ದಿರಸು ಒಪ್ಪಿಸಿಕೊಂಡು ಬಂದ. ಮುಂಚಕ್ಕೆ ಅಡ್ಡವಾಗಿ ಮರದ ಅಡ್ಡತೆರೆ. ಅದರಿಂದೀಚೆಗೆ ಒಂದೆರಡು ಸೋಫಾಗಳು. ಒಂದು ಟೇಬಲ್. ಅಲ್ಲಿಗೆ ನಾಯಕನು ಬಂದು ಕುಳಿತುಕೊಂಡ. ಹಕೀಂ ದಾರಿ ಬಿಡುತ್ತ ದೊಡ್ಡ ಸಾಹೇಬರು ಬರುತಾ ಅವರೆ ಎಂದು ನಿಗರಿ ನಿಂತುಕೊಂಡು ಸಲಾಂ ಹೊಡೆದ.

ನಾಯಕನು ಎದ್ದುಬಂದು ದೊಡ್ಡ ಸಾಹೇಬರನ್ನು 'ಬರಬೇಕು' ಅಂತ ಒಳಕ್ಕೆ ಕರೆದುಕೊಂಡು ಹೋದ. ಅವರನ್ನು ಕೂರಿಸಿ ತಾನು ಕೈಮುಗಿದುಕೊಂಡು ನಿಂತುಕೊಂಡು "ಪಾದ ಇಲ್ಲೀವರೆಗೂ ಬೆಳೆತು ನಮ್ಮ ಪುಣ್ಯ" ಎಂದ.

ಸಾಹೇಬನೂ "ಕೂತುಕೊಳ್ಳಿ ನಾಯಕರೆ, ನನಗೆ ಗೊತ್ತು

ನೀವು ನಾವು ಪಟೇಲರು ಅನ್ನುತ್ತೀರಿ ಅಂತ. ಆದರೆ ಇಲ್ಲಿ ಚಕ್ರವರ್ತಿಗಳ ಮಕ್ಕಳು ಬಂದಿರೋವಾಗ ಮಹಾರಾಜರೇ ಪಟೇಲರಾಗಿದ್ದಾರೆ. ನಮ್ಮದೇನು? ಬನ್ನಿ. ಕುಳಿತುಕೊಳ್ಳಿ. ನಾಳೆಯದಿನ ನಿಮ್ಮ ಪ್ರತಾಪ ನೋಡಿ. ಮಹಾರಾಜರು ಹೇಳಿಕಳುಹಿಸಿದ್ದಾರೆ. ರಾಜಕುಮಾರ ಮರೆಯೋಕೆ ಆಗಬಾರದು, ಅಂತಹ ನೋಟ ತೋರಿಸಬೇಕು ಅಂತ ಅವರಾಶೆ. ಮೈಸೂರಿನ ಮಾನ ಕಾಪಾಡೋದು ತಮ್ಮ ಕೈಯಲ್ಲಿದೆ ಅಂತ ಅಪ್ಪಣೆಯಾಗಿದೆ. ಅದರಿಂದ ಎರಡು ಹಂದಿ ಬೇಡಿ. ಒಂದು ಹಂದಿ ಸಾಕು ಅಂತ ಹುಜೂರು ಅಪ್ಪಣೆ. ಅದನ್ನೇ ಈ ಕೂಡಲೇ ನೀವೇ ತಿಳಿಸಿ ಬರಬೇಕು ಅಂತ ಅಪ್ಪಣೆಯಾಯಿತು. ನಾನೇ ಕುದುರೆಯಮೇಲೆ ಬಂದೆ."

ನಾಯಕನು ಅವರ ಮಾತಿಗೆ ಉತ್ತರವಾಗಿ ನಕ್ಕುಬಿಟ್ಟು, ಹೇಳಿದ 'ಬುದ್ಧಿಯವರು ಕೋಪಮಾಡಿಕೋಬಾರದು. ಕೊಂಚ ಈ ಕೈ ನೋಡಿ' ಅಂದು ತೋಳನ್ನು ಚಾಚಿದ. ಮುಟ್ಟಿನೋಡಿದರೆ, ಆ ದಪ್ಪ ತೋಳಿನ ಮಾಂಸಖಂಡಗಳೆಲ್ಲ ರೇಶಿಮೆಯಿಂದ ಆದ ಹಾಗೆ, ರೇಶಿಮೆಯ ಹಗ್ಗಗಳನ್ನು ಬಿಗಿದು ಕಟ್ಟಿದಂತೆ ಇವೆ. ಸಾಹೇಬನಿಗೆ ಈ ಮೃದುವಾದ ತೋಳು ಭಲ್ಲೆಯ ಎತ್ತಿ ಹೊಡೆಯಬಲ್ಲುದೆ ಎನ್ನಿಸಿತು. ಅದು ನಾಯಕನಿಗೆ ಅರ್ಥವಾಗಿರಬೇಕು. ಕೂಡಲೇ ಬುದ್ಧಿ ಈಗ ನೋಡಿ ಎಂದು ಮುಷ್ಟಿಕಟ್ಟಿ ಕೈ ಥಟ್ಟನೆ ನೀಡಿದ. ತೋಳು ಸೆಟೆದುಕೊಂಡು, ಕಬ್ಬಿಣದ ಅಲ್ಲ ಉಕ್ಕಿನ ಕೊಂತವಾಗಿ ಚಾಚಿಕೊಂಡಿತ್ತು. ಸಾಹೇಬರು ಮುಷ್ಟಿಕಟ್ಟಿ ಹೊಡೆದರು. ಅವರ ಮುಷ್ಟಿಗೆ ನೋವಾಯಿತು.

"ಇನ್ನಾದರೂ ನಂಬಿಕೆಯೋ?" ಎಂದ ನಾಯಕ.

ಸಾಹೇಬರು "ಹುಜೂರು ಅಪ್ಪಣೆ ನಾಯಕರೆ?" ಎಂದು ಕೇಳಿಕೊಳ್ಳುವ ದನಿಯಲ್ಲಿ ಹೇಳಿದರು.

ನಾಯಕನು "ಬುದ್ಧಿ, ಹೋಗಿ ಹುಜೂರರಲ್ಲಿ ಹೇಳಿ. ಎರಡು ಹಂದಿಯಲ್ಲ ಮೂರು ಹಂದಿ ಬಿಡಿಸಬೇಕು ಅಂತ – ಮೊದಲು ಹಂದಿಯ ಬೇಟೆ ಭಲ್ಯದಿಂದ, ಕುದುರೆಯ ಮೇಲೆ ಕುಂತು. ಆಮೇಲೆ, ಕುದುರೆಯ ಮೇಲೆ ಕುಂತು, ಕತ್ತಿಯಲ್ಲಿ ಹಂದಿ

ಕಡಿಯೋದು. ಆಮೇಲೆ ನೆಲದ ಮೇಲೆ ನಿಂತು ಹಂದಿ ಕೆಗಿಸಿ ಯುದ್ಧ. ಯಾವುದರಲ್ಲಾದರೂ ಸೋತರೆ, ತಾವಲ್ಲ, ನಮ್ಮ ಹಕೀಂ ಕೈಗೆ ಬಂದೂಕು ಕೊಟ್ಟಿರೋದು, ಅವನು ನನ್ನ ಗುಂಡಲ್ಲಿ ಹೊಡೆದು ಬಿಡೋದು. ಅಂತ ಹುಜೂರಿಗೆ ಹೇಳಿ, ಹೋಗಿ."

ಈ ವೀರಾಲಾಪ ಕೇಳಿ ಹಕೀಂ ಬಾಗಿಲಿಗೆ ಬಂದಿದ್ದ. ಅವನಿಗೆ ರಕ್ತ ಬಿಸಿಯಾಯಿತು. ತಾನು ಎಲ್ಲಿದ್ದೀನಿ ಏನು ಎಂಬುದೆಲ್ಲಾ ಮರೆತು ಹೋಯಿತು. ಒಳಕ್ಕೆ ನುಗ್ಗಿಯೇ ಬಂದು ಬಿಟ್ಟ. ಸಾಹೇಬರ ಕಾಲು ಹಿಡಿದುಕೊಂಡು " ಖಾವಂದರಂಥಾ ಶೂರ ಇಲ್ಲ ಖಾವಂದ್, ಹುಜೂರಿಗೆ ಹೇಳಬೇಕು. ನಮ್ಮ ಜನ ಎಂಥಾ ದಿಲ್‌ಗಾರರು ಅನ್ನೋದು ಈ ಬೆಳೀ ಜನದ ಮನಸ್ಸಿಗೆ ಬರಬೇಕು ಖಾವಂದ್. ನಮ್ಮ ಖಾವಂದ್ ಹೇಳಿರೋದು ಬಾಳ ಬಾಳ ನಿಜ. ಇಷ್ಟೂ ಸುಳ್ಳಿಲ್ಲ...." ಎಂದು ಏನೇನೋ ಹೇಳಿಬಿಟ್ಟ. ಸಾಹೇಬರು ಅವನ ಸ್ವಾಮಿಭಕ್ತಿಯನ್ನು ಗೌರವಿಸುತ್ತ ಸಣ್ಣ ನಗುನಕ್ಕು " ಮಹಾರಾಜರಿಗೆ ತಮ್ಮ ಪ್ರತಾಪ ಇಷ್ಟು ಭಾರಿ ಅಂತ ತಿಳೀದು ಹೋಗಿ ಹೇಳುತ್ತೇನೆ : ಒಪ್ಪಿಸುತ್ತೇನೆ " ಎಂದು ನಾಯಕನ ಕೈತಟ್ಟಿದರು.

ನಾಯಕನು ಸಾಹೇಬನನ್ನು ಕುಳ್ಳಿರಿಸಿದನು : ಅದು ಯಾವಾಗ ಯಾರಿಗೆ ಹೇಳಿದನೋ ? ಒಂದು ಬಟ್ಟಲು ತುಂಬಾ ಜೇನುತುಪ್ಪದಲ್ಲಿ ಹಾಕಿದ ರಸಬಾಳೆಯಹಣ್ಣು ತುಂಡು ಬಂತು. ಜೊತೆಯಲ್ಲಿಯೇ ಬಿಸಿ ನೀರು, ಒಂದು ಚೌಕ. ಸಾಹೇಬನು ಅದನ್ನು ಪ್ರೀತಿಯಿಂದ ಸವಿದು, ಹಣ್ಣು ಬಹು ಸೊಗಸಾಗಿದೇರಿ ಅಂದ. ನಾಯಕನು ' ಕ್ಯಾಂಪಿಗೆ ಕಳಿಸಿದ್ದೆ ' ಅಂದ.

" ಓಹೋ ಹೌದು. ನಿನ್ನೆ ಊಟದಲ್ಲಿ ಬಡಿಸಿದ್ದರು. ಆದರೆ ಅದು ತಮ್ಮ ಕ್ಯಾಂಪಿಸಿಂದ ಬಂದದ್ದು ಅಂತ ತಿಳಿಯಲಿಲ್ಲ. ವಿಚಾರಿಸುವುದಕ್ಕೆ ಪುರಸೊತ್ತಿರಲಿಲ್ಲ. "

" ತಾವು ಒಂದು ದಿನ ನಮ್ಮ ಔತಣಕ್ಕೆ ಬಂದರೆ–"

" ಇನ್ನೇನು ನೀವು ಇಂಥಾವರು ಎಂದು ಈಗಲ್ಲವೆ ತಿಳಿದದ್ದು. ಇನ್ನೇನು ಬಿಡಿ. ತಿಂಗಳಿಗೆ ಒಂದುಸಲವಾದರೂ ನಿಮ್ಮಕಡೆ ಬರೋಣ.

ಅದು ಪುಂಡು ಕೊಂಪೆಯಾಗಿದ್ದರೆ ವಾರಕ್ಕೊಂದುಸಲ ಬಂದು ಬಿಡೋವೆ. ಅಲ್ಲಿ ನೀವು ಇದ್ದು ಎಲ್ಲಾ ಶಾಂತವಾಗಿದೆ. ಅದರಿಂದ ನಿಮ್ಮನ್ನು ನೋಡೋಕೇ ಬರಬೇಕು."

"ಪುಂಡು ಕೊಂಪೆ ಮಾಡಿಸಲಾ ಹೇಳಿ."

"ಬೇಡಿ. ಪಾಪ. ಜನ ಬಲುನೊಂದು ಬಿಡುತಾರೆ. ನಾನು ಬರೀತೀನಿ. ಸರಿ. ಹೊತ್ತಾಯಿತು. ನಾನಿನ್ನು ಹೋಗಿ ಬರುತ್ತೇನೆ. ಹುಜೂರು ಕಾದಿರುತ್ತಾರೆ."

"ಸರಿ ಬುದ್ಧಿ."

"ನೀನು ಬಾರಯ್ಯ. ಅಲ್ಲಿ ಅಪ್ಪಣೆ ಆದುದು ಹೇಳುತ್ತೇನೆ. ಬಂದು ನಿಮ್ಮ ಖಾವಂದ್‌ರಿಗೆ ಹೇಳುವೆಯಂತೆ!"

"ಅವನೇಕೆ ನಿಮ್ಮ ಪಾದ! ಹೆಂಗೂ ಕುದುರೆ ಬಂದಿದೆ, ತಾವೂ ಕುದುರೆಯ ಮೇಲೆ ಬಂದಿದ್ದೀರಿ. ಬಾ ಅಂದರೆ ಜೊತೇಲೇ ಬರುತೀನಿ."

"ಬನ್ನಿ. ಅದಕ್ಕೇನು?"

ನಾಯಕನು ಸುಲ್ತಾನ್ ಹತ್ತಿ ಜೊತೆಯಲ್ಲಿ ಬರುತ್ತಿದ್ದನು. ಆ ಕುದುರೆ ನೋಡಿ ಸಾಹೇಬರಿಗೆ "ಇವನೂ ಡೆಪ್ಯುಟೀಕಮೀಷನರ್? ನಾನೋ?" ಎಂದು ಸಂದೇಹ ಬಂತು.

ಹುಜೂರುಸವಾರಿ ಡೆಪ್ಯುಟೀಕಮಿಷನರ್‌ರು ಹೇಳಿದುದನ್ನು ಕೇಳಿ ನಕ್ಕು ಬಿಟ್ಟರು. "ಅವರು ಅಷ್ಟು ಉತ್ಸಾಹದಿಂದ ಇದ್ದರೆ, ನಾವೇಕೆ ಅಡ್ಡ ಬರಬೇಕು? ಅವರಿಂದ ನಮಗೆ ಕೀರ್ತಿ. ಆಗಬಹುದು ಎಂದು ಹೇಳಿ – ಫಾರೆಸ್ಟ್ ಆಫೀಸರ್‌ಗೆ ಹೇಳಿ ಮೂರು ಹಂದಿ ಸಿದ್ಧವಾಗಿರಬೇಕು ಎಂದು" ಎಂದು ಹೇಳಿ ಅತಿಥಿಗಳ ಯೋಗಕ್ಷೇಮ ನೋಡಿ ಕೊಳ್ಳಲು ಹೋದರು.

ನಾಯಕನಿಗೆ ಅದನ್ನು ಕೇಳಿ ಹಿಡಿಸಲಾರದಷ್ಟು ಸಂತೋಷವಾಯಿತು. "ನಮ್ಮ ಪೂರ್ವಿಕರು ಯುದ್ಧಕ್ಕೆ ಹೋಗಿ ಗೆದ್ದು ಬರುತ್ತಿದ್ದರು: ನಾವು ಬೇಟೆಯಲ್ಲಾದರೂ ಗೆದ್ದು ಬರಬೇಡವಾ? ಏನು ಮಹಾ! ಆನೇಕಾಡಿನ ಮನೆತನದ ಕೀರ್ತಿ ಲಂಡನ್ ಅರಮನೇಲೂ

ಮೊಳಗಲಿ." ಎಂದುಕೊಂಡು ಕುದುರೆಯ ಮೇಲೆ ಹಿಂತಿರುಗಿದನು.

ಅವನಿಗೆ ಅದುವರೆಗೂ ಮಲ್ಲಿಯ ಯೋಚನೆ ಇರಲಿಲ್ಲ. ಗುಡಾರದ ಹತ್ತಿರಕ್ಕೆ ಬರುತ್ತಲೂ ಚೋಳಬ್ರಹ್ಮಹತ್ಯೆಯ ಹಾಗೆ ಕಾಣಿಸಿಕೊಂಡಿತು. "ಇದೀಗ ಚೆನ್ನಾಯಿತು. ಭಾರಿಯ ಬೊಂಬನ್ನೂ ಸಣ್ಣ ದುಂಬಿ ಕೊರೆಯುವ ಹಾಗೆ ಆಗದಲ್ಲಾ ನನ್ನ ಬಾಳು. ಇರಲಿ ಬಿಡು. ಭಾರಿಯ ಯೋಚನೆ ಇದ್ದು ಬೇಟೆಯಲ್ಲಿ ಮುಳುಗಿದಾಗ ಇದು ಬರೋಕಿಲ್ಲ. ಹಂಗೇ ಮಾಡೋದು" ಎಂದಿತು ಒಂದು ಮನಸ್ಸು. ಇನ್ನೊಂದು ಮನಸ್ಸು "ಅವಳನ್ನೂ ಕರೆದುಕೊಂಡು ಹೋಗಬಾರದೇನು?" ಎಂದಿತು. ಅದಕ್ಕೆ "ಛೇ! ಛೇ! ಅದು ಹೆಂಗೆ ಸಾಧ್ಯ? ಆ ಕಂದ ಕುದುರೆಯ ಮೇಲೆ ಕೂತುಕೋಲಾರದು. ಅಲ್ಲದೆ, ಆ ರಾಕ್ಷಸ ಹಂದಿಗಳು ಘುರ್ ಘುರ್ ಎಂದು ನುಗ್ಗುವಾಗ ಭಾರಿ ಎದೆಗಾರರೇ ಹೆದರೋವಾಗ, ಆ ಕಂದ ಅದನ್ನು ಕಂಡು ಬದುಕೀತೇ?" ಎಂದು ಉತ್ತರವೂ ಬಂತು.

ಕುದುರೆ ಇಳಿದು ಗುಡಾರದೊಳಕ್ಕೆ ಹೋಗುತ್ತಿದ್ದ ಹಾಗೆಯೇ ನಿರಾಭರಣ ಸುಂದರಿಯಾಗಿ ಒಂದು ರೇಶಿಮೆ ಲಂಗ ಉಟ್ಟು ರವಕೆ ತೊಟ್ಟುಕೊಂಡಿದ್ದ ಮಲ್ಲಿಯೇ ಎದುರಿಗೆ ಬಂದಳು. ಗೌಡನು ವಿಶ್ವಾಸದಿಂದ ಅವಳನ್ನು ತಬ್ಬಿಕೊಂಡು, ಮುತ್ತು ಕೊಟ್ಟು "ಮಲ್ಲೀ, ಕುದುರೆ ಕೊಟ್ಟರೆ ಹತ್ತೀಯಾ?" ಎಂದನು. ಅವಳೂ ಸಹಜವಾಗಿ, ಸರಳವಾಗಿ, "ತಮ್ಮ ಹಂಗೆ ಆ ಭಾರೀ ಕುದುರೆ ಆಗೋಕಿಲ್ಲ. ಪುಟ್ಟ ಕುದುರೆ ಕೊಟ್ಟರೆ ಆಗಬೊಯ್ದು" ಅಂದಳು.

ನಾಯಕನ ಆಶ್ಚರ್ಯಕ್ಕೆ ಪಾರವೇ ಇರಲಿಲ್ಲ. ತಿರುಪದ ಮಲ್ಲಣ್ಣನ ಮಗಳಿಗೆ ಈ ಬುದ್ಧಿ ಹಂಗೆ ಬಂತು ಎನ್ನಿಸಿ ಯೋಚನೆ ಮಾಡಿಸಿತು. ಹಿಂದೆ ಯಾವಾಗಲೋ ಯಾರ ಬಾಯಲ್ಲೋ ಮಲ್ಲಣ್ಣನ ಹೆಂಡತಿ ಮಗು ಕೊಂಡುಕೊಂಡಿದ್ದುದು ಕೇಳಿದ್ದ ನೆನೆಪಾಯಿತು. ಇದರ ಮೂಲ ಹಿಡೀ ಬೇಕು ಅನ್ನಿಸಿತು. ಅದು ಮುಂದಲ ಮಾತು ಎಂದು ಅದನ್ನೂ ಅತ್ತ ನೂಕಿ, ಕುದುರೆಯನ್ನು ಒರಸುತ್ತಿದ್ದ ಹಕೀಂನನ್ನು ನೋಡಿ "ಬಾ! ಹಕೀಂ, ನಮ್ಮ ಮಲ್ಲಿಗೊಂದು ಪುಟ್ಟ ಕುದುರೆ,

ಒಳ್ಳೇ ಜಾತಿ ಮರಿ, ನೋಡಲಾ !" ಎಂದನು.

ಹಕೀಂನು ಎಂದಿನಂತೆ 'ಅಪ್ಪಣೆ ಖಾವಂದ್' ಎಂದು ಸಲಾಂ ಮಾಡಿದನು.

ಅವೊತ್ತೆಲ್ಲ ನಾಯಕನು ಹತ್ಯಾರುಗಳ ಜೊತೆಯಲ್ಲಿ ಇದ್ದನು. ಅವುಗಳನ್ನೆಲ್ಲಾ ಒರೆಸಿ, ಎಣ್ಣೆ ಮಜ್ಜನ ಮಾಡಿಸಿ, ಅವುಗಳನ್ನೆಲ್ಲಾ ಪರೀಕ್ಷೆಮಾಡಿ, ಇಡಿಸುವುದರಲ್ಲಿ ಸಂಜೆಯಾಯಿತು. ಮಲ್ಲಿ ಪಕ್ಕದಲ್ಲಿಯೆ ಇದ್ದರೂ, ಅವನಿಗೆ ಅವಳ ಕಡೆ ನೋಡಿದಾಗ ಆ ಯೋಚನೆ ಬಲವಾದರೂ, ಮತ್ತೆ ಕಾರ್ತಿಕದ ಮೋಡಗಳಂತೆ ಹಾರಿ ಹೋಗುತ್ತಿತ್ತು. ನಾಯಕನ ಮನಸ್ಸು ತನ್ನ ಮನೆತನದ ಕೀರ್ತಿಯನ್ನು ಏಳು ಕಡಲುಗಳಿಗಾಚೆಯ ಲಂಡನ್ನಿನ ಅರಮನೆಯಲ್ಲಿ ಪ್ರತಿಷ್ಠಾಪಿಸುವ ಯೋಚನೆ ತಾನೇ ತಾನಾಗಿತ್ತು.

೬

ಬುಧವಾರ ಬೆಳಗಾಗುವುದರೊಳಗಾಗಿ ನಾಯಕನು ಎದ್ದು ಸ್ನಾನ ಶಿವಪೂಜೆಗಳನ್ನು ಮುಗಿಸಿದ್ದನು. ಅವನು ಉಪಾಹಾರ ಕಾಲದಲ್ಲಿ ಮಗ್ಗುಲಲ್ಲಿ ಮಲ್ಲಿಯಿದ್ದಾಳೆಯೋ ಎಂದು ತಿರುಗಿ ನೋಡಿದನು. ವಿಚಾರಿಸಿದನು. 'ಇನ್ನೂ ಎದ್ದಿಲ್ಲ' ಎಂದು ವರದಿಬಂತು. 'ಹೋಗಿ ಕರೆದುಕೊಂಡು ಬಾ' ಎಂದು ಅಪ್ಪಣೆಯಾಯಿತು. ಮಲ್ಲಿಯು ಎದ್ದು ಮೊಕ ತೊಳೆದುಕೊಂಡು ಬಂದಳು. ನಾಯಕನು ತನ್ನ ತಟ್ಟೆಯಿಂದಲೇ ಒಂದು ದೋಸೆ, ಒಂದು ನಿಂಬೇಕಾಯಿಗಾತ್ರ ಬೆಣ್ಣೆ, ಒಂದು ಅಷ್ಟು ಚಟ್ನಿ ತೆಗೆದು, 'ಇದು ತಿಂದುಬಿಟ್ಟು ಹೋಗಿ ಮಲಗಿಕೊ' ಎಂದು ಹೇಳಿ ಅವಳಿಗೆ ಕೊಟ್ಟನು. ತಾನೂ ದಿನಕ್ಕಿಂತ ಕೊಂಚ ಹೆಚ್ಚಾಗಿ ತಿಂದು, ಹೊರಟನು.

ನಿಯತಕಾಲಕ್ಕೆ ಪಾರ್ಟಿಯು ಬೇಟೆಗೆ ಹೊರಟಿತು. ಆನೆ

ಕಟ್ಟುವ ಪೂಲ್ ಖಾನೆಯಿಂದ ಸುಮಾರು ಎರಡು ಮೂರು ಮೈಲಿ ಪಶ್ಚಿಮಕ್ಕೆ ಕಪಿಲಾ ನದಿಯ ಮಗ್ಗುಲಲ್ಲಿ ಒಂದು ತಗ್ಗು. ಬೆಟ್ಟ ನದಿಯ ಆಚೆ ಮೇಲಕ್ಕೆ ಎದ್ದಿದೆ. ಇತ್ತಕಡೆ ಕೊನ್ನಾರಿಗೆಡ್ಡೆ ಹೆಚ್ಚಿರಳುಗಾತ್ರ ಬೆಳೆಯುವ ಮರಳುಭೂಮಿ. ನದಿಯಲ್ಲಿ ಆಳುದ್ದ ನೀರು ಬಂದರೆ, ಅಲ್ಲಿ ಮಂಡಿಉದ್ದ ನೀರು ನಿಲ್ಲುವುದು. ಅದಕ್ಕೆ ಹಂದಿಯ ಕಣಿವೆ ಎಂದೇ ಹೆಸರಂತೆ ಹಿಂದೆ. ಅಲ್ಲಿಗೆ ಪಾರ್ಟಿಯು ಕುದುರೆಯಮೇಲೆ ಹೋಯಿತು.

ಇಪ್ಪತ್ತು ಇಪ್ಪತ್ತೈದು ಎಕರೆಯಗಲದ ಒಂದು ಬೀಡು ಅಥವಾ ಹುಲ್ಲು ಬೆಳೆದ ಹಾಳು. ಬೆಟ್ಟದ ಮೇಲಿಂದ ಅಲ್ಲಿಗೆ ಇಳಿಯ ಬೇಕು. ಬೆಟ್ಟದ ಮಗ್ಗುಲಿನ ಇಳಿಜಾರಿನಲ್ಲಿ ಒಂದೊಂದು ಭಾರಿಯ ಮರ. ಚೆನ್ನಾಗಿ ಗುತ್ತಿಕಟ್ಟಿಕೊಂಡು ಮರೆಯಾಗಿ ಕುಳಿತುಕೊಳ್ಳು ವುದಕ್ಕೆ ಅನುಕೂಲವಾಗಿದೆ. ಹಿಂದಿನ ದಿನವೇ ಅರಣ್ಯದ ಇಲಾಖೆ ಯವರು ಹೋಗಿ, ಅಲ್ಲಿ ಪಾರ್ಟಿಯವರು ಕುಳಿತುಕೊಳ್ಳುವುದಕ್ಕೆ ಬೇಕಾದ ಅಟ್ಟಗಳನ್ನು ಕಟ್ಟಿ ದಿಂಬು ಮೆತ್ತೆ ಎಲ್ಲಾ ಹಾಕಿ ಬಂದಿದಾರೆ. ಮುಂದೆ ಬೇಟೆಯ ಮೈದಾನದಲ್ಲೂ ಹುಲ್ಲುಗಿಲ್ಲು ಕಿತ್ತು ಕುದುರೆಯ ಮೈಹಾಳಿಗೆ ಅನುಕೂಲ ಮಾಡಿದ್ದಾರೆ. ಎದುರಿಗೆ ಮೈದಾನದಲ್ಲಿ ದೂರದಲ್ಲಿ ಬೆಳೆದಿರುವ ಹುಲ್ಲಿನ ನಡುವೆ ಏನೋ ಓಡಾಡುತ್ತಿರುವಂತೆ ಕಾಣುತ್ತಿದೆ.

ಬೆಟ್ಟದ ಮೇಲಿನವರೆಗೂ ಕುದುರೆಯಮೇಲೆ ಬಂದು ಪಾರ್ಟಿಯು ತಮ್ಮ ತಮ್ಮ ಆಸನಗಳಲ್ಲಿ ಕುಳಿತರು. ನಾಯಕನ ಆಳುಗಳು ಚರ್ಮದ ಬೂಟುಗಳನ್ನು ಧರಿಸಿ ತಮ್ಮ ಆಯುಧಗಳ ಜೊತೆಗೆ ನಾಯಕನ ಆಯುಧಗಳನ್ನು ತೆಗೆದುಕೊಂಡು ಬಂದರು. ನಾಯಕನ ರಾಣಿಯು ಆಗಲೇ ಬಂದು ಅಲ್ಲಿ ಹುಲ್ಲುಮೇಯುತ್ತಾ ನಿಂತಿತ್ತು.

ನಾಯಕನು ಕುದುರೆಯನ್ನು ಹತ್ತಿ, ತನ್ನ ಭಲ್ಲೆಯ ತೆಗೆದು ಕೊಂಡನು. ಮಗ್ಗುಲಲ್ಲಿ ಹಲಗೆಕತ್ತಿ ಒರೆಯಲ್ಲಿ ನೇತಾಡುತ್ತಿತ್ತು. ಅದರ ಮಗ್ಗುಲಲ್ಲಿಯೇ ಒಂದು ಭಾರಿಯ ಗುರಾಣಿ. ಹಿಂದುಗಡೆ ಜೀನಿನ ಮಗ್ಗುಲಲ್ಲಿ ಒಂದು ಚರ್ಮದ ಹಗ್ಗ. ನಡುವಿನಲ್ಲಿ ಬೆಲ್ಟಿನ ಹಾಗೆ ಸುತ್ತಿಕೊಂಡಿರುವ ಪಟ್ಟಾಕತ್ತಿ. ತಲೆಯಮೇಲೆ ರುಮಾಲಿನ ಮೇಲಿನಿಂದ ಬಿಗಿದು ಕಟ್ಟಿಕೊಂಡಿರುವ ರೇಶಿಮೆಯವಸ್ತ್ರ. ಕಾಲಿಗೆ

ಫುಲ್‌ಬೂಟ್. ಕೈಗೆ ಚರ್ಮದ ಚೀಲ.

ಪಾರ್ಟಿಯವರೆಲ್ಲರೂ ಸುಖಾಸೀನರಾಗಿದ್ದಾರೆಂದು ಆದಮೇಲೆ ಒಂದು ಸಿಳ್ಳು ಕೇಳಿಸಿತು. ನಾಯಕನು ಹಿಂತಿರುಗಿ ನೋಡಿ ಮಹಾ ರಾಜರಿಗೆ ಕೈಯೆತ್ತಿ ಸಲಾಂಮಾಡಿ, ಕುದುರೆಯನ್ನು ಚಮಕಾಯಿಸಿದನು. ಕುದುರೆಯು ಮೈದಾನಕ್ಕೆ ಇಳಿಯಿತು. ಆಳೊಬ್ಬನು ಬಂದು ಏನೋ ಘುರ್ ಘುರ್ ಎಂದು ಸದ್ದು ಮಾಡಿದನು. ಎದುರುಗಡೆ ಒಂದು ಭಾರಿಯ ಹಂದಿಯು ತಲೆಯೆತ್ತಿ ನೋಡಿತು. ಹಿಂದಿನಿಂದ ಒಬ್ಬ ಕುದುರೆಯವನು ಸರ್ ಎಂದು ಬಂದು ಅದನ್ನು ದೊಣ್ಣೆಯಿಂದ ತಿವಿದು ಮುಂದೆ ಓಡಿಹೋದನು. ಹಂದಿಯು ಘುರ್ ಘುರ್ ಎನ್ನುತ್ತಾ ಒಂದು ಸೆಕೆಂಡ್ ಅವನನ್ನು ನೋಡುತ್ತಿದ್ದು ಅವನನ್ನು ಅಟ್ಟಿಕೊಂಡು ಓಡಿತು. ಅವನು ಬೇಟೆಯ ಮೈದಾನಕ್ಕೆ ಬಂದು ಬೆಟ್ಟ ಹತ್ತಿ ಮರಗಳ ಗುತ್ತಿಯೊಂದರಲ್ಲಿ ಮರೆಯಾದನು.

ಆ ಹಂದಿಯು ಅವನನ್ನು ನೋಡುತ್ತ ನುಗ್ಗುತ್ತಿದೆ. ದಾರಿಯಲ್ಲಿ ನಾಯಕನು ಕುದುರೆಯ ಮೇಲೆ ಇದ್ದವನು ಮುಂದೆ ನುಗ್ಗಿ ಅದನ್ನು ಅಡ್ಡಹಾಯ್ದನು. ಹಂದಿಯು ಮೊದಲು ಹೋಗುತ್ತಿದ್ದ ದಾರಿ ಬಿಟ್ಟು ನಾಯಕನ ಕಡೆ ತಿರುಗಿತು. ಓಡಿದಂತೆ ಓಡುತ್ತಿದ್ದ ಕುದುರೆಯನ್ನು ತಟ್ಟನೆ ಹಿಂಗಾಲು ಮೇಲೆ ನಿಲ್ಲಿಸಿ ಕುದುರೆಯನ್ನು ತಿರುಗಿಸಿದನು. ಹಂದಿಯು ಮೊಕಾಮೊಕಿಯಾಗಿ ಬಂದಿದೆ. ಇನ್ನೊಂದೇ ಗಜ. ನುಗ್ಗುತ್ತಿರುವ ಹಂದಿ ನೇರವಾಗಿ ನುಗ್ಗಿದರೆ ಕುದುರೆಯ ಹಿಂಗಾಲುಗಳ ನಡುವೆಯೇ ನುಗ್ಗಬೇಕು.

ಅಷ್ಟರಲ್ಲಿ 'ಜಯಶಂಕರ್' ಎಂಬ ಧ್ವನಿ, ಕೂಗು, ಆರ್ಭಟ, ಮೊಳಗಿತು. ಕಿಬ್ಬದಿ, ಕಿನಾರಿ, ನದಿ, ಬೆಟ್ಟ ಎಲ್ಲವೂ ಆ ಕೂಗಿಗೆ ಮರು ಕೂಗು ಕೊಟ್ಟವು. ಕುದುರೆಯ ಸವಾರನು ತನ್ನ ಭಲ್ಲೆಯದ ಕೆಳತುದಿಯಿಂದ ಹಂದಿಯನ್ನು ತಿವಿದನು. ಓಡುತ್ತಿದ್ದ ಹಂದಿ ಮಗ್ಗುಲಾಗಿ ಬಿತ್ತು. ಅದು ಮತ್ತೆ ಏಳುವುದರೊಳಗಾಗಿ ಇನ್ನೊಂದು ಗುಡುಗಿನಂತಹ 'ಜಯಶಂಕರ್'. ಅದರ ಪ್ರತಿ ಧ್ವನಿ ಮೊಳಗುವುದರೊಳಗಾಗಿ ನಾಯಕನು ಹಂದಿಯನ್ನು ಭಲ್ಲೆಯದಿಂದ ಇರಿದಿದ್ದಾನೆ.

ಭಲ್ಲೆಯು ಹಂದಿಯ ಹೊಟ್ಟೆಯನ್ನು ತೂತು ಕೊರೆದುಕೊಂಡು ಹೋಗಿ ನೆಲದಲ್ಲಿ ಹೂತು ಕೊಂಡಿದೆ. ಹಂದಿಯು ಮೇಲಕ್ಕೆ ಏಳುವುದಕ್ಕೆ ಭಯಂಕರ ವಾದ ಪ್ರಯತ್ನ ಎರಡು ಸಲ ಮಾಡಿ, ಏಳಲಾರದೆ ತಲೆ ಕೆಳಕ್ಕೆ ಹಾಕಿತು.

ಮತ್ತೊಂದು ಅಷ್ಟೇ ಭಾರಿಯ ಹಂದಿ, ಆ ಮೈದಾನದ ಆಚಿನ ಹುಲ್ಲುಗಾವಲಿನ ಅಂಚಿನಲ್ಲಿ ಬಂದು ನಿಂತಿದೆ. ನೋಡಿದರೆ, "ಆಗಲಿ. ಆ ಹಂದಿಯ ಬೇಟೆ ಆದಮೇಲೆ ನುಗ್ಗೋಣ" ಎಂದುಕೊಂಡೇ ನಿಂತಿರುವಂತಿದೆ. ನಾಯಕನು ಅದನ್ನು ಕಂಡು ಕುದುರೆಯನ್ನು ಅತ್ತ ತಿರುಗಿಸಿದನು. ಹಂದಿಯು ಲಕ್ಷ್ಯವಿಲ್ಲವೆ ನಿಂತಿದೆ. ಕುದುರೆಯು ಬಳಿಯಲ್ಲಿಯೇ ಹಾದು ಹೋಯಿತು. ನಾಯಕನು ಅದು ಯಾವ ಮಾಯೆಯಲ್ಲಿ ಚರ್ಮದ ಹಗ್ಗ ಬಿಚ್ಚಿದನೋ, ಅದು ಯಾವ ಮಾಯೆಯಲ್ಲಿ ಅದನ್ನು ತಿರುಗಿಸಿದನೋ,—ಅಂತೂ ಏನೋ ತಿರುಗುತ್ತಿದ್ದುದು ಕಾಣಿಸುತ್ತಿತ್ತು – ಅದು ಯಾವ ಮಾಯೆಯಿಂದ ಅದನ್ನು ಪ್ರಯೋಗಿಸಿದನೋ ಯಾರಿಗೂ ತಿಳಿಯಲಿಲ್ಲ. ಅಂತೂ ಇನ್ನೊಂದು ಗಳಿಗೆಯೊಳಗಾಗಿ ಹಂದಿ ಪಾಶಕ್ಕೆ ಸಿಕ್ಕಿದೆ. ಅಷ್ಟೇ ಅಲ್ಲ. ಕುದುರೆಯು ಇನ್ನೂ ಎರಡು ಹೆಜ್ಜೆ ಮುಂದಿಡುವುದರೊಳಗಾಗಿ ಆ ಚರ್ಮದ ಹಗ್ಗದ ಎಳೆತಕ್ಕೆ ಸಿಕ್ಕಿ, ಒದ್ದಾಡುತ್ತ ಮೇಲಕ್ಕೆ ಹಾರಿ ಹಿಂಗಣ್ಣು ಹೊಡೆದ ಧೀರನಂತೆ ಹಾರಿ ನೆಲದ ಮೇಲೆ ಬಿದ್ದಿದೆ. ಅದು ಒದ್ದಾಡಿಕೊಂಡು ಮೇಲಕ್ಕೆ ಏಳುವುದರೊಳಗಾಗಿ ಕುದುರೆಯ ಮೇಲಿನ ಸವಾರ ಹಿಂತಿರುಗಿ ಬಂದು ತಾನು ಹಿಡಿದಿದ್ದ ಹಗ್ಗ ಅದರ ಮೇಲೆ ಎಸೆದು ಮುಂದಕ್ಕೋಡಿದ್ದಾನೆ. ಹಂದಿಯು ಯದ್ವಾತದ್ವಾ ರೇಗಿ ಕುದುರೆಯ ಕಡೆ ಓಡುತ್ತಿದೆ. ಒಂದು ನೂರು ಗಜ ಅದೂ ಕುದುರೆಯನ್ನು ಓಡಿಸಿಕೊಂಡು ಬಂದಿದೆ. ಆಗ ಕುದುರೆ ಮೇಲಕ್ಕೆ ನೆಗೆಯಿತು. ಹಂದಿ ಮುಂದಾಯಿತು. ಕುದುರೆ ಕೆಳಕ್ಕಿಳಿದು ಹಂದಿಯನ್ನು ಅಟ್ಟಿಸಿಕೊಂಡು ಓಡಿತು. ಕುದುರೆಯ ಮೇಲಿದ್ದ ಆಳು ಬಗ್ಗಿದನು. ಕುದುರೆಯೂ ನೆಲವನ್ನು ಮುಟ್ಟುವಂತೆ ಬೆನ್ನು ಬಗ್ಗಿಸಿತು. ಅದು ಯಾವ ಮಾಯೆಯಲ್ಲೋ ನಾಯಕನ ನಡುವಿನಲ್ಲಿದ್ದ ಪಟ್ಟಾಕತ್ತಿ

ಈಚೆಗೆ ಬಂದಿತ್ತು : ಆ ಕೈ ಅದನ್ನು ಯಾವ ಮಾಯೆಯಲ್ಲಿ ಸೆಳೆದಿತ್ತೋ ಅದೇ ಮಾಯೆಯಲ್ಲಿ ಝಳಪಿಸಿ, ಅದೇ ಮಾಯೆಯಲ್ಲಿ ಹಂದಿಯನ್ನು ಹೊಡೆಯಿತು. ರೆಪ್ಪೆ ಮುಚ್ಚುವುದರೊಳಗಾಗಿ ಹಂದಿ ಎರಡು ಪಾಲಾಗಿತ್ತು. ಮುಂದಿನ ಪಾಲು ಕುದುರೆಯೊಡನೆ ಓಡಲು ಹಾರಿತು : ಹಿಂದಿನ ಪಾಲು ಧೊಪ್ಪನೆ ಬಿತ್ತು.

ಅಟ್ಟದಮೇಲೆ ಕುಳಿತಿದ್ದ ರಾಜಕುಮಾರನು 'ಫೈನ್, ಫೈನ್! ಎಕ್ಸೆಲೆಂಟ್' ಎಂದು ಕೂಗಿಯೇ ಬಿಟ್ಟನು. ಮಹಾರಾಜರು ಎಲ್ಲಿ ಎದ್ದುಬಿಡುವನೋ ಎಂದು ಅವನನ್ನು ತಡೆದು, 'ಇನ್ನೂ ಒಂದು ಇದೆ' ಎಂದರು. ಆತನೂ 'ಹೌದು! ಹೌದು!' ಎಂದು ಕುಳಿತನು.

ಆ ವೇಳೆಗೆ ನಾಯಕನು ಕುದುರೆಯಿಂದ ಇಳಿದಿದ್ದನು. ಅವನ ಜೊತೆಯಲ್ಲಿಯೇ ಹಲಗೆಕತ್ತಿ ಗುರಾಣಿಯೂ ಕುದುರೆಯಿಂದ ಇಳಿದಿದ್ದುವು. ಮೂರನೆಯ ಹಂದಿಯನ್ನು ಮೃತ್ಯುವೇ ಕರೆತಂದಿತು ಎಂಬಂತೆ ಆಗಿ, ಅದು ಗದ್ದಲವೇನು ನೋಡುವುದಕ್ಕೆಂದು ಬಂದು, ಇಬ್ಬರು ಸಜಾತೀಯರ ಮರಣದಿಂದ ರೇಗಿ, ಅವರ ಸೇಡು ತೀರಿಸಿಕೊಳ್ಳುವುದಕ್ಕೆ ಬರುತ್ತಿರುವಂತೆ ರೋಷಾವೇಶದಿಂದ ನುಗ್ಗಿತು. ನಾಯಕನು ವಿಚಿತ್ರವಾಗಿ ಭಯಂಕರವಾಗಿ ಅಬ್ಬರಿಸುತ್ತಾ ಅದಕ್ಕೆದುರು ನುಗ್ಗಿದನು. ಆಗ ಅವನನ್ನು ನೋಡಿದರೆ, ಭಯಂಕರನಾದ ರಾಕ್ಷಸನೋ ಎಂಬಂತಿತ್ತು. ಆ ಕೂಗು, ಆ ಆಕಾರ, ಎರಡೂ ಅಮಾನುಷ! ಅವನು ಕಾಲಿಟ್ಟಕಡೆ ಭೂಮಿ ಜಗ್ಗುವಂತಿದೆ. ನೋಡುತ್ತಿದ್ದವರಿಗೆ ಭಯವಾಗುತ್ತಿದೆ.

ಹಂದಿಯು ಘುರ್‌ಘುರ್ ಎಂದು ಮೊರೆಯುತ್ತಾ ಮುನ್ನುಗ್ಗಿತು. ಮನುಷ್ಯನಲ್ಲ, ಒಂದು ಆನೆ ಎದುರಿಗೆ ಇದ್ದರೂ ರೋಷಭೀಷಣವಾದ ಆ ಹಂದಿಯ ನುಗ್ಗಾಟ ಕಂಡು ಕಿರಿಚಿಕೊಳ್ಳಬೇಕು. ಹಾಗಿರುವಾಗ ಮನುಷ್ಯನು ವೀರಭದ್ರನ ಹೆಜ್ಜೆಹಾಕಿಕೊಂಡು ಹಲಗೆ ಕತ್ತಿಯನ್ನೂ, ಗುರಾಣಿಯನ್ನೂ ಝಳಪಿಸುತ್ತಾ ಸಿಂಹನಾದಮಾಡುತ್ತ ಮುಂದರಿಯುತ್ತಿದಾನೆ. ಹಂದಿಯ ಸದ್ದು ಮನುಷ್ಯನ ಆರ್ಭಟದಲ್ಲಿ ಮುಚ್ಚಿಹೋಗಿದೆ. ಎದುರುಗಡೆಯ ಬೆಟ್ಟವೂ ಸಿಂಹನಾದ ಮಾಡುತ್ತಿದೆಯೋ

ಎಂಬಂತೆ ಮಾರ್ದನಿ ಮೊಳಗುತ್ತಿದೆ. ಹಂದಿಯು ಬಂತು. ಮಾನವ ಅದನ್ನು ಎದುರಿಸಿದ. ಅದರಂತೆಯೇ ಬಗ್ಗಿ ಅದರ ಮುಸಡಿಯ ಕೆಳಗೆ ಗುರಾಣಿಯನ್ನು ಚುಚ್ಚಿ ಮೇಲಕ್ಕೆತ್ತಿದ. ಅದರ ಮುಸಡಿ ಇರಲಿ, ಹಂದಿಯೇ ಮೇಲೆದ್ದು ಹಿಂಗಾಲಿನಮೇಲೆ ನಿಂತಿತು. ಮನುಷ್ಯ ಅತಿ ಮಾನವನಾಗಿ, ದೂರದಲ್ಲಿರುವವರ ಎದೆಯೂ ನಡುಗುವಂತೆ ಭಯಂಕರ ವಾಗಿ ಜಯಶಂಕರ್ ಎಂದು ಕೂಗುತ್ತಾ ಹಂದಿಯನ್ನು ತಳ್ಳಿಕೊಂಡು ಹೊರಟ. ಹಂದಿ ಮೊದಲೇ ಓಡುತ್ತಿದ್ದುದು ಈಗ ಭೀಮಬಲದಿಂದ ತಳ್ಳಿಸಿಕೊಳ್ಳುತ್ತಾ ಏನು ನಿಂತೀತು? ಹಿಂದಕ್ಕೆ ಬಿತ್ತು.

ಮನುಷ್ಯನು ತನ್ನ ಮನುಷ್ಯತ್ವವನ್ನು ಬಿಟ್ಟು ಮೃಗಕ್ಕೂ ಮೀರಿದ ಅತಿಮೃಗವಾದನೋ ಎಂಬಂತೆ, ಹಾರಿ ಜಯಶಂಕರ್ ಎಂದು ಅದರ ಹೊಟ್ಟೆಯನ್ನು ಮೆಟ್ಟಿ ಮುಂದಕ್ಕೆ ಹಾರಿ ಹೊರಟುಹೋದ. ಹಂದಿಯು ಪದಾಘಾತವನ್ನು ತಡೆಯಲಾರದೆ ಮಿಲಮಿಲನೆ ಒಂದು ಗಳಿಗೆ ಒದ್ದಾಡಿ ಮೇಲಕ್ಕೆ ಏಳುವುದಕ್ಕೆ ಹೋಯಿತು. ಮತ್ತೆ ಮಾನವಮೃಗವು ಬಂದು ಅದರ ಪಕ್ಕೆಯಲ್ಲಿ ಒದೆಯಿತು. ಅದು ಮತ್ತೆ ಬಿತ್ತು. ಮತ್ತೆ ಅದೇ ರಾಕ್ಷಸ ಪದಾಘಾತ. ಮತ್ತೆ ಅದನ್ನು ತಡೆಯಲಾರದ ಮೃಗದ ಒದ್ದಾಟ. ಮತ್ತೆ ಅದು ಸಾಹಸಮಾಡಿ ಎದ್ದಿದೆ. ನೋವಿನಿಂದ ಅಳ್ಳೆಗಳು ತಿದಿಗಳಂತೆ ಆಡುತ್ತಿವೆ. ಆದರೂ ಅದರ ಹಟ. ಎದ್ದು ಮತ್ತೆ ಎದುರಾಳಿಯಮೇಲೆ ನುಗ್ಗುತ್ತದೆ. ಆ ಎದುರಾಳಿ ಈ ಸಲ ಇನ್ನೂ ಭಯಂಕರವಾಗಿ ಕೂಗುತ್ತಾ, ಘುರಾಯಿಸಿಕೊಂಡು ಬರುತ್ತಿ ರುವ ಆ ಭಾರಿಯ ಹಂದಿಯನ್ನು ಗುರಾಣಿಯಿಂದ ಮುಸುಡಿಗೆ ತಿವಿದಿ ದ್ದಾನೆ. ಅದು ಅತ್ತ ಕಡೆ ಆ ತಿವಿತದಿಂದ ತಿರುಗಿದೆ. ಹಲಗೆ ಕತ್ತಿಯು ಜಯಶಂಕರ್ ಕೂಗಿನೊಡನೆ ಕೆಳಕ್ಕೆ ಇಳಿಯಿತು. ಹಂದಿಯ ಕತ್ತು ಹಾರಿಹೋಯಿತು, ಮುಂಡವು ಬಿಸಿರಕ್ತವು ಚಿಲ್ಲನೆ ಹಾರುತ್ತಿರಲು ಅಷ್ಟು ದೂರ ಹೋಗಿ ಉರುಳಿತು.

ಮರಗಳಲ್ಲಿದ್ದವರು ತಾವು ಎಲ್ಲಿರುವೆವು ಏನು ಎಂಬ ಯೋಚ ನೆಯೇ ಇಲ್ಲದೆ ಕೈಚಪ್ಪಾಳೆಯಿಕ್ಕಿ ಕೂಗಿಬಿಟ್ಟರು. ನಾಯಕನು ಹೋಗಿ ಮೂರು ಹಂದಿಗಳಿಗೂ ಪ್ರತಿಯೋದ್ಧರಿಗೆ ಮಾಡುವಂತೆ ಸಲಾಂ ಮಾಡಿ,

ಅವುಗಳ ರಕ್ತದೊಳಕ್ಕೆ ಬೆರಳದ್ದಿ ರುಚಿನೋಡುವಂತೆ, ನಾಲಗೆಯ ಮೇಲಿಟ್ಟು, ಮುಂದೆ ಬಂದನು.

ರಾಕ್ಷಸನು ಮಾನವನಾಗಿದ್ದನು. ಉಗ್ರತೆಯು ಮಾಯವಾಗಿ ಶಾಂತತೆಯು ಮುಖದಲ್ಲಿ ಮೂಡಿ, ನಗುವು ತಾಂಡವವಾಡುತ್ತಿತ್ತು. ತನ್ನ ಕಿಸೆಯಿಂದ ಒಂದು ವಸ್ತ್ರವನ್ನು ತೆಗೆದು ಮೊಕವನ್ನೊರಸಿಕೊಂಡು, ಏನೂ ಆಗದಿರುವಾಗ ಸುಖವಾಗಿ ನಡೆಯುವಂತೆ, ನಡೆದುಕೊಂಡು ಕುದುರೆಯ ಬಳಿಗೆ ಬಂದನು. ಅವನನ್ನು ಕಂಡು ಕುದುರೆಯು ಪ್ರೀತಿಯಿಂದ ಕೆನೆಯುತ್ತಾ ಅವನ ಬಳಿಗೆ ತಾನೇ ಬಂದು ಮೂತಿಯನ್ನು ಅವನ ಮೂತಿಯಲ್ಲಿಟ್ಟು ಮೊಕಕ್ಕೆ ಮೊಕವನ್ನು ಒರೆಸಿತು.

ರಾಜಕುಮಾರನು ಅದನ್ನು ಕಂಡು, 'ಅಬ್ಬಾ! ಕುದುರೆಗೆ ಮನುಷ್ಯನಮೇಲೆ ಇಷ್ಟು ಪ್ರೀತಿ ಸಾಧ್ಯವೇ!' ಎಂದನು. ಹಿಂತಿರುಗಿ ಹೆಂಡತಿಯ ಕಡೆ ನೋಡಿ, 'ಮನುಷ್ಯರು ಇಷ್ಟು ಪ್ರೀತಿಸಬಲ್ಲರೆ?' ಎಂದನು. ಅದು ಕೇಳಿಸಲಿಲ್ಲ. ಆಕೆಯೂ ಅದೇ ಭಾವನೆಯಿಂದ ಹಾಗೇ ಹೇಳಿಕೊಳ್ಳುತ್ತ ಕಣ್ಣಲ್ಲಿ ಬಂದ ನೀರನ್ನು ಒರೆಸಿಕೊಳ್ಳುವುದರಲ್ಲಿದ್ದಳು.

ಮಹಾರಾಜರಿಗೆ ಒಂದು ಗಳಿಗೆ ಅಭಿಮಾನದಿಂದ ಭಾವ ಸಮಾಧಿಯು ಬಂದಿತ್ತು. ರಾಜಕುಮಾರನು ರೆಸಿಡೆಂಟನನ್ನು ಕರೆದು "ಆತನಿಗೊಂದು ಟೈಟಲ್ ಕೊಡುತ್ತೀರಿ ತಾನೆ?" ಎಂದನು. ಆನಂದದಿಂದ ಮೈಮರೆತು ಇನ್ನೂ ಪೂರ್ಣವಾಗಿ ಪ್ರಜ್ಞೆಯಿಲ್ಲದ ರೆಸಿಡೆಂಟನು 'ಅಪ್ಪಣೆ' ಎಂದನು.

ಬೇಟೆ ಮುಗಿದಮೇಲೆ ನಾಯಕನು ತಾನಾಗಿ ಮಾತನಾಡುವವರೆಗೂ ಯಾರೂ ಮಾತನಾಡಿಸಕೂಡದೆಂದು ಮೊದಲೇ ಗೊತ್ತಾಗಿತ್ತು. ಅದರಿಂದ ದೂರದಿಂದಲೇ ಎಲ್ಲರೂ ತಮ್ಮ ಸಂತೋಷವನ್ನು ಸೂಚಿಸಿ ಹೊರಟುಹೋದರು.

೧೦

ನಾಯಕನು ನಿದ್ದೆಯಿಂದ ಏಳುವ ವೇಳೆಗೆ ಸುಮಾರು ಐದು ಗಂಟೆಯಾಗಿತ್ತು. ಆ ವೇಳೆಗೆ ಅಮಲ್ದಾರನು ಎರಡು ಮೂರು ಸಲ ಬಂದು ಹೋಗಿದ್ದನು.

ನಾಯಕನು ಎದ್ದು ಕೈಕಾಲು ತೊಳೆದುಕೊಂಡು ಬರುವ ವೇಳೆಗೆ ಅಲ್ಪಾಹಾರವಾಗಿ ಮಾಂಸಭೋಜನವು ಬಂದಿತ್ತು. ಆ ವೇಳೆಗೆ ಅಮಲ್ದಾರನು ಬಂದನು. ಇಬ್ಬರೂ ಅಲ್ಪಾಹಾರವನ್ನು ತೆಗೆದುಕೊಳ್ಳುತ್ತ ಕುಳಿತರು.

" ಏನು ನಾಯಕರಿಗೆ ಈ ದಿನ ವೀರಾವೇಶಬಂದಿತ್ತಂತೆ ? "

"ಅದೇನು ಮಹಾ! ಬುದ್ಧಿ! ಆಗಾಗ ನಡೀತಾ ಇರೋದೆ ಇದು?"

" ಪ್ರಿನ್ಸ್ ಇಂತಹ ಬೇಟೆ ಎಷ್ಟು ನೋಡಿರಬಹುದು ! ಅಂಥವರೂ ಕೂಡ ಆಶ್ಚರ್ಯಪಟ್ಟು ಹೋಗಿದ್ದಾರೆ. ಇನ್ನೇನು ನಿಮ್ಮನ್ನು ಕರೆಯಿಸಿಕೊಳ್ಳಲೂ ಬಹುದು. "

" ಇವೊತ್ತು ನಾನು ಅವರನ್ನು ನೋಡುವುದಿಲ್ಲ. ತಪ್ಪಿಸಿಬಿಡಿ."

" ಅದೇನು ? "

" ಇವೊತ್ತು ನನಗೆ ಮನಸ್ಸು ನಯವಾಗಿರೋದಿಲ್ಲ. ಹಿಡಿದೇನು ! ಕಡಿದೇನು ! ಎಂಬಂತೆ ಇದ್ದು, ಮನಸ್ಸು ಘುರ್ಕಾಯಿಸ್ತಾ ಇರುತದೆ. ಇಂಥಾ ದಿನ ನಾನು ಮನೇಗೆ ಕೂಡ ಹೋಗೋಲ್ಲ. "

" ಮತ್ತೆ ? "

" ಅದಕ್ಕೇನು ಬುದ್ಧಿ ! ಇರೋದಿಲ್ವಾ ? ಯಾವುದಾದರೂ ಮನೆ ನುಗ್ಗಿದಾ ! ತಿಂದಾ ! ಕುಡಿದಾ ! ಮನಸ್ಸು ಹತೋಟಿಗೆ ಬಂದಮೇಲೆ ಮನೆಗೆಹೋದಾ ! "

" ಹಾಗಾದರೆ ಇವೊತ್ತು ಬೇಟೆ ಉಂಟು ? "

" ಕೇಳಬೇಬೇಕಾಗಿಲ್ಲ. ಲೇ ಯಾರೋ ! ನಂಜಪ್ಪನ ಕರೀ ! "

ನಂಜಪ್ಪ ಬಂದು ತೆರೆಯನ್ನು ಕೊಂಚತೆಗೆದು ಮೊಕತೋರಿಸಿದ :

" ಏನ್ರೀ ಎಷ್ಟುಹೊತ್ತಿಗೆ ಗಾಡೀ ಕಟ್ಟೋದು ? "
" ಸಾರೋಟು ಎಂಟು ಗಂಟೆಗೆ ಬರುತ್ತದೆ ಬುದ್ಧಿ. "
" ನೋಡಿದಿರಾ ! ನೀವೂ ಬರುತೀರಾ ಬುದ್ಧಿ ! "
" ಇವೊತ್ತು ನಿಮ್ಮ ಕೈಲಿ ಮಾತನಾಡೋಕೆ ದಿಗಿಲಾಗುತ್ತದೆ. ನೀವು ಆನೆ, ನಾವು ಆಡು ಎನ್ನುವಹಾಗಿದೆ. "

ನಾಯಕನು ಹಹ್ಹಾ ಎಂದು ಬಾಯಿಬಿಟ್ಟು ನಗುತ್ತಾ "ಇವೊತ್ತು ಇಂಥಾ ಆವೇಶ ಇಲ್ಲದಿದ್ದರೆ ಆ ರಾಕ್ಷಸ ಹಂದಿಮೇಲೆ ಬೀಳೋಕಾದೀತಾ! ಈ ಹಂದಿಬೇಟೆ ದಿನ ನಾನೂ ರಾಕ್ಷಸನೆ !–ನಂಜಪ್ಪಾ ! ಇವೊತ್ತು ಬೇಟೆ ಆಡಿರೋ ದಿನ. ನೆನೆಪದೆಯೋ ಅಂತೀನಿ" ಎಂದನು. ನುಡಿ ಹೆಚ್ಚು ಕಡಿಮೆ ಹುಲಿಯ ಸಣ್ಣ ಘರ್ಜನೆಯಂತಿತ್ತು.

" ನೆನೆಪದೆ ಬುದ್ಧಿ "

ಅಮಲ್ದಾರನಿಗೆ ಅರ್ಥವಾಗಲಿಲ್ಲ : " ಹಾಗೆಂದರೆ " ಎಂದನು.

" ಇವೊತ್ತು ನಾನು ರಾಕ್ಷಸ ಅನ್ನಲಿಲ್ಲವಾ ಬುದ್ಧಿ, ಅದೇ ಮಾತು! ಯಾವೋಳಾದರೂ ಪಾಪಿ ಪರದೇಶಿ ಇವೊತ್ತು ಬಂದರೆ ಉಳಿದಾಳಾ ! ಅದಕ್ಕೆ ಯಾವುದಾದರೂ ಕಗ್ಗಲಿತುಂಡು ನೋಡಪ್ಪಾ ! ಅಂದೆ. ಆಯಿತು ಇವೊತ್ತು ನೀವೇನಾದರೂ ನಮ್ಮ ಜೊತೇಲಿ ಬಂದೀರೋ?"

ಅಮಲ್ದಾರನಿಗೆ ಆಸೆ : ಆದರೆ ಕ್ಯಾಂಪು ? ಯಾರಾದರೂ ಥಟ್ಟನೆ ಹೇಳಿ ಕಳುಹಿಸಿದರೆ ? ಎಂದು ದಿಗಿಲು.

ನಾಯಕನು ನಕ್ಕು " ನೋಡಿ ! ಎಷ್ಟಾಗಲೀ ನೀವು ತಾಪೇದಾರ್ರು ಅನ್ನೋದು ಇದೇ ! ಸುಮ್ಮನೆ ನನ್ನ ಜೊತೇಲಿ ಬಂದುಬಿಡಿ. ಹನ್ನೊಂದು ಗಂಟೆಗೆ ಬಂದು ಬಿಡೋರಂತೆ. "

" ಅದಕ್ಕಿಂತ ಹನ್ನೊಂದು ಗಂಟೆಗೆ ಹೋಗಿ ಮೂರು ಗಂಟೆಗೆ ಬಂದುಬಿಡೋದೆ ಚೆನ್ನಾ ! "

" ಐದು ಗಂಟೆಗೆ ಬರೋವಾ ಬನ್ನಿ. ನಂಜಪ್ಪ ! ಹನ್ನೊಂದು ಗಂಟೆಗೆ ಸಾರೋಟಿನಲ್ಲಿ ನಮ್ಮ ಬುದ್ಧಿಯವರು ಬರಲಿ. ನಮಗೆ ಎಂಟು ಗಂಟೆಗೆ ಎತ್ತಿನ ಗಾಡಿ ಕಟ್ಟಿಸಿ. "

" ನಿಮಗೆ ಹೊತ್ತಾದರೆ ? "

" ಇಲ್ಲಾ ! ನಮ್ಮ ಎತ್ತೂ ಕುದುರೆ ಹಂಗೇ ಹೋಗ್ತದೆ ? "

ಅವರು ಉಪಾಹಾರ ಮುಗಿಸಿಕೊಂಡು ಬರುವ ವೇಳೆಗೆ ಡೆಪ್ಯುಟಿಕಮೀಷನರ ಕಡೆಯಿಂದ ಆಳು ಬಂದಿದ್ದ. ಅವನು ತಂದಿದ್ದ ಕಾಗದವನ್ನು ತೆಗೆದುಕೊಂಡು ಅಮಲ್ದಾರನೇ ಓದಿ ಹೇಳಿದನು. " ರಾಜಕುಮಾರರು ತಮ್ಮ ಬೇಟೆಯ ಪರಾಕ್ರಮ, ಚಾತುರ್ಯ, ಮೊದಲಾದವನ್ನು ನೋಡಿ ಬಹು ಸಂತೋಷ ಪಟ್ಟಿದ್ದಾರೆ. ಅವರಿಗೆ ತಮ್ಮನ್ನು ಮುಖತಃ ನೋಡಬೇಕು : ಮಾತನಾಡಿ ತಮ್ಮ ಸಂತೋಷ ವನ್ನು ತಾವೇ ತಿಳಿಸಬೇಕೆಂದು ಆಸೆ. ಆದರೆ, ಬೇಟೆಯ ದಿನ ತಾವು 'ಇನ್ನು ಯಾವ ಕೆಲಸವನ್ನೂ ಮಾಡುವುದಿಲ್ಲ : ತಾವಾಗಿ ಮಾತನಾಡುವವರೆಗೂ ಯಾರೂ ಮಾತನಾಡಿಸಕೂಡದು ಎಂದು ಗೊತ್ತಾಗಿರುವುದರಿಂದ, ಈ ಕಾಗದ ಬರೆಯ ಬೇಕಾಗಿ ಬಂದಿದೆ. ತಾವಾಗಿ ಬರುವುದಾದರೆ ರಾಜಕುಮಾರರು ಸಂತೋಷದಿಂದ ಬರಮಾಡಿ ಕೊಳ್ಳುತ್ತಾರೆ. ಅಥವಾ ಆಯಾಸದಿಂದ ಇವೊತ್ತು ಬರುವುದು ಸಾಧ್ಯವಿಲ್ಲವಾದರೆ, ನಾಳೆಯ ದಿನ ಭಾರಿಯ ಬೇಟೆಗೆ ಹೋಗುವಾಗ, ತಪ್ಪದೇ ತಾವೂ ಬಂದೇ ಬರಬೇಕೆಂದು ರಾಜಕುಮಾರರು ಕೋರು ತ್ತಾರೆ, ಎಂದು ಹುಜೂರಿನಲ್ಲಿ ಅಪ್ಪಣೆಯಾಗಿದೆ. ಹುಜೂರು ಸವಾರಿಯು ಕೂಡ ತಮ್ಮ ಬೇಟೆಯನ್ನು ಕಂಡು ಆಶ್ಚರ್ಯ ಮಗ್ನರಾಗಿ ಸಂತೋಷ ಪಟ್ಟು ತಮ್ಮಿಂದ ನಮ್ಮ ದೇಶಕ್ಕೆ ಕೀರ್ತಿಯೆಂದು ಹೆಮ್ಮೆ ಗೊಂಡಿದ್ದಾರೆ."

ಅಮಲ್ದಾರನು ಎದ್ದು ನಾಯಕನ ಕೈ ಹಿಡಿದುಕೊಂಡನು. ಅವರ ಸಂತೋಷವು ಆಶ್ಚರ್ಯವಾಯಿತು. " ಏನಿದು ? ನಾಯಕರೆ ? ಕೈಯ್ಯೋ ಕಬ್ಬಿಣದ ತುಂಡೋ ? " ಎಂದನು.

" ಈಗೇನು ನೋಡುತ್ತೀರಿ ಬುದ್ಧಿ ? ಆಗ ಹಂದಿ ಹೊಡೆಯೋ ವಾಗ ನೋಡಬೇಕಿತ್ತು. ಮೈಯೆಲ್ಲಾ ಹೀಗೇ ಇರುತ್ತದೆ. "

" ಮತ್ತೆ ಮೊದಲಿನ ಹಾಗೆ ಆಗೋದು ? "

" ಒಂದಿಬ್ಬರು ಬಲವಾದ ಹೆಂಗಸರು ನೆತ್ತಗಾದಾಗ. ಅದಿರಲಿ. ಈಗ ಏನು ನಾವೇ ಹೋಗಬೇಕಾ ಈ ರಾಜಕುಮಾರರನ್ನ

ನೋಡೋಕೆ ? ”

ಅಮುಲ್ದಾರನು ಕೈ ಹಿಡಿದು ಕೊಂಡು ಹೇಳಿದನು : “ ಹೋಗಿ ಬನ್ನಿ. ತಮ್ಮ ಪ್ರತಾಪನನ್ನು ಕಣ್ಣು ನೋಡಿ ಸಂತೋಷ ಪಟ್ಟಿದೆ. ಆ ಸಂತೋಷವನ್ನು ಬಾಯಿ ಹೇಳಿ ಸಂತೋಷ ಪಡಲಿ. ಯೂರೋಪಿಯರ್ಯರು ಸಂತೋಷವಾದಾಗ ಕೈ ಕುಲುಕದೇ ಇರುವುದಿಲ್ಲ. ಹಾಗೆ ಕೈಕುಲುಕಿ, ಈ ಗರ್ಡರ್ ಮೂರ್ತಿ ನೋಡಿ ಸಂತೋಷ ಪಡಲಿ. ಈ ನಾಡಿನಲ್ಲಿ ಎಂಥಾ ವೀರ ಪುರುಷರಿದ್ದಾರೆ ಅನ್ನೋ ಅರಿವು ಆಗಿರಲಿ.”

“ ಏನುಮಾಡಲಿ, ಈ ಮೈ ಹಿಂಗಿರುವಾಗ ಮನಸ್ಸು ಬೋ ಬಿಗಿ. ಅದಕ್ಕಾಗಿ ಹಿಂತೆಗೆದೆ. ಆಗಲಿ. ನೀವೂ ಹೇಳ್ತೀರ. ನಡೇರಿ.”

ಆಳನ್ನು ಕರೆದು ಅಮುಲ್ದಾರನು “ಸಾಹೇಬರಿಗೆ ಹೇಳಯ್ಯಾ. ನಾಯಕರು ಬರುತ್ತಿದ್ದಾರೆ ಅಂತ.” ಎಂದು ತಾನೇ ಹೇಳಿ ಕಳುಹಿಸಿದನು.

ಇನ್ನೊಂದು ಗಳಿಗೆಯೊಳಗಾಗಿ ಅಮುಲ್ದಾರರನ್ನೂ ಜೊತೆಯಲ್ಲಿ ಕೂರಿಸಿಕೊಂಡು ನಾಯಕನು ಭಾರಿಯ ಸಾರೋಟಿನಲ್ಲಿ ಕ್ಯಾಂಪಿನ ಕಡೆಗೆ ಹೊರಟನು. ಆತನ ಇಚ್ಛೆಯಂತೆ, ದಾರಿಯಲ್ಲಿ ಎಲ್ಲರೂ ಸಾರೋಟನ್ನು ನೋಡುವವರೇ !

## ೧೧

ರಾಜಕುಮಾರನು ನಾಯಕನು ಬರುವನೆಂದು ಕೇಳಿ ಬಹು ಸಂಭ್ರಮಪಟ್ಟು ಬಂದನು. ರಾಜಕುಮಾರಿಯೂ ಬಂದು ಜೊತೆಗೆ ಸೇರಿದಳು. ರೆಸಿಡೆಂಟ್‌ರು, ಮಹಾರಾಜರು ಅಲ್ಲಿಯೇ ಇದ್ದರು. ಮಹಾರಾಜರನ್ನು ಕಂಡರೆ ನಾಯಕನಿಗೆ ಬಹು ಭಕ್ತಿ. ಅವರ ಕಾಲು ಮುಟ್ಟಿ ನಮಸ್ಕಾರ ಮಾಡಬೇಕೆಂದು ಅವನಿಗೆ ಆಸೆ. ಆದರೆ ಅವರೇ ಡೆಪ್ಯುಟಿ ಕಮೀಷನರೊಡನೆ ಹೇಳಿಕಳುಹಿಸಿದ್ದರು ಅದೆಲ್ಲಾ ಈ ಕ್ಯಾಂಪಿನಲ್ಲಿ

ಕೂಡದು ಎಂದು. ಅದರಿಂದ ತನ್ನ ಭಕ್ತಿಯನ್ನು ಏನಿದ್ದರೂ ಮನಸ್ಸಿನಿಂದಲೇ ಸಮರ್ಪಿಸಬೇಕಾಗಿತ್ತು. ನಾಯಕನ ಕಣ್ಣಲ್ಲಿ ಮಹಾರಾಜರು ದೇವರು. ರಾಜಕುಮಾರ ಮಹಾರಾಣಿಯ ಮೊಮ್ಮಗ, ಚಕ್ರವರ್ತಿಗಳ ಮಗ ಆದರೂ ಮಹಾರಾಜರಷ್ಟು ದೊಡ್ಡವನಲ್ಲ. ಆದರೂ ಆಸ್ಥಾನದ ಮರ್ಯಾದೆ ಮೀರಲಾರದೆ ಆತನಿಗೆ ಗೌರವ ತೋರಿಸುತ್ತಿದ್ದರೂ, ಅವನು ಕೈಮುಗಿದುದು ಮೊದಲು ಮಹಾರಾಜರಿಗೆ: ಆಮೇಲೆ ರಾಜಕುಮಾರರಿಗೆ. ಆ ಮರ್ಯಾದಾಲೋಪವನ್ನು ಗಣಿಸುವಷ್ಟು ನಿರಭಿಮಾನ ಅವೊತ್ತು ಯಾರಿಗೂ ಇರಲಿಲ್ಲ.

ರಾಜಕುಮಾರನು ತಾನೇ ಎದ್ದು ಬಂದು ನಾಯಕನು ಮುಗಿದಿದ್ದ ಕೈಗಳನ್ನು ಹಿಡಿದುಕೊಂಡನು. ಕೈಬಿಡಿಸಿ, ಕೈಹಿಡಿದು ಕುಲಕಿದನು. ಆತನಿಗೆ ಆಶ್ಚರ್ಯವಾಯಿತು. "ಇದೇನು ಹೀಗೂ ಉಂಟೆ" ಎಂಬ ಭಾವದಿಂದ ಮಹಾರಾಜರ ಮುಖವನ್ನು ನೋಡಿದನು. ಅವರು, ಎದ್ದು ಬಂದು ಆ ಕೈಹಿಡಿದು ನೋಡಿ ತಮ್ಮ ಸಂತೋಷವನ್ನು ಪ್ರಕಟವಾಗಿ ಸೂಚಿಸುತ್ತ, "ರಾಜಕುಮಾರ, ನಾವು ಕೇಳಿದ್ದೇವೆ: ಬೇಕೆಂದಾಗ ಮೈ ಕಲ್ಲಿನಂತಾಗುವುದು ಎಂದು. ಆದರೆ ಯಾವಾಗಲೂ ಕಗ್ಗಲ್ಲಿನಂತಿರುವ ಮೈ ನಾವು ನೋಡಿರಲಿಲ್ಲ. ನಮ್ಮ ಪೂರ್ವಿಕರು ಕಂಠೀರವ ನರಸರಾಜರೆಂಬುವರು, ಸುಮಾರು ನೂರೈವತ್ತು ವರುಷಗಳ ಕೆಳಗೆ ಇದ್ದರು. ಅವರು ಮರದ ಮಂಚದ ಮೇಲೆ ಮಲಗಿದರೆ ಅದು ಮುರಿದು ಹೋಗುತ್ತಿತ್ತಂತೆ. ಅದಕ್ಕಾಗಿ ಕಲ್ಲಿನ ಮಂಚದ ಮೇಲೆ ಮಲಗುತ್ತಿದ್ದರಂತೆ" ಎಂದರು.

ರಾಜಕುಮಾರನು ಹೇಳಿದನು "ಈತನು ಆಶ್ಚರ್ಯಪುರುಷ! ಇಂದಿನ ಬೆಳ್ಗಿಗೆ ಈತನು ಮಾಡಿದ ಸಿಂಹನಾದ ಇನ್ನೂ ನಮ್ಮ ಕಿವಿಯಲ್ಲಿ ಮೊರೆಯುತ್ತಿದೆ. ನಾವು ಉತ್ತರ ಸಮುದ್ರದಲ್ಲಿ ತಿಮಿಂಗಿಲಗಳನ್ನು ಹೊಡೆಯುವಾಗ ಭಲ್ಲೆಯ ಉಪಯೋಗಿಸುವುದು ನೋಡಿದ್ದೇವೆ. ಅವರೂ ಈತನಷ್ಟು ಶಕ್ತರಲ್ಲ. ಈತನೇನಾದರೂ ತಿಮಿಂಗಿಲಗಳನ್ನು ಭಲ್ಲೆಯದಿಂದ ಹೊಡೆದರೆ ಅವೂ ಅಲ್ಲೇ ಸಾಯುವುವೋ ಏನೋ? ನಾವು 'ಮೆಡೋಸ್ ಟೇಯಲರ್' ಬರೆದಿರುವ ಟಿಪ್ಪೂಸುಲ್ತಾನ್ ಎಂಬ

ಗ್ರಂಥದಲ್ಲಿ ಆ ಸುಲ್ತಾನನು ಆನೆಯ ಮರಿಯನ್ನು ಒಂದೇ ಏಟಿಗೆ ಕತ್ತರಿಸುತ್ತಿದ್ದನು ಎಂದು ಓದಿ, ಬರಿಯ ಮಾತು ಎಂದು ಕೊಂಡಿದ್ದೆವು – ಇಂದು ಈತನ ಅದ್ಭುತಕಾರ್ಯವನ್ನು ನೋಡಿ ಅದನ್ನೂ ನಂಬಬೇಕಾಯಿತು. ಮಹಾರಾಜರು ದಯಮಾಡಿ ಈತನನ್ನು ನಮ್ಮ ಜೊತೆಯಲ್ಲಿ ಕಳುಹಿಸಿದರೆ ನಾವು ಲಂಡನ್ನಿನಲ್ಲಿರುವ ನಮ್ಮ ಸ್ನೇಹಿತರಿಗೆ ಈತನ ಪರಿಚಯಮಾಡಿ ಕೊಡುವೆವು. ನಮ್ಮ ತಂದೆಯವರಂತೂ ಇಂಥವರನ್ನು ನೋಡಿದರೆ ಬಹಳ ಸಂತೋಷ ಪಡುವರು."

ಮಹಾರಾಜರೇ ಸ್ವಯಂ ನಾಯಕನಿಗೆ ರಾಜಕುಮಾರನ ಅಭಿಪ್ರಾಯವನ್ನು ತಿಳಿಸಿದರು. ನಾಯಕನಿಗೆ ಅಲ್ಲಿಗೆ ಹೋದರೆ ತನ್ನ ಜಾತಿಯು ಕೆಡುವುದೆಂದು ಅದು ಸಮ್ಮತವಾಗಲಿಲ್ಲ. ಆ ಅಭಿಪ್ರಾಯವನ್ನು ತಿಳಿದು, ರಾಜಕುಮಾರನು ನಕ್ಕು ಹೇಳಿದನು: "ನಮ್ಮ ಮ್ಯಾಕ್ಸ್ ಮುಲ್ಲರ್ ಅವರು ಇಂಡಿಯಾದಲ್ಲಿ ಇರುವವರೆಲ್ಲಾ ವೇದಾಂತಿಗಳು ಎನ್ನುತ್ತಾರೆ. ಅವರು ಇಂಥವರನ್ನು ಕಂಡರೆ, ಇಂಡಿಯನರೆಲ್ಲಾ ಸ್ಯಾಂಡೋಗಳು ಎನ್ನುತ್ತಿದ್ದರು. ಹೀಗೆ ಬುದ್ಧಿಶಕ್ತಿ, ದೇಹಶಕ್ತಿ, ಎರಡರಲ್ಲೂ ಅದ್ಭುತ ವಿಜಯ ಸಂಪಾದಿಸಿರುವ ಇಂಡಿಯ ನಮ್ಮ ಚಕ್ರಾಧಿಪತ್ಯದಲ್ಲಿರುವುದು ನಮ್ಮ ಅದೃಷ್ಟ! ಕಾಶಿಯಲ್ಲಿ ಒಬ್ಬ ಬ್ರಾಹ್ಮಣ ವಿದ್ವಾಂಸರನ್ನು ಭೇಟಿ ಮಾಡಿಸಿದರು. ಅಕ್ಷರಾಭ್ಯಾಸದಿಂದ ಕಲಿತ ಸರ್ವವೂ ಅವರಿಗೆ ನೆನೆಪಿರುವುದಂತೆ! ಅದೆಲ್ಲಾ ಈಚೀಚಿಗೆ ಪ್ರಿಂಟಾಗಿದೆಯಂತೆ! ಎಲ್ಲವೂ ಸೇರಿ ಸುಮಾರು ಹತ್ತು ಸಾವಿರ – ಮಹಾರಾಜರೆ – ಹತ್ತು ಸಾವಿರ ಪುಟ ಆಗುವುದಂತೆ! ನಾವು ಮಕಾಲೆಯವರ ಸ್ಮರಣ ಶಕ್ತಿಯನ್ನು ಕಂಡು ಆಶ್ಚರ್ಯಪಡುತ್ತೇವೆ. ಆ ವಿದ್ವಾಂಸರ ಸ್ಮರಣಶಕ್ತಿ ಹೇಗಿರಬೇಕು. ಅಂತೂ ಇಂಡಿಯ ಪ್ರಪಂಚಕ್ಕೆ ತಿಳಿಯದ ಇನ್ನೂ ಏನೇನು ಅದ್ಭುತಗಳನ್ನು ಪಡೆದಿರುವುದೋ ಯಾರು ಬಲ್ಲರು?"

ಮಹಾರಾಜರು ನಗುತ್ತಾ ಹೇಳಿದರು: "ತಮಗೆ ಆ ತರುಣ ಸನ್ಯಾಸಿ ವಿವೇಕಾನಂದರ ವಿಚಾರ ಗೊತ್ತೇ ಇರಬೇಕು. ಅವರ ಗುರುಗಳು ನಿರಕ್ಷರಕುಕ್ಷಿಗಳು. ಜಗತ್ತಿನ ಪ್ರಸಿದ್ಧ ವಿದ್ವಾಂಸರೆಲ್ಲರೂ

ಆತನ ಪಾಂಡಿತ್ಯ ಪ್ರತಿಭೆಗೆ ಮುಗ್ಧರಾಗಿ ಹೋದರು."

"ಹೌದು, ಹೌದು, ತಮ್ಮ ಪೂಜ್ಯ ತಂದೆಯವರು ಅವರಿಗೆ ಸಹಾಯ ಮಾಡಿದರಂತೆ. ತಾವೂ ಹಾಗೆಯೇ ಅದ್ಭುತವಾದ ಪಾಂಡಿತ್ಯವುಳ್ಳವರನ್ನು ಪ್ರೋತ್ಸಾಹ ಕೊಟ್ಟು ಮುಂದಕ್ಕೆ ತರಬೇಕು. ಮರೆತಿದ್ದೆ. ನಾಯಕರ ಆಶ್ರಯದಲ್ಲಿರುವ ಆ ಹುಡುಗಿ ಅವಳಿಗೆ ಅದ್ಭುತವಾದ ದೇವರ ವರವಿದೆ. ಆ ಮಗುವಿಗೆ ಸಾಹಿತ್ಯ ಸಂಗೀತಗಳಲ್ಲಿ ತಕ್ಕ ಶಿಕ್ಷಣ ಕೊಡಿಸಿ ಬೆಳೆಸಿ. ತಮಗೆ ಸಾಧ್ಯವಾಗದಿದ್ದರೆ, ಬಿಷಪ್ಪರು ಬಂದಿದ್ದಾರೆ. ಅವರ ಕಾನ್ವೆಂಟಿಗೆ ಕಳುಹಿಸಿಕೊಡಿ. ಆಕೆಗೆ ಯೋಗ್ಯತೆಯಿದೆ. ವಿಶೇಷ ತರಬೇತು ಬೇಕು."

"ಆಗಬಹುದು. ಆ ಮಗುವಿಗೆ ವಿದ್ಯಾರ್ಥಿವೇತನವನ್ನು ಕೊಟ್ಟು ಅವಳು ವಿದ್ಯಾವತಿಯಾಗುವಂತೆ ನೋಡಿಕೊಳ್ಳುತ್ತೇವೆ."

"ನಮಗೆ ರಾಜಕೀಯದಲ್ಲಿ ಕೈಹಾಕುವುದು ಸಮ್ಮತವಿಲ್ಲ. ಆದರೂ ಮಾತು ಬಂತೆಂದು ಹೇಳುತ್ತೇವೆ. ತಾವು ಸಾಧ್ಯವಾದರೆ ಮಾಡಬಹುದು. ಇಲ್ಲವಾದರೆ ಇಲ್ಲ. ತಮ್ಮ ಪ್ರೋತ್ಸಾಹವು ಕ್ರಿಶ್ಚಿಯರ್ನರಿಗೂ ಲಭಿಸಲಿ. ಅವರು ಸಣ್ಣ ಕೋಮಿನವರು ; ಅವರಿಗೆ ತಮ್ಮ ಪ್ರೋತ್ಸಾಹದ ಅವಶ್ಯಕತೆಯೂ ಬೇಕಾದಷ್ಟಿದೆ."

"ಆಗಬಹುದು. ಆ ವಿಷಯವನ್ನು ನೆನೆಪಿನಲ್ಲಿಟ್ಟುಕೊಂಡು ನಡೆಯುತ್ತೇವೆ."

"ನಾಯಕರು ನಾಳೆಯ ದಿನ ನಮ್ಮ ಜೊತೆಯಲ್ಲಿ ಬರುವರು ತಾನೇ ?" ಮಹಾರಾಜರು ಆ ಮಾತನ್ನು ನಾಯಕರಿಗೆ ಹೇಳಿದರು. ನಾಯಕನು, "ಮಹಾಪಾದದ ಅಪ್ಪಣೆ ಆದ ಹಂಗೆ ನಡೆಯುವವನು ಬುದ್ಧಿ" ಎಂದು ಕೈಮುಗಿದನು.

ರಾಜಕುಮಾರನು ಆ ವಿನಯವನ್ನು ನೋಡಿ ಬಹು ಸಂತೋಷಪಟ್ಟು ಹೇಳಿದನು, "ಮಹಾರಾಜರೆ, ತಾವು ಬಹಳ ಅದೃಷ್ಟಶಾಲಿಗಳು. ತಮ್ಮ ಪ್ರಜೆಗಳ ರಾಜಭಕ್ತಿ ವಿಶ್ವಾಸಗಳನ್ನು ನೋಡಿ, ನಮಗೆ ನಮ್ಮ ಬ್ರಿಟಿಷರ ನೆನೆಪಾಗುತ್ತದೆ. ಮಿಕ್ಕಕಡೆಗಳಲ್ಲೂ ನಾವು ರಾಜಭಕ್ತಿಯನ್ನು ಕಂಡಿದ್ದೇವೆ. ಆದರೆ ಮೈಸೂರಿನ ಪ್ರಜೆಗಳ ರಾಜಭಕ್ತಿ

ವಿಶ್ವಾಸಗಳು ಅಕೃತ್ರಿಮವಾದವು. ಇವು ಹೀಗೆಯೇ ಬಹಳ ಕಾಲವಿರಲೆಂದು ಪರಮೇಶ್ವರನಲ್ಲಿ ಹರಕೆ ಹೊರುತ್ತೇವೆ. ನಾಯಕರಿಗೆ ಹೇಳಿ, ಈದಿನ ನಮ್ಮ ಎದುರಿನಲ್ಲಿ ನಡೆದ ಸಾಹಸ ನಾವೆಲ್ಲಿಯೂ ನೋಡಿರಲಿಲ್ಲ. ನಮ್ಮ ಪ್ರಖ್ಯಾತರಾದ ಬೇಟೆಗಾರರು ಮತ್ತೊಮ್ಮೆ ಅವರ ಪ್ರತಾಪ ನೋಡಬೇಕು ಎನ್ನುತ್ತಾರೆ. ನಾವೂ ಇನ್ನೆರಡು ದಿನ ಹೆಚ್ಚಾಗಿ ನಿಲ್ಲಬೇಕೆಂದುಕೊಂಡು, ಇಂದು ವೈಸ್‌ರಾಯರಿಗೆ ಬರೆದಿದ್ದೇವೆ. ನಾವು ಇರುವವರೆಗೂ ಇವರೂ ಇಲ್ಲಿಯೇ ಇರಬೇಕು. ಆ ಶಿಶು ವೇದಾಂತಿಯ ಹಾಡುಗಳನ್ನೂ ಕೇಳಿಸಬೇಕು ಎಂದು ಹೇಳಿ."

ಆ ಮಾತುಗಳನ್ನು ಕೇಳಿ ಮಹಾರಾಜರಿಗೂ ಆನಂದವಾಯಿತು. ಹಾಗೆ ಆನಂದದಿಂದ ಹರಿವಾಣದಗಲವಾಗಿದ್ದ ಮುಖವನ್ನು ನೋಡಿ ನಾಯಕನಿಗೂ ಸಂತೋಷವಾಯಿತು.

ಆ ವೇಳೆಗೆ ಸಂಧ್ಯಾ ಸೂಚಕವಾದ ತುತ್ತೂರಿಗಳು ಕೇಳಿಸಿದುವು. ರಾಜಕುಮಾರನೆದ್ದು ಬಂದು ನಾಯಕನ ಕೈಹಿಡಿದುಕೊಂಡನು. ಮತ್ತೆ ಆಶ್ಚರ್ಯವಾಯಿತು: "ಮಹಾರಾಜರೆ, ಇದೇನು? ನಾಯಕರ ಕೈ ಮುಟ್ಟಿನೋಡಿ. ಆಗ ರಾಯಲ್ ಓಕ್ ಮರದ ತುಂಡಿನಂತೆ, ಉಕ್ಕಿನ ತುಂಡಿನಂತೆ ಇದ್ದ ಕೈ ಈಗ ರೇಶಿಮೆಯ ಮೆತ್ತೆಯಾಗಿದೆ." ಎಂದು ನಾಯಕನ ಕೈಯನ್ನು ಹಿಡಿದು ಮಹಾರಾಜರ ಕೈಯಲ್ಲಿಟ್ಟನು.

ಅವರು "ಇದೇ ಸರಿಯಾದ ಸ್ಥಿತಿ" ಎಂದು ಪಕ್ಕದಲ್ಲಿದ್ದ ಪ್ರಿನ್ಸ್ ಗೋಪಾಲರಾಜೇ ಅರಸಿನವರನ್ನು ನೋಡಿದರು. ಅವರು ಕೂಡಲೇ ಬಂದು ಕೈನೀಡಿದರು. ರಾಜಕುಮಾರನು ಅವರ ಕೈತೋಳುಗಳನ್ನು ಮುಟ್ಟಿ ನೋಡಿದನು. ಮೆತ್ತಗೆ ಮೃದುವಾಗಿದ್ದ ಮಾಂಸಖಂಡಗಳನ್ನು ನೋಡಿ, "ಹೆಂಗಸಿನ ಮೈಗಿಂತ ಮೃದುವಾಗಿದೆ" ಎಂದನು

"ಪರೀಕ್ಷೆಯಾಗಬೇಕು" ಎಂದು ಹೇಳಿ ಮಹಾರಾಜರು ರಾಜಕುಮಾರನ ಜೊತೆಯಲ್ಲಿ ಬಂದಿದ್ದ ಬಾಕ್ಸರ್‌ನನ್ನು ಕರೆದು "ಇವರ ಕೈಹಿಡಿದುಕೊ" ಎಂದರು.

ಬಾಕ್ಸರ್‌ನು ರಾಜಕುಮಾರನ ಸೂಚನೆಯಂತೆ ಮುಂದೆ ಬಂದು ಅರಸಿನವರ ಕೈಹಿಡಿದನು. ಅರಸಿನವರು ಒಂದು ಸಲ ಒದರಿದರು.

ಬಾಕ್ಸ್‌ರ್‌ನ ಹಿಡಿತವು ಹಾರಿ ಹೋಯಿತು. ಅರಸಿನವರು ಬಾಕ್ಸರ್‌ನ ಕೈಹಿಡಿದರು. ಅವನು ಬಿಡಿಸಿಕೊಳ್ಳಬೇಕೆಂದು ಒದರಿದನು; ಎಳೆದನು: ತಿವಿದನು. ಆಗಲಿಲ್ಲ. ಮುಖವು ಕೆಂಪಾಯಿತು. ರೇಗಿತು. ಔಡು ಕಚ್ಚಿ, ಮುಷ್ಟಿ ಹಿಡಿದು, ನೆಲಕ್ಕೆ ಬಗ್ಗಿ, ಥಟ್ಟನೆ ಮೇಲಕ್ಕೆದ್ದನು. ಅರಸಿನವರ ದೇಹವೆಲ್ಲ ಮೇಲಕ್ಕೆದ್ದಿತು. ಹಿಡಿತ ತಪ್ಪಲಿಲ್ಲ.

ರಾಜಕುಮಾರನು ಮುಂದೆ ಬಂದು ಅರಸಿನವರ ಭುಜ ತಟ್ಟಿದನು. ದೇಹವು ವಜ್ರಪ್ರತಿಮೆಯಾಗಿದ್ದುದು ನೋಡಿ ಆಶ್ಚರ್ಯ ಚಕಿತನಾಗಿ "ಎಲಾ, ನೀವು ಇಂಡಿಯರ್ನರು ಒಬ್ಬೊಬ್ಬರೂ ಆಶ್ಚರ್ಯಪುರುಷರು. ಇನ್ನು ಬಿಡಿ" ಎಂದನು. ಅರಸಿನವರು ಕೈಬಿಟ್ಟರು. ಬಾಕ್ಸರ್‌ನ ಕೈ ಚಪ್ಪಟೆಯಾಗಿ ಹೋಗಿತ್ತು.

ಎಲ್ಲರನ್ನೂ ಬೀಳ್ಕೊಟ್ಟು ರಾಜಕುಮಾರನು ಒಳಕ್ಕೆ ಹೋಗುತ್ತ "ರೆಸಿಡೆಂಟ್, ಇವರು ಇಷ್ಟು ಅದ್ಭುತ ಶಕ್ತಿಯನ್ನು ಹೇಗೆ ಸಂಪಾದಿಸುತ್ತಾರೆ?" ಎಂದು ಕೇಳಿದನು.

"ಇವರಲ್ಲಿ ಗರಡಿಗಳಿವೆ: ಆ ಗರಡಿಗಳಲ್ಲಿ ಸಾಮುಮಾಡಿ ಇವರು ವಜ್ರಶರೀರಿಗಳಾಗುತ್ತಾರೆ, ರಾಜಕುಮಾರ."

"ಮತ್ತೆ ಇವರನ್ನು ಹೇಗೆ ಆಳುತ್ತೀರಿ?"

"ಇವರು ನ್ಯಾಯಪರರು. ನಾವು ನ್ಯಾಯವಾಗಿದ್ದೇವೆಂದು ಅವರು ಬಗ್ಗಿದ್ದಾರೆ."

"ಆದರೂ ಇಷ್ಟು ಶಕ್ತಿ! ಅಬ್ಬಾ!"

"ಹೌದು. ನನಗೆ ಅರ್ಥವಾಯಿತು. ಅದಕ್ಕೇನಾದರೂ ಮಾಡೋಣ."

ರೆಸಿಡೆಂಟನು ರಾಜಕುಮಾರ ದಂಪತಿಗಳನ್ನು ಒಳಕ್ಕೆ ಬಿಟ್ಟು ಬರುವವರೆಗೂ ಎಲ್ಲರೂ ಅಲ್ಲಿಯೇ ಇದ್ದರು. ಅವನು ಬಂದ ಮೇಲೆ ಮಹಾರಾಜರೂ ಸಪರಿವಾರರಾಗಿ ಹೊರಟರು.

ನಾಯಕನು ಎಲ್ಲರನ್ನೂ ಬೀಳ್ಕೊಂಡು ಹಿಂತಿರುಗಿದನು. ಅವನಿಗೆ ತನ್ನ ಮೈಯಲ್ಲಿದ್ದ ಬಿಗುವೂ ಮನಸ್ಸಿನಲ್ಲಿದ್ದ ರಾಕ್ಷಸಾವೇಶವೂ ಕಳೆದು ಹೋಗಿರುವುದು ಕಂಡು ಆಶ್ಚರ್ಯವಾಯಿತು. "ಇದೇನು?

ಮಹಾರಾಜರಂಥವರ ದಿವ್ಯ ಸನ್ನಿಧಾನದ ಫಲವೋ ? ” ಎನ್ನಿಸಿತು.

ಆದರೆ ನಾಯಕನು ತನಗಾಗಿರುವ ವ್ಯತ್ಯಾಸವನ್ನು ಅರಿಯ ಬಲ್ಲವನಾಗಿದ್ದನೇ ಹೊರತು, ಅದು ಏತಕ್ಕೆ ಆಗಿದೆಯೆಂಬುದನ್ನು ಹೇಳಲು ಸಮರ್ಥನಾಗಿರಲಿಲ್ಲ.

೧೨

ಗುರುವಾರ ಎಂಟು ಗಂಟೆಗೆ ಬೇಟೆಗಾರರ ಗುಂಪು ಹೊರಟಿತು. ಆನೆಗಳ ಮೇಲೆ ಕೆಲವರು : ಕೆಲವರು ಕುದುರೆಗಳ ಮೇಲೆ. ಕ್ಯಾಂಪಿನಿಂದ ಸುಮಾರು ಏಳೆಂಟು ಮೈಲಿಯ ದೂರದಲ್ಲಿರುವ ಕಾಡಿನಲ್ಲಿ ಕಾಡು ಕೋಣ, ಆನೆ, ಇವುಗಳನ್ನು ಬೇಟೆಯಾಡಿ ಬರಬೇಕೆಂದು ರಾಜ ಕುಮಾರನ ಇಷ್ಟ.

ಸುಮಾರು ಒಂದು ಗಂಟೆಯ ಹೊತ್ತು ಹಾದಿ ನಡೆದು ಷಿಕಾರಿದಾರರು ಕಾಡಿನ ಬಳಿ ಬಂದರು. ರಾಜಕುಮಾರನು ಆನೆಯಿಂದ ಇಳಿದು ಕಾಲು ನಡೆಯಲ್ಲಿ ಹೋಗಬೇಕೆಂದು ಹಟಹಿಡಿದನು. ಇತರರು ಯತ್ನವಿಲ್ಲದೆ ಒಪ್ಪಬೇಕಾಯಿತು. ಆತನ ಹಿಂದೆ ಆಫ್ರಿಕಾ ಖಂಡದಲ್ಲೆಲ್ಲಾ ಬೇಟೆಯಾಡಿ ಪ್ರಸಿದ್ಧರಾಗಿದ್ದ ಬೇಟೆಗಾರರ ತಂಡಕ್ಕೆ ತಂಡವೇ ಹೊರಟಿತು. ಮಹಾರಾಜರೂ, ಅವರ ಪರಿವಾರದವರೂ, ನಾಯಕನೂ ಅವರ ಹಿಂದೆಯೇ ಹೊರಟರು.

ನಡುವಿನುದ್ದ ಎದೆಯುದ್ದ ಬೆಳೆದಿದ್ದ ಹುಲ್ಲಿನಲ್ಲಿ ಎಲ್ಲರೂ ಇಬ್ಬಿಬ್ಬರಾಗಿ ಹೋಗುತ್ತಿದ್ದಾರೆ. ಮೈಯೆಲ್ಲ ಕಣ್ಣಾಗಿದೆ : ಮೈಯೆಲ್ಲ ಕಿವಿಯಾಗಿದೆ. ಆ ನಿಶ್ಶಬ್ದವಾದ ಕಾಡಿನಲ್ಲಿ ಗಾಳಿಯೊಮ್ಮೆ ಬೀಸಿದರೆ, ಸುಯ್ಯ್ ಎಂದು ಹುಲ್ಲು ಸದ್ದು ಮಾಡಿದರೆ, ದೂರದ ಬಿದಿರು ಮೆಳೆಗಳು ಒಂದಕ್ಕೊಂದು ಬಡಿದು, ಲಟಲಟ ಎಂದು ಸದ್ದಾಗುತ್ತದೆ. ಸುಯ್ಯ್ ಎಂಬ ಶ್ರುತಿಯೂ ಲಟಲಟದ ತಾಳವೂ ಸೇರಿ, ವನದೇವಿಯು

ತನ್ನ ಮನೆಗೆ ಬಂದ ಮಾನವನನ್ನು ಸ್ವಾಗತಿಸುವುದಕ್ಕಾಗಿ ಹಾಡುವ ಗೀತೆಯೋ ಎನ್ನುವಂತಿದೆ. ಗಾಳಿಗೊಮ್ಮೆ ತಲೆವಾಗಿ ಮೇಲಕ್ಕೆ ಏಳುವ ಹುಲ್ಲಿನ ಕಾವಲು, ಯಾವುದೋ ಸಮುದ್ರ ನಿಶ್ಶಬ್ದವಾಗಿ ಹರಿದು ಬಂದು ವನಭೂಮಿಯ ಮೂಲೆಯೊಂದರಲ್ಲಿ ನಿಂತಿದೆಯೆಂಬಂತಿದೆ. ಆ ವಿಸ್ತಾರವಾದ ಕಾವಲು, ಹಣ್ಣಾಗಿ ಒಣಗುವುದರಲ್ಲಿರುವ ಹುಲ್ಲು ಚಿನ್ನದ ಬಣ್ಣವನ್ನು ತಳೆದಿದೆ. ಅಲ್ಲಲ್ಲಿ ಇರುವ ಮರದ ಗುತ್ತಿಗಳು ಹೊಸ ಚಿಗುರು ಮುಡಿದು ಮೆರೆಯುತ್ತ ನಿಂತಿವೆ. ಒಂದೊಂದು ಗಿಡ ಎಲ್ಲೋ ಒಂದೊಂದು ಹೂವು ಬಿಟ್ಟು, ಅಂದ ಚೆಂದಗಳರಿಯದ ಹಳ್ಳಿಯ ಹುಡುಗಿಯರ ನಡುವಿನ ಪ್ರೌಢೆಯಂತಿದೆ. ಅಂತೂ ಎಲ್ಲ ರೀತಿಯಲ್ಲೂ ಮನೋಗ್ರಾಹಿಯಾದ ನೋಟ. ಎಂಥವರಿಗಾದರೂ ಕೊಂಚ ರಾಮರಸ ಕುಡಿದಂತಾಗಬೇಕು ಅಂತಹ ದೃಶ್ಯ ಸೌಂದರ್ಯ.

ಆದರೂ ಯಾರೂ ಸೌಂದರ್ಯದ ಕಡೆ ಮನಸ್ಸು ಕೊಟ್ಟಿಲ್ಲ. ಎಲ್ಲರಿಗೂ ಯಾವ ಮೃಗ ಎತ್ತ ಕಡೆಯಿಂದ ನುಗ್ಗುವುದೋ ಎಂದು ನಿರೀಕ್ಷೆ. ಅಲ್ಲಲ್ಲಿ ಮರಗಳ ಮೇಲೆ ಜನ ಹತ್ತಿ ಸುತ್ತಮುತ್ತ ನೋಡುತ್ತಿದ್ದಾರೆ. ಬೈನಾಕ್ಯುಲರ್ಸ್ ಹಿಡಿದಿದ್ದವನೊಬ್ಬನು ಸುಮಾರು ಒಂದು ಮೈಲಿ ದೂರದಲ್ಲಿ ಒಂದು ಗುಂಪು ಕಾಡೆಮ್ಮೆಗಳು ಹೋಗುತ್ತಿರುವುದನ್ನು ಗುರುತಿಸಿದನು. ಎಲ್ಲರೂ ಅತ್ತ ಕಡೆಗೆ ತಿರುಗಿದ್ದಾರೆ. ರಾಜಕುಮಾರ, ಅವನ ಮಗ್ಗುಲಲ್ಲಿ ಮಹಾರಾಜರು. ಅವರ ಹಿಂದೆ ಇನ್ನಿಬ್ಬರು ಯೂರೋಪಿಯನ್ ಶಿಕಾರಿದಾರರು. ಅವರ ಹಿಂದೆ ನಾಲ್ಕು ಹೆಜ್ಜೆ ದೂರದಲ್ಲಿ ಇನ್ನು ನಾಲ್ವರು – ಅವರಲ್ಲಿ ನಾಯಕನೂ ಒಬ್ಬ – ಉಳಿದವರು ಇನ್ನು ಸುಮಾರು ಹತ್ತಿಪ್ಪತ್ತು ಗಜ ದೂರದಲ್ಲಿ ಬರುತ್ತಿದ್ದಾರೆ.

ಅಲ್ಲಿ ಒಂದು ಹಳ್ಳ! ಅಲ್ಲಿಳಿದು ಮೇಲಕ್ಕೆ ಹತ್ತಿದರೆ ಒಂದು ದಿಣ್ಣೆ ಸುಮಾರು ನೂರು ಚದರ ಗಜ ಇರಬಹುದು. ಅಲ್ಲಿಗೆ ಹೋಗಿ ಅಲ್ಲಿರುವ ಇನ್ನೊಂದು ದಿಣ್ಣೆಯನ್ನು ಬಳಸಿಕೊಂಡು ಹೋದರೆ, ಅಲ್ಲಿ ಕಾಡೆಮ್ಮೆಗಳ ಗುಂಪು.

ಹಿಂದಿನವರಿಗೆ ಸನ್ನೆಗಳಾಯಿತು. ಅವರು ಹಾಗೇ ದಿಣ್ಣೆಯನ್ನು ಬಳಸಿಕೊಂಡು ಹೊರಟರು. ಇಲ್ಲಿ ಈ ಎಂಟು ಜನ ಮಾತ್ರ ಹಳ್ಳ

ವಿಳಿದು ದಿಣ್ಣೆ ಹತ್ತಿ ಹೋಗುವುದು ಎಂದು ಹೊರಟರು. ಎಲ್ಲರ ಮನಸ್ಸು ಮುಂದಿನ ದಿಣ್ಣೆಯನ್ನು ಬಳಸಿ ಹೋಗುವುದರಲ್ಲಿದೆ.

ಮಹಾರಾಜರು, ರಾಜಕುಮಾರ, ಅವರ ಹಿಂದಿನ ಇಬ್ಬರು ಸರದಾರರು ದಿಣ್ಣೆ ಹತ್ತುತ್ತಿದ್ದಾಗ ಬಲಗಡೆಗೆ ಸುಮಾರು ಫರ್ಲಾಂಗ್ ದೂರದಲ್ಲಿ ಏನೋ ಮರ ಮುರಿದ ಸದ್ದಾಯಿತು. ಏನೆಂದು ತಿರುಗಿ ನೋಡುವುದರೊಳಗಾಗಿ ಮೊನೆಯಾಗಿ ತಿವಿಯುವಂತಹ ಭಯಂಕರ ವಾದ ತೀವ್ರವಾದ ಗುಡುಗಿನಂತಹ ದನಿಯೊಂದು ದಿಕ್ಕುದಿಕ್ಕುಗಳನ್ನೆಲ್ಲಾ ತುಂಬಿ ಭೇದಿಸಿಕೊಂಡು ಬಂತು. ಆ ತೀವ್ರ ಧ್ವನಿಯನ್ನು ಕೇಳಿದರೆ ಎಂತಹ ನುರಿತ ಪಳಗಿದ ಶಿಕಾರಿದಾರನಿಗೂ ಎದೆಯೊಡೆಯಬೇಕು. ಆ ಧ್ವನಿಯ ಹಿಂದೆಯೋ ಹಾಗೆಯೋ ಮತ್ತೆ ಘೀಳಿಡುತ್ತ ಒಂದು ಪರ್ವತದಂತಹ ಆನೆಯು ನುಗ್ಗಿ ಬಂತು.

ನಾಲ್ವರು ದಿಣ್ಣೆಯ ಮೇಲೆ ನಿಂತಿರುವುದು ಅದಕ್ಕೆ ಚೆನ್ನಾಗಿ ಕಾಣುತ್ತಿದೆ. ಅದು ಆರ್ಭಟಿಸಿಕೊಂಡು ಅತ್ತ ಬರುತ್ತಿರುವುದೂ ಎಲ್ಲರಿಗೂ ಕಾಣಿಸುತ್ತಿದೆ. ಸುತ್ತಮುತ್ತಿನಲ್ಲಿ ಆಸರೆಯಾಗುವಂತಹ ಮರವಿಲ್ಲ : ಬಂಡೆಯಿಲ್ಲ. ಓಡಿ ತಲೆಮರೆಸಿಕೊಳ್ಳವಂತಿಲ್ಲ. ಮೃತ್ಯು ಬರುತ್ತಿದೆ. ಮಾನವನೋ ಮೃಗವೋ ಅಂತೂ ಬಲಿಯಾಗ ಬೇಕು. ಸನ್ನಿವೇಶವನ್ನು ನೋಡಿದರೆ, ಮಾನವನೇ ಮೃಗಕ್ಕೆ ಬಲಿಯಾಗಬೇಕು.

ಹಿಂದಿನ ಪರಿವಾರ ನೂರು ಗಜಕ್ಕೆ ಮೀರಿದ ದೂರದಲ್ಲಿದೆ. ಅವರೂ ಆನೆಯನ್ನು ನೋಡಿದ್ದಾರೆ. ಆದರೇನು ? ಅಲ್ಲಿಂದ ಹೊಡೆಯು ವಂತಿಲ್ಲ. ಓಡಿಬರುವುದು ಸಾಧ್ಯವಿಲ್ಲ. ಹಾಗೂ ಕೆಲವರು ರಾಜ ಕುಮಾರನ ರಕ್ಷಣೆಗೆ ಓಡಿಬರುತ್ತಿದ್ದಾರೆ.

ಹಳ್ಳದಲ್ಲಿದ್ದ ನಾಲ್ವರು ಆ ವೇಳೆಗೆ ದಿಣ್ಣೆಯಮೇಲಕ್ಕೆ ಬಂದರು. ಆನೆಯು ಹೆಜ್ಜೆಗೊಮ್ಮೆ ಆರ್ಭಟಿಸುತ್ತಾ ಸೊಂಡಿಲೆತ್ತಿಕೊಂಡು ಓಡಿ ಬರುತ್ತಿದೆ. ಒಮ್ಮೆ ಘೀಂಕರಿಸಿದರೆ ಮರಗಳೂ, ಬಂಡೆಗಳೂ ಬಿರಿಯ ಬೇಕು. ಭೂಮಿಯು ಬಾಯ್ಬಿಡಬೇಕು ಹಾಗೆ ಆರ್ಭಟಿಸಿಕೊಂಡು ಸರ್‍ರನೆ ಹಳ್ಳಕ್ಕೆ ಹರಿಯುವ ಹುಚ್ಚು ಹೊಳೆಯ ಪ್ರವಾಹದಂತೆ ನುಗ್ಗಿ

ಬರುತ್ತಿದೆ.

ದಿಣ್ಣೆಗೆ ಇನ್ನೂ ನೂರು ಗಜದಲ್ಲಿದೆ, ಭಾರಿಯ ಆನೆ. ಕಪ್ಪಗೆ ಟಾರ್ ಚೆನ್ನಾಗಿ ಬಳಿದ ಬಂಡೆಯಂತೆ ಆ ಹತ್ತು ಗಂಟೆಯ ಬಿಸಿಲಿನಲ್ಲಿ ಮೆರೆಯುತ್ತಿರುವ ಆ ಆನೆ. ಅಬ್ಬಾ ! ಆ ಕೊಂಬು ಮುಂದೆ ಚಾಚಿ ಕೊಂಡಿದ್ದರೆ, ಅದು ಮೃತ್ಯುವಿನ ಭದ್ರಾಸನದಂತಿದೆ. ಬರುತ್ತಿದೆ. ಬರುತ್ತಿದೆ. ಮುಂದೆ ಮುಂದೆ ಬರುತ್ತಿದೆ. ಪಕ್ಕದಿಂದಲ್ಲ : ಎದುರಿಂದ. ನಾಲ್ವರೂ ರೈಫಲ್‌ಗಳನ್ನು ಎತ್ತಿದ್ದಾರೆ. ಎಲ್ಲವೂ ಜೋಡಿನಲ್ಲಿಯವು. ಆಯಕಟ್ಟಿನ ಸ್ಥಳದಲ್ಲಿ ಪೆಟ್ಟುಬಿದ್ದರೆ ಆ ಆನೆಯೆಂಬ ಬೆಟ್ಟವೂ ಅಲ್ಲಿಯೇ ಬಿದ್ದು ಪ್ರಾಣಬಿಡಲೇಬೇಕು. ನಿಜ ! ಆದರೆ, ಆದರೆ, ಗುರಿತಪ್ಪಿದರೆ ? ರಾಜಕುಮಾರ, ಬ್ರಿಟಿಷ್ ಚಕ್ರಾಧಿಪತ್ಯದ ಮುಂದಿನ ಚಕ್ರವರ್ತಿ ! ಸೂರ್ಯನು ಮುಳುಗದ ಸಾಮ್ರಾಜ್ಯದ ಯುವರಾಜ ಸಾರ್ವಭೌಮ ! ಏನಾದರೂ ಆದರೆ !

ಇನ್ನು ಐವತ್ತೇ ಗಜ ! ಗಂಟೆಗೆ ಅರವತ್ತು ಮೈಲಿ ಹೋಗುವ ಎಕ್ಸ್‌ಪ್ರೆಸ್‌ನ ವೇಗವಾದರೂ ಕಡಿಮೆ ! ಆ ಮುನ್ನುಗ್ಗುತ್ತಿರುವ ಮಹಾ ಮೃಗದ ವೇಗ ! ಅಬ್ಬಾ ! ಹೆಜ್ಜೆ ಹೆಜ್ಜೆಗೆ ಒಂದೊಂದು ಮಾರು ಕಡಿಮೆಯಾಗುತ್ತಿದೆ. ಅದಷ್ಟು ಬೇಗ ಓಡುತ್ತಿದೆ ಆ ಹಾಳು ಆನೆ ! ಮಿಂಚು ! ಮಿಂಚು ! ಆದರೆ ಇದು ಮಿಂಚಲ್ಲ. ಮಿಂಚಿನ ಬಳ್ಳಿಯನ್ನು ಕೊಂಬುಗಳಂತೆ ಚಾಚಿಕೊಂಡು ಮಿಂಚಿನ ವೇಗದಿಂದ ಹಕ್ಕಿಯಂತೆ ಹಾರಿಬರುತ್ತಿದೆ : ಏರಿ ಬರುತ್ತಿದೆ. ಅದು ಇರಲಿ. ಅದರ ಕೂಗು ಅದರ ಆರ್ಭಟ ಅದಕ್ಕೆ ಹಾದಿ ಬಿಡಿಸುತ್ತಿದೆ. ಆರ್ಭಟ ಆರ್ಭಟವೂ ಗುರಿಯಿಟ್ಟು ಹೊಡೆದ ಫಿರಂಗಿ ಗುಂಡುಗಳಂತೆ ಬಂದು ರಾಜಕುಮಾರ ನನ್ನು ಝಾಡಿಸುತ್ತಿವೆ. ಇಬ್ಬರೂ ಔಡುಕಚ್ಚಿ ಬರುವ ಮೃತ್ಯುವನ್ನೆದುರಿ ಸಲು ಸಿದ್ಧವಾಗಿದ್ದಾರೆ. ಮಹಾರಾಜರು ರಾಜಕುಮಾರನನ್ನು ಥಟ್ಟನೆ ಎಳೆದು ತಮ್ಮ ಬೆನ್ನಿಗೆ ಹಾಕಿಕೊಂಡು ರೈಫಲನ್ನು ಆನೆಯಕಡೆ ತಿರುಗಿಸಿ ದ್ದಾರೆ. ಆನೆ ಇನ್ನು ಒಂದು ನೂರಡಿ ದೂರದಲ್ಲಿರಬಹುದು. ಹಾಗೆ ಓಡೋಡಿ ಬರುತ್ತಿರುವ ಆನೆಗೆ ಆ ದೂರ ಒಂದು ದೂರವೆ ?

ಅಷ್ಟರಲ್ಲಿ ಒಬ್ಬನು ಮುಂದೆ ನುಗ್ಗಿಬಂದ : ಮಿಕ್ಕವರು ಆನೆಗಿನ್ನೂ

ಗುರಿಯಿಡುವುದರಲ್ಲಿದ್ದಾರೆ. ಅಂತೂ ಎಲ್ಲರೂ ರಾಜರ ಬಳಿಗೆ ಬಂದಿದ್ದಾರೆ. ಎಲ್ಲರೂ ರೈಫಲ್‌ಗಳನ್ನು ಆನೆಯಕಡೆ ತಿರುಗಿಸಿದ್ದಾರೆ.

ಮುಂದೆ ನುಗ್ಗಿದವನು ಮಿಂಚಿನ ವೇಗದಿಂದ ನೆಲಕ್ಕೆ ಬಗ್ಗಿ ಮಂಡಿಯೂರಿ ಸೊಂಡಿಲನ್ನೆತ್ತಿಕೊಂಡು ಬರುತ್ತಿರುವ ಆನೆಗೆ ಗುರಿಯಿಟ್ಟ. ಢರ್ ಎಂತು. ಆರ್ಭಟಿಸುತ್ತಿದ್ದ ಆನೆಯ ಆರ್ಭಟ ಅರ್ಧದಲ್ಲಿ ನಿಂತಿತು. ಮರುಕ್ಷಣ, ಆ ಮೊದಲಿನ ಢರ್ ಧ್ವನಿಯ ಕೊನೆಯ ಮೊಳಗು ಮುಗಿಯುವುದರೊಳಗಾಗಿ ಇನ್ನೊಂದು ಢರ್ ಕೇಳಿಸಿತು. ಆನೆಯ ಆರ್ಭಟದ ಧ್ವನಿ ಮುಗಿಯುವುದರೊಳಗಾಗಿ ಹಾಗೆಯೇ ಧೊಪ್ಪನೆ ಕೆಳಬಿತ್ತು. ಬಂಡೆಯು ಉರುಳಿದಂತಾಯಿತು. ನುಗ್ಗಿಬರುತ್ತಿದ್ದ ಮೊರೆಯುತ್ತಿದ್ದ ಪ್ರವಾಹ ಅಲ್ಲಿಯೇ ರಿಪ್ಪೆ ಹೊಯ್ಯುವಷ್ಟರಲ್ಲಿ ಶೀತದಿಂದ ಹೆಪ್ಪುಗಟ್ಟಿಕೊಂಡು ಶಿಲೆಯಾಗಿ ನಿಶ್ಶಬ್ದವಾಗಿ ನಿಂತಂತಾಯಿತು. ಮತ್ತೆ ನಾಲ್ಕೈದು ಢರ್‌ಗಳು ಕೇಳಿಸಿದವು. ಆದರೆ ಆ ಗುಂಡುಗಳು ಮಾತ್ರ ಆನೆಯ ಮೇಲಿನ ಚರ್ಮವನ್ನು ಸವರಿಕೊಂಡು ಹೋದುವು.

ಆನೆಯು ಕೆಳಕ್ಕೆ ಉರುಳಿದುದನ್ನು ನೋಡಿ, ಮನಸ್ಸಿಗೆ ಧೈರ್ಯವಾದ ಮೇಲೆ ಮಹಾರಾಜರು ರಾಜಕುಮಾರನನ್ನು ನೋಡಿದರು. ಆತನು ಮುಸಿ ನಗುತ್ತಾ ಮುಂದಿದ್ದವನನ್ನು ತೋರಿಸಿದನು. "ಅವನು ಆನೆಯನ್ನು ಹೊಡೆದು ನಮ್ಮನ್ನು ಬಚಾಯಿಸಿದನು." ಎಂದು ಹೇಳಿ, ನೇರವಾಗಿ ಹೋಗಿ, ಅವನನ್ನು ಹಿಡಿದು ಕುಲುಕಿ, "ನಾಯಕ್, ನಮ್ಮ ದುಡುಕು ನಮ್ಮನ್ನು ತಿನ್ನುವುದರಲ್ಲಿತ್ತು. ನೀನು ಬಚಾಯಿಸಿದೆ." ಎಂದು ತಬ್ಬಿಕೊಂಡನು.

ಮಹಾರಾಜರು ಗಂಭೀರವಾಗಿ ನಗುತ್ತಾ "ಹೌದು, ನಮ್ಮದು ಎರಡನೆಯ ಏಟು. ಮೊದಲನೆಯ ಏಟು ನಿಮ್ಮದು. ದೇವರು ದೊಡ್ಡವನು. ನಿಮ್ಮ ರೂಪವಾಗಿ ಬಂದು ಕಾದ" ಎಂದು ನಾಯಕನ ಭುಜ ತಟ್ಟಿದರು.

ನಾಯಕನು ಸಹಜವಾದ ವಿನಯದಿಂದ ರೈಫಲನ್ನು ತಗ್ಗಿಸಿ ಹಿಡಿದುಕೊಂಡು "ಮಹಾಪಾದದ ದಯೆ!" ಎಂದು ಕೈಮುಗಿದ.

## ೧೩

ರಾಜಕುಮಾರನು ಹೊರಟು ಹೋಗಿ ಇನ್ನೂ ಹದಿನೈದು ದಿನ ವಾಗಿಲ್ಲ. ನಾಯಕನು ಊಟ ಮುಗಿಸಿಕೊಂಡು ದಿವಾನಖಾನೆಯಲ್ಲಿ ಕುಳಿತಿದ್ದಾನೆ. ಮಾದಲದ ಹಣ್ಣು, ಉಪ್ಪು ಹಚ್ಚಿದ ಗೋಡಂಬಿ, ಎರಡೂ ತಟ್ಟೆಯಲ್ಲಿ ಎದುರಿಗಿವೆ. ಪೋಸ್ಟ್ ಬಂತು ಎಂದು ಮನೆವಾರ್ತೆ ನಂಜಪ್ಪನು ಬಂದು ಉದ್ದದ ಕವರುಗಳನ್ನು ತಂದಿಟ್ಟ. ಒಂದರ ಮೇಲೆ 'ಹಿಸ್ ಮೆಜಸ್ಟೀಸ್ ಸರ್ವಿಸ್ ಎಂದಿದೆ.' ಇನ್ನೊಂದರ ಮೇಲೆ 'ಆನ್ ಮೈಸೂರ್ ಗವರ್ನ್‌ಮೆಂಟ್ ಸರ್ವಿಸ್' ಎಂದಿದೆ ಎರಡೂ ಕಾನ್‌ಫಿಡೆನ್ಷಿಯಲ್ ಎಂದು ಗುರ್ತು ಆಗಿವೆ. ನಂಜಪ್ಪನು ನಾಯಕನ ಅಪ್ಪಣೆಯಿಂದ ಅವೆರಡನ್ನೂ ಒಡೆದನು. ಒಂದರಲ್ಲಿ "ವೈಸ್‌ರಾಯರು ತಮಗೆ ರಾವ್‌ಬಹದ್ದೂರು ಬಿರುದು ದಯಪಾಲಿಸಿದ್ದಾರೆ" ಎಂದಿತ್ತು. ಮತ್ತೊಂದರಲ್ಲಿ "ಶ್ರೀಮನ್ಮಹಾರಾಜರು ತಮ್ಮನ್ನು ಈ ಸಲದ ವರ್ಧಂತಿಯ ದರ್ಬಾರಿಗೆ ಆಹ್ವಾನಿಸಬೇಕೆಂದು ವಿಶೇಷವಾದ ಅಪ್ಪಣೆ ಯನ್ನು ದಯಪಾಲಿಸಿದ್ದಾರೆ. ದರ್ಬಾರ್ ಭಕ್ಷಿ" ಎಂದಿತ್ತು.

ನಾಯಕನು ಆ ಕಾಗದಗಳನ್ನು ನೋಡುತ್ತಿರುವಾಗಲೇ ಮಲ್ಲ ಣ್ಣನೂ ಓಡಿ ಬಂದ: "ಬುದ್ಧಿ ತಮ್ಮ ಕರುಣ" ಎಂದು ಒಂದು ಕಾಗದವನ್ನು ತಂದು ಮುಂದಿಟ್ಟು ಅಡ್ಡ ಬಿದ್ದ.

ನಾಯಕನು "ಏನದು? ಮಲ್ಲಣ್ಣ" ಎಂದು ಕೇಳಿದ.

"ಬುದ್ಧಿ, ಅರಮನೆಯಿಂದ ನಿರೂಪ ಬಂದದೆ. ಮಲ್ಲೀಗೆ ತಿಂಗಳಿಗೆ ಹತ್ತು ರೂಪಾಯಿ ಇನ್ನು ಹತ್ತು ವರುಷ ಕೊಡುತೀವಿ ಅಂತ ಬರದದೆ ಪಾದ!"

"ಯಾಕಂತೆ?"

"ಓದಿಸೋಕಂತೆ ಪಾದ!"

ನಾಯಕನಿಗೆ ಆ ದಿನದಮಾತು ನೆನೆಪಾಯಿತು. "ಸಂತೋಸ ಕಣಪ್ಪ! ನಿಮ್ಮ ಮಲ್ಲಿ ಏನಂತಾಳೆ?"

" ಮಲ್ಲಿ ಅಂತಾಳೆ. ಬುದ್ಧಿಯೋರು ನನ್ನ ತೊಡೇಮೇಲೆ ಕೂರಿಸಿ ಕೊಂಡರು. ಅದಕ್ಕೆ ಇವೆಲ್ಲಾ: ಬುದ್ಧಿಯೋರ ಮನೆಗೇ ಹೋಯ್ತೀನಿ ಅಂತಾಳೆ. "

" ಹಂಗಾದರೂ ಮಾಡು. ಹೋಗಲಿ. "

" ಮಲ್ಲಿ ಏನಾದರೂ ಗಂಡುಮೊಗವಾ ? ಎಂದಾದರೂ ಯಾರ ಮನೆಗಾದರೂ ಕಳಸಲೇಬೇಕು. ಪಾದ ! "

ಆ ಮಾತಿನಲ್ಲಿ ನಾಯಕನಿಗೆ ಏನೋ ಸಂತೋಷವಾಯಿತು. ಆದರೂ " ಇನ್ನೇನು, ಮಲ್ಲಣ್ಣ ಹೋಗಿ ಮಲ್ಲೀಗೌಡನಾದೆಯಲ್ಲೋ ! ಅರಮನೆಯಿಂದ ತಿಂಗಳಿಗೆ ಹತ್ತು ರೂಪಾಯಿ ! ಯಾರಿಗುಂಟು ಯಾರಿಗಿಲ್ಲ ! ಏನು ನಂಜಪ್ಪ ! "

" ಹೌದು ಬುದ್ಧಿ ; ರೂಪಾಯಿಗಿಂತ ಅರಮನೆ ಮರ್ಯಾದೆ ! ಅದು ನಿಜವಾಗಿಯೂ ಒಳ್ಳೇ ನಸೀಬು ! "

" ನಾವು ಆ ಅರಮನೆ ಕಾಣೋ ! ನಾವು ಕಂಡಿರೋದು ಈ ಅರಮನೆ ! ಮಲ್ಲಿ ಹಣೆಬರೆಹ ಚೆನ್ನಾಗಿದ್ದು, ಬುದ್ಧಿಯವರು ನಮ್ಮನ್ನ ಕಣ್ಣು ಬಿಟ್ಟು ನೋಡಿದರೆ, ಮಲ್ಲೀಗೆ ಈ ಹತ್ತು ರೂಪಾಯೇನಾ ! ಒಂದು ಅರಮನೆ ಆಗೋಕಿಲ್ವಾ ? "

ಆ ಮಾತು ಕೇಳಿ ನಾಯಕನಿಗೆ ಏನೋ ಒಳಗೆ ಗುಟ್ಟಾಗಿ ಚಿಕ್ಕುಕೆರೆದ ಹಾಗಾಯಿತು. " ಯಾವಾಗ ಇವನು ನನ್ನ ಮನಸ್ಸಿನಲ್ಲಿರುವುದನ್ನು ಕಂಡು ಕೊಂಡನೋ ! " ಎಂದು ಕೊಂಚ ಗಾಬರಿಯಾಯಿತು. ಆದರೆ ಆ ಗಾಬರಿ ನಾಯಕನ ಮನಸ್ಸಿನ ಧೀರತನದಲ್ಲಿ ಗಂಗೆಯಲ್ಲಿ ತೇಲಿದ ಇಂಗಿನಂತಾಯಿತು.

## ೧೪

ನಾಯಕನಿಗೆ ಮಲ್ಲಿಯ ಯೋಚನೆಯಲ್ಲಿ ಗೀಳು ಹಿಡಿಯಿತು. ಲೋಕವೆಲ್ಲಾ ಈಗ ಆ ಹುಡುಗಿಯಲ್ಲಿ ಕೇಂದ್ರೀಕೃತವಾಗಿದೆ. ಆದರೂ

ಜಗತ್ತು ಅದನ್ನು ತಿಳಿಯುವುದು ಅವನಿಗೆ ಬೇಡ. ತನ್ನಲ್ಲಿರುವ ಜೀವ ರತ್ನಗಳ ಗಂಟನ್ನು ಯಾರಿಗಾದರೂ ತೋರಿಸುವುದೂ ಉಂಟೇನು? ಹಾಗಿದೆ ನಾಯಕನ ಮನಸ್ಥಿತಿ.

ಅವನು ಲೋಕವನ್ನು ಕಾಣದವನಲ್ಲ. ಪೋಲೀ ಬಸವನಿಗಿಂತ ಹೆಚ್ಚಾಗಿ, ತೋರಿದ ಆಟ ಆಡಿ, ತಾನಾಗಿ ಬಂದು ನೆಲೆಗೆ ನಿಂತವನು. ಅವನಿಗೇ ಆಶ್ಚರ್ಯ ತನ್ನ ಹೃದಯದ ಶಾಂತಿಯನ್ನು ಒಂದು ಕಣ್ಣು ಬಿಡದ ಕಂದಮ್ಮ ಬಾರಿಸುವಳು ಎಂದರೆ ಅವನು ನಂಬಲಾರ. ಯಾರಾದರೂ ಕವೀಶ್ವರರು ಹೋಗಿ ನಾನೊಂದು ಮಲ್ಲೀ ಪುರಾಣ ಬರೆದಿದ್ದೇನೆ ಎಂದರೆ ನಾಯಕನು ಒಂದುಲಕ್ಷ ಕೊಡುವುದಕ್ಕೆ ಸಿದ್ಧ.

ಊರಿನಲ್ಲಿ ಯಾರಿಗೂ ಆತನ ಹೃದಯದಲ್ಲಿ ಅಷ್ಟು ಆಳವಾಗಿ ಮಲ್ಲಿ ಮುಳುಗಿದ್ದಾಳೆ ಎಂಬುದು ತಿಳಿಯದಿದ್ದರೂ ಆತನ ಅಭಿಮಾನದ ಹೊಳೆ ಆ ಕಡೆಗೆ ನುಗ್ಗುತ್ತಿರುವುದು ಮಾತ್ರ ಎಲ್ಲರಿಗೂ ಗೊತ್ತು. ಆದರೆ ಅವರು ಹೇಳುವ ಕಾರಣ ಮಾತ್ರ ಬೇರೆ! "ಸಾಮ್ರಾಜ್ಞಿಯ ಮೊಮ್ಮಗನ ಎದುರಿಗೆ ಹಾಡಿದವಳು, ಅರಮನೆಯಿಂದ ಪತ್ತು ರೂಪಾಯಿ ಸಂಬಳ ಮಾಡಿಕೊಂಡವಳು, ಅದೇ ಅದೃಷ್ಟ ನಾಯಕನ ಅಭಿಮಾನವನ್ನು ಸಂಪಾದಿಸಿಕೊಟ್ಟಿದೆ" ಎಂದು ಎಲ್ಲರ ಭಾವನೆ. ಮುಂದಿನ ಫಲಕ್ಕಾಗಿ ನೆಟ್ಟ ತೆಂಗಿನ ತೋಟವನ್ನು ಇಂದು ಅಭಿಮಾನದಿಂದ ಸಾಕುವ ತೋಟಿಗನಂತೆ, ಕೆಟ್ಟ ಕಣ್ಣಿನ ನೋಟವಿಂದ ನಾಯಕನು ಅವಳನ್ನು ನೋಡುತ್ತಿದ್ದಾನೆ ಎಂಬುದು ಯಾರಿಗೂ ತಿಳಿಯದು.

ಆದರೂ ನಾಯಕನು ಸೋಲುತ್ತಿದ್ದರೂ 'ವಚ್ಚ' ಕೊಡದ ಜೂಜುಗಾರನಂತೆ, ತನ್ನ ಹೃದಯ, ತನ್ನ ಮರ್ಮ ಯಾರಿಗೂ ತಿಳಿಯಗೊಟ್ಟಿಲ್ಲ. ಎಂದಿನಂತೆ, ಬೆಳಗಿನ ಸ್ನಾನ, ಶಿವಪೂಜೆ, ಕಚೇರಿಯ ಕೆಲಸ, ಮಿತ್ರಗೋಷ್ಠಿ, ಎಲ್ಲವನ್ನೂ ನಡೆಸುತ್ತ ಇದ್ದಾನೆ. ಆದರೆ, ಒಂದೇ ಒಂದು ಕಳ್ಳ ಏಟು. ಮೊದಲಿಗಿಂತ ಕುದುರೆಯ ಮೇಲೆ ತಿರುಗುವುದು ಹೆಚ್ಚಾಗಿದೆ. ಎಲ್ಲರೂ ನಾಯಕರು ಬಿರುದು ಪಡೆದಮೇಲೆ ಅವರಿಗೆ ಆಸ್ತಿಮೇಲಿನ ಗಮನ ಹೆಚ್ಚಾಯಿತು ಎನ್ನುವರು.

ಮಹಾರಾಜರ ವರ್ಧಂತಿ ಬಂತು. ನಾಯಕನಿಗೆ ಕರೆ ಬಂತು.

ಅರಮನೆಯ ಕರೆ. ಅದು ಮಾತಿಗೆ ಕರೆ: ಆದರೆ ನಿಜವಾಗಿ ಅದು ಸುಗ್ರೀವಾಜ್ಞೆ, ಹೋಗಲೇಬೇಕು. ನಾಯಕನಿಗೆ ಮನಸ್ಸಿಲ್ಲ. ಖಾಯಿಲೆ ಯೆಂದು ದುಪ್ಪಟಿಯನ್ನು ಹೊದೆದುಕೊಂಡು ಮಲಗಿ ಬಿಡಲೇ ಎಂದು ಒಂದು ಮನಸ್ಸು. ಮಲ್ಲಿಯನ್ನು ಬಿಟ್ಟು ಹೋಗಲಾರ. ಕೊನೆಗೊಂದು ಗಳಿಗೆಯಲ್ಲಿ ಇತ್ಯರ್ಥ ಮಾಡಿಬಿಟ್ಟ: "ಅವಳನ್ನೂ ಕರೆದುಕೊಂಡು ಹೋಗುವುದು" ಎಂದು. ಅವಳೊಬ್ಬಳನ್ನೇ ಕರೆದುಕೊಂಡು ಹೋಗು ವುದು ಸಾಧ್ಯವಿಲ್ಲ: ಅದಕ್ಕಾಗಿ ಸಂನ್ಯಾಸಿಯ ಸಂಸಾರದಂತೆ ನಾಯ ಕನು ವರ್ಧಂತಿಗೆ ಸಪರಿವಾರನಾಗಿ ಹೋದ. ಕಾರಾಪುರದ ಕ್ಯಾಂಪಿನಲ್ಲಿ ಅಷ್ಟು ಅಭಿಮಾನವಾಗಿ ತನ್ನನ್ನು ಗೌರವಿಸಿದ ಮಹಾಪ್ರಭುವಿನ ಕರೆ ಮೀರಲಾರದೆ, ಮೈಸೂರಿಗೆ ಬಂದ.

ಮಹಾರಾಜರು ನಾಯಕನನ್ನು ವಿಶ್ವಾಸವಾಗಿ ಬರಮಾಡಿ ಕೊಂಡರು. ಅವನ ಜೊತೆಯಲ್ಲಿ ಬಂದಿದ್ದವರಿಗೆಲ್ಲಾ ಅರಮನೆಯ ಔತಣವಾಯಿತು. ಅರಮನೆಯನ್ನು ನೋಡಲು ಅಪ್ಪಣೆ ದೊರೆಯಿತು. ಎಲ್ಲರೂ ಮಹಾರಾಜರ ಅಭಿಮಾನದ ಹೊಳೆಯಲ್ಲಿ ಮಿಂದು ಮಡಿಯಾಗಿ ಸುಖಪಟ್ಟರು. ನಾಯಕನು ಸಪರಿವಾರನಾಗಿ ಒಂದು ವಾರ ರಾಜಾತಿಥಿ ಯಾಗಿದ್ದನು.

ಮಹಾರಾಜರು ನಾಯಕನನ್ನು ಒಮ್ಮೆ ವಸಂತ ಮಹಲಿಗೆ ಕರೆಯಿಸಿಕೊಂಡರು. ಆತನ ಆಸ್ತಿಪಾಸ್ತಿ ಸಾಲಸೋಲ ಎಲ್ಲವನ್ನೂ ವಿಚಾರಿಸಿದರು. ಆತನಿಗೆ ಅಪಾರವಾದ ಆಸ್ತಿಯಿರುವುದನ್ನೂ ಸಾಲ ವಿಲ್ಲದಿರುವುದನ್ನೂ ಕೇಳಿ ಅವರಿಗೆ ಬಹು ಸಂತೋಷವಾಯಿತು.

"ನಾಯಕರೆ, ತಾವು ಏನಾದರೂ ಓದುತ್ತೀರಾ ?"

ಪ್ರಶ್ನೆಯು ಸಹಜವಾಗಿ ಬಂತು. ಆದರೆ ನಾಯಕನು ಅದಕ್ಕೆ ಸಿದ್ಧವಾಗಿರಲಿಲ್ಲ. ತಬ್ಬಿಬ್ಬಾದನು. ಏನು ಹೇಳುವುದಕ್ಕೂ ತೋರ ಲಿಲ್ಲ. ಅವನು ಹಾಗೆ ಒದ್ದಾಡುತ್ತಿರುವುದನ್ನು ಗ್ರಹಿಸಿ ಅರಸರು ಮತ್ತೆ ಕೇಳಿದರು: "ತಮಗೆ ಹೊತ್ತು ಹೋಗುವುದಿಲ್ಲ ಎಂದಾಗಿ, ಜೈಮಿನಿ, ಭಾರತ, ರಾಮಾಯಣ ಓದುವುದಿಲ್ಲವೆ ?"

ನಾಯಕನಿಗೆ ಬದುಕಿದೆ ಎನ್ನಿಸಿತು. ಹುಡುಗನಾಗಿದ್ದಾಗ

ಅಯ್ಯಗಳು ತನಗೆ ಅವೆಲ್ಲ ಓದಿಸಿದ್ದುದೂ, ತಾನು ರಾಗವಾಗಿ ಗತ್ತಾಗಿ ಓದುತ್ತಿದ್ದುದೂ ನೆನೆಪಾಯಿತು. ಅಷ್ಟು ದೊಡ್ಡವರಲ್ಲಿ ಇಲ್ಲ ಎಂದು ಮಾನ ಕಳೆದುಕೊಳ್ಳಲಾರದೆ, ಕೊಂಚ ಸುಳ್ಳಾದರೂ ಚಿಂತೆಯಿಲ್ಲವೆಂದು, ಕೈಮುಗಿದುಕೊಂಡು ಹೇಳಿದನು : "ಮಹಾಪಾದ, ನಮಗೆ ಅಯ್ಯನವರು ಕಲಿಸಿದ್ದೇ ಅದು. ನಮ್ಮ ಕಾಲದಲ್ಲಿ ಈಗಿನಂಗೆ ಸ್ಕೂಲುಗೀಲು ಇರಲಿಲ್ಲ ಬುದ್ಧಿ."

ದೊರೆಗಳು ನಗುತ್ತಾ ನುಡಿದರು : "ಬಿಟ್ಟದಷ್ಟು ಓದಿ ಠೇಂಕಾರ ಮಾಡುವ ವಿಚಾರವಲ್ಲ ನಾವು ಹೇಳಿದುದು. ತಾವು ಶ್ರೀಮಂತರು. ತಮಗೆ ಲಕ್ಷ್ಮಿ ಒಲಿದಿರುವ ಹಾಗೆ ಸರಸ್ವತಿಯಕಡೆ ತಾವು ಒಲಿದರೆ, ಲೋಕಕ್ಕೆ ಕ್ಷೇಮ. ಅದರಿಂದ ತಾವು ವಿದ್ಯಾಪ್ರಿಯರಾಗಬೇಕು ಎಂದು ನಮ್ಮ ಆಶೆ. ತಾವು ಗಣೇಶನ ಹಬ್ಬಮಾಡುತ್ತೀರಲ್ಲ : ಆಗ ದರ್ಬಾರು ಗಣೇಶನನ್ನು ಕೂರಿಸುವುದು ಉಂಟುತಾನೇ ?"

"ಉಂಟು ಮಹಾಪಾದ. ನಮ್ಮ ಅರಮನೆಯಲ್ಲಿ–ಅಲ್ಲ–ಮನೆಯಲ್ಲಿ."

ದೊರೆಗಳು ನಗುತ್ತಾ ಹೇಳಿದರು. "ತಾವು ಅರಮನೆಯಲ್ಲಿ ಎಂದರೆ ನಮಗೆ ಕೋಪವಿಲ್ಲ. ನಮ್ಮ ಪ್ರಜೆ ಒಬ್ಬೊಬ್ಬರಿಗೂ ಅರಮನೆ ಕಟ್ಟುವ ಯೋಗ ಬಂದರೆ, ನಮಗೆ ಅದು ಕಿರೀಟ ಬಂದಂತೆ. ಮುಂದೆ ಹೇಳಿ. ತಮ್ಮ ಊರಿನಲ್ಲಿ, ತಮ್ಮ ಸರಹದ್ದಿನಲ್ಲಿ ಎಲ್ಲರಿಗೂ ಮನೆ ಬಾಗಿಲು ಉಂಟಷ್ಟೆ ?"

"ಈಗ ಮೂರುಮುಕ್ಕಾಲು ಪಾಲು ಜನಕ್ಕೆ ಅದೆ ಪಾದ. ಇಲ್ಲಿಂದ ಹೋದಮೇಲೆ ಮನೆಯಿಲ್ಲದಿದ್ದ ಪಾಪಿ ಪರದೇಸಿಗಳಿಗೆ ಜೋಪಡಿ ನಾದರೂ ಹಾಕಿಸಿಕೊಡುತೀನಿ."

"ನಾವು ಹೋಗುವಾಗ ಈ ಐಶ್ವರ್ಯ ಇರಲಿ, ಒಂದು ಮರಳಿನ ಕಣವೂ ನಮ್ಮ ಜೊತೆಯಲ್ಲಿ ಬರುವುದಿಲ್ಲ. ಅದರಿಂದ ದಾನಮಾಡಿ, ಕೊಡಿ. ಉಪನಿಷತ್ತು ಎಂದು ಕೇಳಿದ್ದೀರಾ ? ಅಲ್ಲಿ ದೇವರ ಬಳಿಗೆ ಮಾನವರು ಹೋಗಿ ಉಪದೇಶ ಕೇಳಿದಕತೆ ಬಂದಿದೆ. ಆಗ ದೇವರು ದಂ ಎಂದರಂತೆ. ಮಾನವರು ಸರಿ ಎಂದರಂತೆ. "ದಂ ಎಂದರೆ ದತ್ತ

ಕೊಡಿ ಎಂದು ಹೇಳಿದಿರಿ. ನಾವು ಸಹಜವಾಗಿ ಲೋಭಿಗಳು–ಕೈಯು ಕೊಳ್ಳುವುದಕ್ಕೆ ಮುಂದೆ ಹೋಗುವಷ್ಟು ಕೊಡುವುದಕ್ಕೆ ಹೋಗುವುದಿಲ್ಲ" ಎಂದರಂತೆ. ಅದು ನೆನೆಪಿರಲಿ. ನಾಯಕರೆ, ತಮಗೆ ಕೊಟ್ಟ ದೇವರು, ಇಲ್ಲದವರಿಗೆ ಕೊಡು, ಅವರು ನನ್ನನ್ನು ಕಾಣರು, ಕೊಡುವ ನಿನ್ನಲ್ಲಿ ನನ್ನನ್ನು ಕಾಣಲಿ ಎಂದೇ ಹೇಳುವುದು. ಅಲ್ಲವೆ ? ನೋಡಿ. ಮೋಡ ನಮಗೆ ನೀರು ಕೊಡದಿದ್ದರೆ ನಾವು ಬದುಕಲಾದೀತೆ ? ಆ ನೀರು ನಾವೇ ತಡೆದುಕೊಂಡರೆ ಆದೀತೆ ? ಅದು ತಡೆದಿಟ್ಟರೂ ವಿವರಣವಾಗಿ ಹಂಚಬೇಕು. ಅದು ದೇವರ ಇಷ್ಟ ! ತಾವೂ ಹಾಗೇ ಮಾಡಿ. ಆಯಿತು, ಗಣೇಶನ ವಿಚಾರ ಕೇಳಿದೆವು ಅಲ್ಲ ? ಹೇಳಿ. ತಮ್ಮ ಅರಮನೆಯಲ್ಲಿ–ಮುಂದಕ್ಕೆ?"

ನಾಯಕನಿಗೆ ಅವರ ಮಾತು ನೀರಿನಲ್ಲಿ ಹಾಕಿದ ಸೀಸದ ಗುಂಡಿನ ಹಾಗೆ ಹೃದಯದ ಅಂತರಾಳದಲ್ಲಿ ಹೋಗಿ ನೆಲಸಿತು. "ಇದಕ್ಕೇ ಏನೋ ಈ ಪುಣ್ಯಪುರುಷ ದೊರೆಯಾಗಿರೋದು ?" ಎಂದು ಎದೆಯುಬ್ಬಿತು. "ಹೀಗೆ ಮಾಡಿ ಈ ದೇವರಿಂದ ಸೈಎನಿಸಿ ಕೊಳ್ಳಲೇ ಬೇಕು" ಎಂದು ಮನಸ್ಸು ನಿರ್ಧರಿಸುತ್ತಿರುವಾಗ ಮತ್ತೆ ಗಣೇಶನ ವಿಚಾರ ಬಂತು. ನಾಯಕನು ಥಟ್ಟನೆ ಎಚ್ಚೆತ್ತು ಕೊಂಡು ಹೇಳಿದನು.

"ಸುಮಾರು ಮುನ್ನೂರು ನಾನೂರು ವರ್ಷದ್ದು ಬೆಂಡಿನ ವಿನಾಯಕ ಅದೆ ಮಹಾಪಾದ ! ಈ ಹಬ್ಬ ಬಂದರೆ ದಿನಕ್ಕೊಂದು ಪಲ್ಲಾ ಪಂಚಕಜ್ಜಾಯ, ನೂರೆಂಟು ಇತುಗಾಯಿ, ಒಂದು ಬೆಂಡು ಗೂಡೆ ಹುರಿಗಡುಬು, ನೇವೇದ್ಯ ಮಾಡಿ ಊರಗೆಲ್ಲ ಹಂಚೋದು ಹಿಂದಿನಿಂದ ನಡೆದು ಬಂದದೆ ಬುದ್ಧಿ, ಆಗ ದೇಶ ದೇಶದ ವಿದ್ವಾಂಸರನ್ನ ಸಂಗೀತಗಾರರನ್ನ, ಕರೆಸಿ, ಅವರಿಗೆಲ್ಲ ಬಹುಮಾನ ಮಾಡುತಿದ್ದರಂತೆ. ಈಗ ಆ ಇಪ್ಪತ್ತೊಂದು ದಿನ ಭಾರತ ಓದಿಸ್ತೀವಿ ಬುದ್ಧಿ, ತಮ್ಮ ಅಪ್ಪಣೆ ಆಗದೆ : ಈ ಸಲ ವಿದ್ವಾಂಸರನ್ನ ಕರೆಸುತೀವಿ ಪಾದ."

"ಬಹಳ ಒಳ್ಳೇದು. ನಮ್ಮ ದೇಶಕ್ಕೆ ಶಾರದೆಯನ್ನು ಕರೆತಂದವರು ಸನ್ಯಾಸಿಗಳು. ಆದರೆ ಆಕೆ ಇಲ್ಲಿಯೇ ಇರುವಂತೆ ಇರಿಸಿ

ಕೊಳ್ಳುವ ಕೆಲಸ ಶ್ರೀಮಂತರದು. ಅವರು ಅದಕ್ಕಾಗಿ ಅಷ್ಟು ಯತ್ನ ಮಾಡಿಸಿಲ್ಲ. ಆಗುತ್ತದೆ ಅನ್ನೋಣ. ತಾವು ಭಾರತ ಓದಿಸುತ್ತೀರಲ್ಲ: ಅರ್ಥವನ್ನೂ ಹೇಳಿಸುತ್ತಿರೋ ? "

"ನಮ್ಮ ಶಾನುಭೋಗರೂ ನಾನೂ ಒಟ್ಟಿಗೇ ಓದೋದು ಕಲಿತೋ. ಈಗ ಅವರೇ ಓದೋದು."

"ಅರ್ಥವನ್ನೂ ಹೇಳಿಸಿ. ಇಲ್ಲಿ ನಮ್ಮ ಅರಮನೆಗೆ ಈಶಾನ್ಯವಾಗಿ ತೃಣೇಶ್ವರನ ದೇವಸ್ಥಾನವಿದೆ. ಅದರ ಮಗ್ಗುಲಲ್ಲಿ ದಿನವೂ ಭಾರತ ಓದುತ್ತಾರೆ. ದೇವುಡು ಶಾಸ್ತ್ರಿಗಳು ಓದುತ್ತಾರೆ: ರಂಗಣ್ಣನವರು ಅರ್ಥ ಹೇಳುತ್ತಾರೆ. ಒಂದು ದಿನವಾದರೂ ಹೋಗಿ ಕೇಳಿ ಬನ್ನಿ. ಹಾಗೆ ಊರು ಊರಿನಲ್ಲಲ್ಲ, ಕೇರಿ ಕೇರಿಯಲ್ಲೂ ಆದ ದಿನ ನಮ್ಮ ಸಂತೋಷಕ್ಕೆ ಪಾರವಿಲ್ಲ."

"ಅಪ್ಪಣೆ ಬುದ್ಧಿ."

"ನಾಯಕರೇ, ನೆನೆಪಿರಲಿ, ಶ್ರೀಮಂತರೆಂಬ ಕೆರೆಗೆ ಕೋಡಿ ಬಿದ್ದರೆ ತಪ್ಪಿಲ್ಲ. ತೂಬಿನಲ್ಲಿ ನೀರು ಹರಿದು ಕೆರೆ ಬರಿದಾದರೂ ಅದಕ್ಕೆ ಅದು ಕೀರ್ತಿ. ಆದರೆ ಕಟ್ಟೆಯೊಡೆದರೆ ಕೆಡುವುದು ಕೆರೆಯೊಂದಲ್ಲ: ಊರಿಗೆಊರೇ ಕೆಡುವುದು. ಅದು ನೆನೆಪಿರಲಿ."

ನಾಯಕನಿಗೆ ತಾನು ಇರುವುದು ರಾಜ್ಯವಾಳುವ ದೊರೆಯ ಬಳಿಯಲ್ಲಲ್ಲ: ಲೋಕೋದ್ಧಾರ ಮಾಡುವ ಮಹರ್ಷಿಯ ಬಳಿಯಲ್ಲಿ ಎನ್ನಿಸಿತು. "ಇದು ಉಪದೇಶ ಬುದ್ಧಿ ; ಈ ಜನ್ಮ ಇರೋತನಕ ಇದು ಮರೆಯೋಕಿಲ್ಲ. ಸಾಕ್ಷಾತ್ ಶಿವನ ಅಪ್ಪಣೆ ಅಂತ ತಲೆ ಮೇಗಿಟ್ಟುಕೊಂಡು ನಡೀತೀನಿ" ಎಂದು ಸಾಷ್ಟಾಂಗ ನಮಸ್ಕಾರ ಮಾಡಿ ಅಲ್ಲಿಂದ ಹೊರಟು ಬಂದನು.

ನಾಯಕನು ಒಂದು ಸುತ್ತು ತೆಗೆದಿದ್ದಾನೆ ನೋಡಿದವರು "ಅಷ್ಟಿಲ್ಲದೆ ಹೇಳುತ್ತಾರೆಯೇ ರಾಜದೃಷ್ಟಿ ಬೀಳಬಾರದು ಅಂತ" ಎಂದು ಕೊಳ್ಳುವರು. ಆದರೂ ನಾಯಕನು ಆ ನಗುವಿನಲ್ಲಿ ಎಲ್ಲವನ್ನೂ ತೇಲಿಸುವನು.

ನಾಯಕನಿಗೆ ಹೆಂಡತಿಯಲ್ಲಿ ಬಹಳ ಅಭಿಮಾನ. ಅವಳಿಗೂ ಅಷ್ಟೆ! ಗಂಡನು ಕೃಶನಾಗುತ್ತಿರುವನೆಂದು ಅವಳಿಗೆ ಬಹಳ ಚಿಂತೆ. "ಆಗ ಬೇಟೆಗೆ ಹೋಗಿ ಬಂದಲಾಗಾಯಿತು ಬುದ್ಧಿಯವರು ಇಳಿದು ಹೋಗುತವರೆ. ರಾಜದೃಷ್ಟಿಯೇ ತಾಕಿತೋ? ಆ ಕಾಡಿನಲ್ಲಿ ಏನಾದರೂ ಮೆಟ್ಟಿಕೊಂಡಿತೋ? ಏನಾದರೂ ಮಾಡಬೇಕು" ಎಂದು ಕೊಳ್ಳುವಳು. ಅಡಿಗೆಯ ಮಾದನ್ಮನನ್ನು ದಿನಕ್ಕೊಂದು ಸಲವಾದರೂ ಕರೆದು "ಅಮ್ಮೀ, ಆದಿನ ಬೇಟೆಗೆ ಹೋಗಿ ಬಂದ ಬುದ್ಧಿಯೋರಿಗೆ ಇಳೀ ತೆಗೆದೆಯಾ?" ಎಂದು ಕೇಳುವಳು. ಇನ್ನು ಯಾರು ಅಂತಃಪುರದಲ್ಲಿರುವ ಅವಳಿಗೆ ಕುಳಿತು ಕತೆಯನ್ನು ಹೇಳುವವರು? ಅವಳಿಗೆ ಬೇಸರವಾದರೆ, ಮಲ್ಲೀಗೆ ಬಂತು ಬುಲಾವ್!

ಅರಮನೆಗೆ ಮಗಳನ್ನು ಕರೆದುಕೊಂಡು ಹೋಗುವಾಗ ಕೆಂಪಿಯು ಬಹು ಪ್ರಯತ್ನದಿಂದ ಮಲ್ಲೀಗೆ ಜಡೆಯನ್ನು ಹಾಕಿ ಮೊಕ ಒರೆಸಿ ಕುಂಕುಮದ ಬೊಟ್ಟು ಚೆನ್ನಾಗಿಟ್ಟು ಕರೆದುಕೊಂಡು ಹೋಗುವಳು. ಆದರೂ ನಾಯಕನ ರಾಣಿ "ಸುಂದರಬುದ್ಧಿಯವರಿಗೆ" ಅದು ಸೊಗಸದು. ಅವಳ ಜಡೆಯನ್ನು ಬಿಚ್ಚಬೇಕು: ತಾನು ಮತ್ತೆ ಅದನ್ನು ಹೆಣೆಯ ಬೇಕು. ಸೊಗಸಾಗಿ ಅಲಂಕಾರ ಮಾಡಿ, ಅವಳನ್ನು ಎತ್ತಿಕೊಂಡು ಹೋಗಿ ನಾಯಕರ ಮುಂದೆ ಅವಳನ್ನು ಬೊಂಬೆಯ ಹಾಗೆ ಹಿಡಿದು "ಬುದ್ಧಿ, ನೋಡಿದಿರಾ ಈ ಮಲ್ಲೀನ?" ಎನ್ನಬೇಕು. ಅವರು ಅವಳನ್ನು ಎತ್ತಿಕೊಂಡು ಮಲ್ಲೀಗೆ ಒಂದು ಮುತ್ತು ಕೊಟ್ಟರೆ ಸುಂದರಬುದ್ಧಿಗೆ ಎಷ್ಟೋ ಸಂತೋಷ. ಅವಳೇ ಒಂದು ದಿನ

ಹೇಳಿದಳು: "ಲೇ ಮಲ್ಲಿ! ನಮ್ಮ ಬುದ್ಧಿಯೋರ್ನೇ ಮದುವೆಯಾಗಿ ಬುಡೇ! ನಮ್ಮ ಜೊತೆಯಲ್ಲಿಯೇ ಇದ್ದು ಬಿಡೋವಂತೆ" ಎಂದು. ಮಲ್ಲಿಯು "ಅಮ್ಮ! ಸುಂದರಬುದ್ಧಿಯವರು ಇಲ್ಲೇ ಇರು ಅಂತಾರೆ. ಇದ್ದು ಬಿಡಲಾ?" ಎಂದು ಕೇಳುವಳು.

ಕೆಂಪೀಗೆ, ಒಳಗಿನ ಮನಸ್ಸು "ಸುಂದರಬುದ್ಧಿಯವರ ಬಾಯ ಹರಕೆ ನಿಜವಾದರೆ, ನಮ್ಮ ಅದೃಷ್ಟ!" ಎನ್ನುವುದು.

ಸುಂದರಬುದ್ಧಿಯು ಒಂದೊಂದುದಿನ ಮಲ್ಲಿಯನ್ನು ಅಲ್ಲಿಯೇ ಇಟ್ಟುಕೊಳ್ಳುವಳು. ಆ ದಿನ ಆ ಗಂಡಹೆಂಡಿರ ಜೊತೆಯಲ್ಲಿ ಅವಳಿಗೂ ಆ ಶಯ್ಯೆಯಲ್ಲಿ ಎಡೆಯು ಸಿಗುವುದು.

ನಾಯಕನಿಗಂತೂ ಒಂದು ವಿಚಿತ್ರವಾಗಿತ್ತು. ಆ ದಿನ ರಾಜ ಕುಮಾರನ ಸನ್ನಿಧಿಯಲ್ಲಿ ಬೇಟೆಗೆ ಹೋಗಿಬಂದು ಆಗಿದ್ದ ಆಯಾಸವೆಲ್ಲ ಪರಿಹಾರವಾಗಿ ಮೈಯ್ಯು ಹಗುರವಾದಂತೆ, ಮಲ್ಲಿಯನ್ನು ತಬ್ಬಿ ಕೊಂಡಾಗಲೆಲ್ಲ ಆಗುವುದು. ಈಚೆಗೆ ಎಷ್ಟೋ ಸಲ ಬೇಟೆಗೆ ಹೋಗಿ ಬಂದು, ತನಗೆ ಆಗುವ ಅನುಭವವು ನಿಜವೇ ಎಂದು ಪರೀಕ್ಷಿಸಿಕೊಂಡಿ ದ್ದನು. ನಿಜ ಎಂದು ಆತನಿಗೆ ನಂಬಿಕೆಯಾಗಿತ್ತು. ಅಂದಿನಿಂದ ಬೇಟೆಗೆಹೋಗಿ ಬಂದದಿನ ತಪ್ಪದೆ ಅರಮನೆಯಿಂದ ಮಲ್ಲಿಗೆ ಕರೆಬಂದು ಅವಳು ಅಲ್ಲಿಯೇ ನಿಲ್ಲುತ್ತಿದ್ದಳು.

ಒಂದು ದಿನ ನಾಯಕನು ತಡೆಯಲಾರದೆ ಹೆಂಡತಿಯನ್ನು ಏಕಾಂತದಲ್ಲಿ ಕೇಳಿದ. ಕೇಳಿದಾಗ ಅವನಿಗೆ ಏನೋ ಕೇಳಬಾರದ ಮಾತು ಕೇಳುವಂತೆ ಒಳದಿಗಲು. "ಅಲ್ಲಾ, ಈ ಹುಡುಗಿ ನೋಡಿ ದಿರಾ? ಇವಳ ಮಗ್ಗುಲಲ್ಲಿ ಮಲಗಿದರೆ ಏನೋ ಸೊಂಪು ಅಲ್ಲವಾ?"

ರಾಣಿಯು ನಕ್ಕು ಹೇಳಿದಳು: "ಅದೂ ನಾನು ಕಂಡಿವ್ನಿ. ಅದಕ್ಕೇ ಇವಳ್ನ ಬುದ್ಧಿಯೋರಿಗೆ ಮೀಸಲು ಮಾಡೋವಾ ಅಂತಲೂ ಅಂದುಕೊಂಡಿವ್ನಿ. ಅಲ್ಲದೆ, ಇನ್ನೇನು ಆರುವರ್ಷ. ಇನ್ನು ಆರೇಳು ವರ್ಷದಲ್ಲಿ ಅವಳೂ ಮೈನೆರೀತಾಳೆ. ಆ ವೇಳೆಗೆ ನಾವು ದೊಡ್ಡಮ್ಮ ನೋರಾಗಿ, ಚಿಕ್ಕಮ್ಮನೋರು ಇನ್ನೊಬ್ಬರಿದ್ದರೇನೆ ಸರಿ, ಅಂತ. ಆದರೆ ಈ ಮುಂಡೇದರ ರೂಪಗೀಪ, ಗುಣಗಿಣ, ಇರೋ ಅಂಗೇ

ಕುಲವೂ ಇದ್ದಿದ್ದರೆ, ಅನ್ನಿಸ್ತದೆ. ಇನ್ನೊಂದುಸಲ, ಬುದ್ಧಿಯೋರಿ ಗೇನಂತೆ ಕುಲವಿದ್ದರೆ ತಾಳಿ, ಇಲ್ಲದಿದ್ದರೆ ಬಂದಿ, ಅಂದುಕೋತೀನಿ."

"ಅಂತೂ ಬುದ್ಧಿಯೋರಿಗೆ ಮಲ್ಲೀ ಕಟ್ಟಬೇಕು?"

"ನಾ ಕಟ್ಟದಿದ್ದರೂ ಇದನ್ನ ಇನ್ನು ಯಾರಾದರೂ ಮುಟ್ಟಿ ಬದುಕಾರಾ? ಆದರೂ ದೇವರು ಇಂತ ಹೆಣ್ಣ ಇನ್ನು ಹುಟ್ಟಿಸಾನೋ ಇಲ್ಲವೋ? ಇದು ನನ್ನ ಹೊಟ್ಟೇಲಾದರೂ ಹುಟ್ಟಿದ್ದರೆ? ಈ ಮುಕ್ಕ ನಿಗೆ ಏನೇನು ಮಾಡಿಬಿಡುತ್ತಿದ್ದೆನೋ? ಈಗಲಾದರೂ ಹೋಕ್ಕೊಳ್ಳಿ, ನಮ್ಮನೇಗಾದರೂ ಸೇರಿಕೊಂಡು ಬದುಕಲಿ."

"ಅಲ್ರೀ ಇಂತಾ ರೂಪಸಿ ಮನೆಗೆ ಬಂದರೆ ನಿಮ್ಮ ಗತಿ?"

"ನಮ್ಮ ಗತಿಯೇನು? ಬುದ್ಧಿಯೋರು ಊರೂರು ತಿರುಗೋ ದಾದರೂ ನಿಲ್ಲುತದೆ. ಮಾರಾಯರು ಎತ್ತೋದರೋ ಏನೋ ಅಂತ ನಿದ್ದೆಯಿಲ್ಲದೆ ರಾತ್ರಿಯೆಲ್ಲಾ ಒದ್ದಾಡೋದಾದರೂ ತಪ್ತದೋ?"

"ಹಂಗಾದರೆ ನಮ್ಮಿಂದ ನಿಮಗೆ ಬೋ ಒದ್ದಾಟ ಅನ್ನಿ."

"ಅಂಯ್! ಬುಡಿ ಅಂದ್ರೇ! ಗಂಡಸರು ಅಂದರೆ, ಇನ್ನೇನು ಒಂದೇ ನಂಬ್ಕೊಂಡು ಕಣ್ಣು ಪಿಳೀ ಪಿಳೀ ಅಂತ, ನಾನೂ ನನ್ನ ಕಣ್ಗೊಂಬೆ ಅಂತ ಕುಂತಿರಬೇಕಾ? ಹೆಣ್ಣು ಮನೇಲಿರಬೇಕು. ಗಂಡು ಹತ್ತುಮನೆ ಬಾಗಿಲಾದರೂ ಹತ್ತಿಳೀದಿದ್ದರೆ, ಆ ಮುಕ್ಕನ್ನ ಏನು ಹೇಳಲೋ?"

"ಅಂಗಾದರೆ ನಾವು ಮಾಡೋದು ಒಪ್ಪಿಕೆ ಅಂತ ಆಯಿತು."

"ಹಸಾ ಆದರೆ ಮನೇಲಿ ಕಟ್ಟಬೋದು. ಹುಲಿ, ಹಂದಿ, ಜಿಂಕೆ, ಕಾಟಿ, ಅವ್ನೆಲ್ಲ ಹಿತ್ತಲಲ್ಲಿಡೋಕಾದೀತಾ ಬುದ್ಧಿ! ಅವೆಲ್ಲಾ ಕಾಡಲ್ಲೇ ಇರಬೇಕು. ಬೇಕೂ ಅಂದಾಗ ಬ್ಯಾಟೆಗೆ ಹೋಗೋಕಿಲ್ವಾ! ಅಂಗೇ! ಅದಕ್ಕೆ ನಾವು ಅಡ್ಡಿಬಂದರೆ, ಆದೀತಾ! ಹೆಣ್ಣು ಹುಟ್ಟ ರೋದು ಗಂಡಿನ ಪಾದ ತೊಳೆಯೋಕೆ. ಗಂಡು ಹುಟ್ಟಿರೋದು ಮೆರೆಯೋಕೆ."

"ಆಯಿತು. ಕೊನೆಗೆ ಮಲ್ಲೀದು ಏನು ಮಾಡೀರೋ?"

"ಒಡೇರು ಆಗಬೋದು ಅಂದರೆ ನಾಳೆಯೇ ಬಂದಿಮಾಡೋಕೆ

ಹಾಕೋದೇ."

"ಊರೋರು, ಈ ಸೂಳೇಮಗನ್ನ ನೋಡಪ್ಪ; ತನ್ನ ಹೊಟ್ಟೇಲಿ ಹುಟ್ಟಿದ ಮೊಗೀನಂಗೆ ಇರೋ ಮೊಗೀಗೆ ಬಂದ ಹಾಕದ ಅನ್ದೆ ಬುಟ್ಟಾರಾ !"

"ಆ ! ಏನೇಳ್ತೀ ಈ ಊರೋರ್ನ ! ಚಪ್ಪನ್ನಾರು ದೇಶದ ಮೇಲೆ ತಾನೇ ನಮ್ಮ ಬುದ್ಧಿಯೋರು ಮಾಡಿದ್ದು ಒಪ್ಪದೆ, ಅಂಯ್ ಅಂದು ಬದುಕೋ ಗಂಡಾದರೂ ಉಂಟಾ ! ಬುದ್ಧಿಯೋರ ಇಚಾರ ಉಸ್ ಅಂದ್ರೆ, ನಮ್ಮ ಹಿಂದುಗಳಾದರೂ ಒಂದುಸಲ ಹಿಂದುಮುಂದು ನೋಡಿ ಲೇ ಅಂದಾರು, ಅವ ಇದಾನಲ್ಲ ನಿಮ್ಮ ಹಕೀಂ ಅವನು ಒಂದೇ ಏಟಿಗೆ ಹಾರಿಬುಟ್ಟಾನು : ಸೀಳ್ನಾಯಿ ಬಿದ್ದಂಗೆ ಮೇಲೆ ಬಿದ್ದು ಸಿಗಿದು ಬಿಟ್ಟಾನು. ಅವನು ಬಾಯಲ್ಲಿ ಅಲ್ಲಾ ಅಲ್ಲಾ ಅಂದರೂ ಅವನಿಗೆ ನಿಮ್ಮ ಮೇಲೆ ಪಂಚಪ್ರಾಣ ಅಲ್ಲವಾ ?"

"ಅಂಗಾದರೆ ಈಗ ಮಲ್ಲೀ ನಿಮ್ಮ ಮಗ್ಗುಲಲ್ಲಿ ದಿನಾ ಮಲಗೋಕೆ ಅವಳ ಕುಲ ಅಡ್ಡಿ ಅನ್ನಿ."

"ನೀವು ಸಾವಿರ ಏಳಿ. ಇಂತಾ ಹೆಣ್ಣು ಕುಲಹೀನರ ಮನೇಲಿ ಹುಟ್ಟೋಕಿಲ್ಲ. ಏನೋ ಅವಳ ಹೀನ ಅದೃಷ್ಟ. ಎಲ್ಲಿಂದಲೋ ಬಂದು, ವನವಾಸ ಬಂದ ಗೌರಮ್ಮನಂಗೆ ಇವರ ಮನೆ ಸೇರವಳೆ."

"ಇರಲಿ ಬುಡಿ. ನಾಳೆನಾಳಿದ್ದರಲ್ಲಿ ಇನ್ಸ್‌ಪೆಕ್ಟರ್ ರಜಾಕ್ ಸಾಬರು ಬರುತಾರೆ. ಆಗ ಎಲ್ಲಾ ತಿಳೀತದೆ ! ಹೋಗಲಿ, ಕೆಂಪೀಗೂ ಮಲ್ಲಣ್ಣನಿಗೂ ಹೇಳಿ ಇಲ್ಲೇ ಇಟ್ಕೊಂಡೇ ಬುಡಿ ಅಷ್ಟು ಆಸೆಯಾದರೆ!"

"ತಮ್ಮ ಅಪ್ಪಣೆ ಆಗಲಿ ಅಂತ ನಾನೂ ತಡದೇ ! ಇರಲಿ. ಸುಮ್ಮನಿರಿ. ಇದಕೂ ದಿನದಿನ ಆ ಅಲಂಕಾರ, ಈ ಅಲಂಕಾರ, ಅಂತ ಮಾಡಿ ನಾನೂ ಒಡವೆಗಿಡವೆ ಹೇರಿ ಪುಸಲಾಯಿಸಿತಿದ್ದೀನಿ. ಅಲ್ಲದೆ, ಆ ಬುದ್ಧಿ ಅದೇನು ಬುದ್ಧಿ ಅಂದೀರಿ, ಇನ್ನೂ ಆ ಮುಕ್ಕ ಆರು ವರ್ಷ ತುಂಬದೋ ಇಲ್ವೋ ಆಗಲೇ ಪುಸ್ತಕ ಓದುತದಲ್ಲ ! ಅದ್ಕೂ ಅರಮನೆ ಸಂಬಳ ಆಗದೆ; ಮೈಸೂರಲ್ಲಿ ಮನೆ ಮಾಡ್ಬುಟ್ಟು ಇಟ್ಟು ಎಲ್ಲಿವರೆಗಾದರೂ ಸೈ ಓದಿಸೇಬುಟ್ಟರೋ ಅನ್ನಸ್ತದೆ."

"ಅಲ್ಲಾ ಕಣ್ರೀ, ಅವಳು ಓದಿದರೆ, ಓದುಬರಾ ಬರದಿದ್ದ ನಿಮ್ಮ ಕೈ ಹಿಡಿದು ಸುಖವಾಗಿದ್ದಾಳಾ ! ನಿಮ್ಮ ಮಾತು ಕೇಳಿ ಬಂದೀನೂ ಹಾಕಿಬುಡೋದು, ಓದಿಸಿಬುಡೋದು, ಆಮೇಲೆ ಎಲ್ಲಾದರೂ ನಮ್ಮ ಬುಡಕೇ ನೀರು ತಿದ್ದಿದರೆ ?"

"ಮಡಕೆ ಒಡೆದರೆ ಮೂರೇಕಾಸು. ಓದಿದ ಮೇಲೆ ಐಲುಬಂದು ದಾರಿ ದಾರಿ ಹಿಡೀತು ಅನ್ನಿ. ಆಗತಾನೆ ಏನು ನಿಮ್ಮ ಎಂಜಲು ತಿನ್ನೋ ನಾಯಿಗಳು ಅನ್ನೋದು, ಆದರೆ, ಈ ಜಾತಿ ಹಂಗಾಗೋಕಿಲ್ಲ. ಇಲ್ನೋಡಿ, ಈ ಕೈರೇಕೆ ಇರೋರು ನಿಯತ್ತಾಗಿರ್ತಾರಂತೆ. ನಂಗೆ ನಮ್ಮಪ್ಪಾಜಿ ಹೇಳ್ತಿದ್ದರು. ಈ ರೇಕೆ ನಂಗಿಂತಲೂ ಮುದ್ದಾಗಿದೆ ಅದರ ಕೈಲಿ."

"ಅಂಗಾದರೆ, ರೇಕೆಗೀಕೆ ಎಲ್ಲಾ ನೋಡಿದೀರಿ ಅನ್ನಿ."

"ಅಂಯ್ ಬುಡಿಬುದ್ಧಿ."

ನಾಯಕನಿಗೆ ಹೆಂಡತಿಯ ಮಾತು ಪ್ರಿಯವೂ ಆಗಿತ್ತು. ಪಥ್ಯವೂ ಆಗಿತ್ತು. ಆದರೂ, ಎಳೀ ಮಗು, ಕಂದಮ್ಮ ಹೋಗಲಿ, ಬೇಡ ಅಂದಾನೇ ? ಸಾಧ್ಯವಿಲ್ಲ. ಅಂತೂ ವೈದ್ಯ ಹೇಳಿದ್ದೂ ಹಾಲೂ ಅನ್ನ ರೋಗಿ ಬಯಸಿದ್ದುದೂ ಹಾಲೂ ಅನ್ನ ಎಂಬಂತೆ ಆಯಿತು. "ಆಗಲಿ, ಏನೇನಾಯ್ತದೋ ನೋಡೋವ, ಮಾತು ಹಂಗಂದು ಕಣ್ಣಿಗೆ ನಿದ್ದೆ ಕೊಡೀಬನ್ನಿ" ರಾಣಿಯು ಇನ್ನೂ ಹತ್ತಿರಕ್ಕೆ ಬಂದು ತಬ್ಬಿಕೊಂಡು ನಂಬಿಸುತ್ತಾ ಹೇಳಿದಳು : "ಬುದ್ಧಿ, ಋಣವಿದ್ದು ಈ ಮುಕ್ಕ ತಮ್ಮ ಕೈಹಿಡಿದರೆ, ಮಲ್ಲಿಗೆ ಪಾದರಿ ಹೂವಿನ ಸರದಂಗೆ ಇರದಿದ್ದರೆ ನಾ ನಮ್ಮ ತಾಯಿ ಮಗಳಲ್ಲ ಅನ್ನಿ."

ನಾಯಕನಿಗೆ ಆ ಸರಳತೆಯು ಕಣ್ಣಿನಲ್ಲಿ ನೀರು ತಂದಿತು. ಚೊಕ್ಕ ವಾಗಿ ಅವಳಿಗೊಂದು ಮುತ್ತುಕೊಟ್ಟು "ನಿನ್ನಂಥಾ ಚಿನ್ನ ಇದ್ದೂ ಈ ಹಾಳು ಮನಸ್ಸು ಕಾಗೇಬಂಗಾರದ ಬೆನ್ನು ಬಿಡೊಲ್ಲದಲ್ಲಾ ; ಹಾಳು ಹಣೇಬರಕ್ಕೇನು ಹೇಳಲಿ ?" ಎಂದು ಅವಳನ್ನು ಇನ್ನೂ ಗಾಢವಾಗಿ ತೆಕ್ಕೆಯಲ್ಲಿ ಹಿಡಿದನು.

೧೬

ನಾಯಕನು ಬಿಸಿಲು ಮಹಡಿಯಲ್ಲಿ ಶತಪಥಮಾಡುತ್ತಾ ಇದ್ದಾನೆ. ಅವನಿಗೇ ನಗು: "ಆನೆ ಹೊಡೆದಿದ್ದೀನಿ, ಕಾಟಿ ಹೊಡೆದಿದ್ದೀನಿ. ಹುಲಿಭುಜತಟ್ಟಿ ಎಬ್ಬಿಸಿ ಹೊಡೆದಿದ್ದೀನಿ. ಆಗ ಅಳುಕು ಅನ್ನೋದು ಸಾಸುವೆಗಾತ್ರ ಕಾಣಲಿಲ್ಲ. ಈಗ ಈ ಎಳೇ ಮೋಗೀನ ಮೇಲೆ ಗೀಳು ಹಿಡಿದು, ತನ್ನ ನೆರಳುಕಂಡು ಬೆಚ್ಚೋ ಕುದುರೆ ಆಗಿದ್ದೀನಲ್ಲ. ಮಲ್ಲಣ್ಣನಿಗೆ ಸಾವಿರ ಅಲ್ಲದಿದ್ದರೆ, ಎರಡು ಸಾವಿರ, ಕೊನೆಗೆ ಐದು ಸಾವಿರ ಕೊಟ್ಟಾದರೂ ಕೊಂಡುಕೊಂಡು ಜನಾನಾದಲ್ಲಿ ಕಾಪಾಡಕೋಬೋದಲ್ಲಾ ಈ ಹೆಣ್ಣ! ಇದಕ್ಕಾಗಿ, ಹೀಗೆ ನವೆಯೋದು ಎಲ್ಲಿ ಹಣೇಬರಹ?" ಎಂದು ಅವನಿಗೆ ತನ್ನಮೇಲೆ ಕೋಪ. ಮತ್ತೆ ತನ್ನನ್ನು ಕಂಡರೆ ತನಗೇ ನಗು.

ಆಳು ಮೆಟ್ಟಿಲಿನಮೇಲೆ ಯಜಮಾನನ ಗಮನವು ತನ್ನಮೇಲೆ ಬಿದ್ದೀತೇನೋ ಎಂದು ಕಾಯ್ದುಕೊಂಡು ನಿಂತಿದ್ದಾನೆ. ಅವನು ಕೈಕಟ್ಟಿಕೊಂಡು ನಿಂತು ನಿಂತು ಸಾಕಾಗಿ ಕೊನೆಗೆ ಸಣ್ಣಗೆ ಕೆಮ್ಮಿದನು. ಎದುರಿಗೆ ನಿಂತು ಆನೆಯು ಘೀಳಿಟ್ಟರೆ, ಹುಲಿಯು ಗರ್ಜಿಸಿದರೆ ಅಲುಗದ ನಾಯಕನು ಆ ಸಣ್ಣ ಕೆಮ್ಮು ಕೇಳಿ, ಹಾರಿಬಿದ್ದವನಂತೆ ನಡುಗಿ ಜಾಗ್ರತನಾಗಿ ತಿರುಗಿ ನೋಡಿದನು.

ಆಳು ಅಪಚಾರವಾಯಿತೆಂಬಂತೆ ಹೆದರಿ ಕೈಮುಗಿಯುವ ನೆವದಲ್ಲಿ ಮೊಕವನ್ನು ಮುಚ್ಚಿಕೊಂಡನು. ನಾಯಕನು ಯಾವುದೋ ಪ್ರಪಂಚದಲ್ಲಿದ್ದು ಬಂದವನಂತೆ, ಎದುರಿಗೆ ಇರುವವನು ತನ್ನ ಆಳು ಎಂದು ಚೆನ್ನಾಗಿ ಕಾಣುತ್ತಿದ್ದರೂ 'ಯಾರು?' ಎಂದನು. ದನಿಯು ಗದರಿಸುವ ಇಷ್ಟವಿಲ್ಲದಿದ್ದರೂ ಗದರಿಸಿದಂತೆಯೇ ಇತ್ತು.

ಆಳು ಮಿದುವಾಗಿ "ನಾನು ಬುದ್ಧಿ" ಎಂದನು.

"ಏನು?"

"ಪೋಲೀಸಿನವರು ಬಂದಿದ್ದಾರೆ."

" ಏನು ? ಇನ್ಸ್ಪೆಕ್ಟರ್ ರಜಾಕ್ ಸಾಬರೇನೋ ? "

" ಔದು ಬುದ್ಧಿ "

" ಮೊದಲೇ ಬಂದು ಯಾಕೆ ಹೇಳಲಿಲ್ಲ ? "

" ಬಂದೆ ಬುದ್ಧಿ, ತಾವು ಇತ್ತ ತಿರುಗಲೇ ಇಲ್ಲ ಪಾದ. "

" ಸರಿ, ನಡಿ "

ನಾಯಕನು ಮೆಟ್ಟಲಿಳಿದು ಆಳಿನ ಹಿಂದೆಯೇ ಬಂದನು. ಇನ್ಸ್ಪೆಕ್ಟರು ಮೊದಲಿನ ತೊಟ್ಟಿಯ ದಿವಾನಖಾನೆಯಲ್ಲಿ ಕುಳಿತಿದ್ದರು. ನಾಯಕನು ಬಂದು " ಇನ್ಸ್ಪೆಕ್ಟರ್ ಸಾಹೇಬರು ಮಾಫಿ ಕೊಡಬೇಕು. ಏನೋ ಕೆಲಸದಲ್ಲಿದ್ದೆ " ಎಂದನು.

ಇನ್ಸ್ಪೆಕ್ಟರ್ ನಾಯಕನ ಮೊಕನೋಡಿ " ಬುದ್ಧಿಯೋರು ಬಹಳ ಕೆಲಸದಲ್ಲಿದ್ದು ದಣಿದಿರೋ ಹಂಗದೆ " ಎಂದನು.

ನಾಯಕನು ಏನು ಹೇಳಬೇಕು ? ಮಲ್ಲಿಯ ಯೋಚನೆಯಲ್ಲಿ ಮುಳುಗಿದ್ದೆ ಎನ್ನಲಾದೀತೆ ? ಅದರಿಂದ ಲೋಕಾಭಿರಾಮವಾಗಿ, "ಏನು ಮಾಡೋದು ? ತಾವು ಕಾಣದ್ದು ಏನದೆ ? ಇದ್ದೇ ಅದೆ. ಬೇಡ ಅಂದರೆ ಬಿಟ್ಟೇತಾ ? ಪಡಕೊಂಡು ಬಂದದ್ದು !" ಎಂದನು.

ಇನ್ಸ್ಪೆಕ್ಟರು ಅದನ್ನು ಅರ್ಥಮಾಡಿಕೊಂಡಂತೆ, " ಮಾದೇ ಗೌಡರದು ತಾನೇ ? ತಾವು ಅಷ್ಟು ಯೋಚಿಸಬೇಕಾಗಿಲ್ಲ. ನಾನು ಡಿ. ಎಸ್. ಪಿ. ಯವರಿಗೆ ಹೇಳಿದ್ದೀನಿ. ಅವರು ಡಿ. ಸಿ. ಅವರ ತಾವ ಹೇಳಿದ್ದಾರೆ. ಅಲ್ಲಿಂದ ಅಮಲ್ದಾರ್ರಿಗೆ ಯಾದಿ ಬರುತ್ತದೆ. ಎಲ್ಲಾ ಸರಿಹೋಗುತ್ತದೆ. ಮಾದೇ ಗೌಡರು ಮೊದಲಿನಂಗೆ ತಮ್ಮ ಮಾತು ಮೀರದೇನೆ ಇರೋ ಹಂಗೇ ಆಗ್ತದೆ. "

" ಹಾಗಾದರೆ, ಡಿ. ಸಿ. ಸಾಹೇಬರವರೆಗೂ ಮುಟ್ಟಿತೋ ಅವರ ಸುದ್ದಿ ? ನೋಡಿ, ಎಲ್ಲೋ ಬಿದ್ದಿದ್ದೋನ್ನ ತಂದು ಹೆಣ್ಣು ಕೊಟ್ಟದ್ದಕ್ಕೆ ಅವನ ಪ್ರತಾಪ ನೋಡಿ. ಅವನಿಗೆ ಈಗ ಹತ್ತು ಎಕರೆ ತರೀ, ಇಪ್ಪತ್ತು ಎಕರೆ ಹೊಲ, ನಾಕು ಜೊತೆ ಎತ್ತು, ಆಳುಕಾಳು, ಮೊದಲುಗೊಂಡು ಎಲ್ಲಾ ಕೊಟ್ಟರು ನಮ್ಮ ತಂದೆ. ಆ ಹೆಣ್ಣೂ ಹೋಯಿತು. ಈಗ ಮತ್ತೆ ನಮ್ಮ ತಂದೆ ಹತ್ತು ಸಾವಿರ ಕೊಡುತೀವಿ ಅಂತಿದ್ದರು. ಅದು

ಕೊಡಿ ಅಂತ ತಗಾದೆ. ಹೋಗಲಿ, ನೇರವಾಗಿ ಆದರೂ ಇದ್ದಾನಾ? ಶುದ್ಧ ಜುನ್ವಾಕೋರ. ಆ ಜಮೀನೆಲ್ಲಾ ಮಕ್ಕಳ ಹೆಸರಿನಲ್ಲಿ ಇದ್ದರೂ ಅದರಮೇಲೂ ಸಾಲಾಮಾಡಿದ್ದಾನೆ. ನಾವು ಕೊಟ್ಟರೂ ದಕ್ಕಿಸಿ ಕೊಂಡೀತಾ ಮುಕ್ಕ? ನಮ್ಮನ್ನ ದಾವಾ ಹೂಡುತೀನಿ ಅಂತ ಹೆದರಿಸಿದ. ನಮಗೆ ರಿಜಿಸ್ಟ್ರಿ ನೋಟೀಸ್ ಕೊಡಿಸಿದ. ಅವೊತ್ತು ಅವನ್ನ ಬಂದೂಕು ತಕೊಂಡು ಹೊಡೆದು ಬಿಡೋವಾ ಅನ್ನೋಷ್ಟು ಕೋಪ ಬಂದುಬುಟ್ಟಿತ್ತು. ನಮ್ಮ ಜನಾನಾ 'ಎಷ್ಟೇ ಆಗಲಿ, ಜೊತೇಲಿ ಒಂದೇ ತಣಿಗೇಲಿ ಕೈತೊಳೆದೋರು ಬುದ್ಧಿ' ಅಂತ ಆಣೆಯಿಟ್ಟು ತಪ್ಪಿಸಿದರು. ಇಂಥಾ ತುಂಟನಾಗನ್ನಲ್ಲಾ ಇವ!"

"ಹೋಗಲಿ, ಬುದ್ಧಿ, ನಾಯಕರೆ ಕೋರ್ಟಿಗೆ ಹೋದರೆ, ಎವಿಡೆನ್ಸ್ ಬೇಡ್ವಾ! ಕೋರ್ಟಿನೋರು ಬರಿ ಬಾಯಿಮಾತಿನಲ್ಲಿ ಡಿಕ್ರಿ ಕೊಟ್ಟಾರಾ? ಕೇಸ್ ಡಿಸ್ಮಿಸ್ ಆಗಿಹೋಗ್ತದೆ. ಅವರೇ ನಷ್ಟಾನೂ ಕೊಡಬೇಕಾಗ್ತದೆ."

"ಅಲ್ರೀ, ನಾಯಕರ ವಂಶದವನು ಕೋರ್ಟಿನಲ್ಲಿ ಸಾದಾ ಜನದ ಹಂಗೆ ಹೋಗಿ ನಿಂತುಕೊಂಡರೆ ಏನಾಯಿತು ನಮ್ಮ ಘನತೆ? ಮನುಷ್ಯ ಬದುಕೋದು ಮಾನಕ್ಕೆ. ಅಡಕೇಗೆ ಹೋದ ಮಾನ ಆನೆ ಕೊಟ್ಟರೂ ಬರೋಲ್ಲ ಅನ್ನೋದು ಕಾಣರಾ? ಅದ್ನ ಅವನೂ ಬಲ್ಲ. ಅದಕ್ಕೆ ಅಂಜೋರಮೇಲೆ ಕಪ್ಪೆ ಇಟ್ಟಂಗೆ ನಮ್ಮನ್ನಂಜಿಸೋದು ಈಗ, ನಾವೂ ಭಂಡಬಿದ್ದು ನಡೀ ಕೋರ್ಟಿಗೆ ಅಂದರೆ ಕೆಟ್ಟಾ: ಈಗ ಆ ಎರಡು ಎಕ್ರೆ ತೋಟಕ್ಕೆ ನೋಡಿ ಎಷ್ಟು ಮಾಡವ್ನೆ! ಬೆಲೆ ನೋಡಿದರೆ, ಆ ಮುಕ್ಕನಿಗೋಸ್ಕರ ನಾವು ಡಿ. ಸಿ. ಸಾಹೇಬರ ಕಚೇರಿ ಹತ್ತಬೇಕಾ ಅನ್ನಿಸ್ತದೆ. ಆದರೆ, ಕಟ್ಟೇಲಿ ಮೊಳೆ ಕಂಡಂಗೆ ಆದೀತು ಅಂತ ಈಗಲೇ ಉಷಾರಿ ಮಾಡಿಗೋದು."

"ಬಹಳ ಸರಿ. ತಾ ಮಾಡಿದ್ದು ಬಹಳ ಸರಿ. ನಮ್ಮ ಹತ್ತಿರ ಹೇಳೋದೂ ಒಂದೇ! ಅದ್ಮೇಗೆ ಕೈಕೋಳ ಹಾಕೋದೂಒಂದೆ!"

"ನೋಡಿ, ನಾವೇ ಮಾಡಿಕೊಂಡದ್ದು. ಸರಕಾರದವರು ರಾವ್ ಬಹದ್ದೂರ್ ಬಿರುದು ಕೊಟ್ಟರು: ಮಹಾರಾಜರು ತುಂಬಿದ ಸಭೆ

ಯಲ್ಲಿ 'ರಾಜಸೇವಾ ಪರಾಯಣ' ಅಂತ ಬಿರುದುಕೊಟ್ಟು, ಜೋಡಿಶಾಲು ಹೊದಿಸಿದರು. ಇನ್ನು ಪಟೇಲಿ ಬಾರದು ಅಂತ 'ಇರಲಿ, ನಮ್ಮೋನಲ್ಲಾ ಅಂತ ಇವನಿಗೆ ಪಟೇಲಿ ಮಾಡಿಸಿಕೊಟ್ಟರೆ' ನಮ್ಮ ಬುಡ್ಕೇ ನೀರುತಿ ದ್ರೋಕೆ ಬರತಾನಲ್ಲ !"

"ನಾನೇ ಬಂದೋ ಬಸ್ತು ಮಾಡಬಹುದು. ಆದರೂ ಅಲ್ಲಿಂದ ಬರಲಿ ಅಂತ ನಾನೇ ಡಿ. ಎಸ್. ಪಿ ಅವರಿಗೆ ಹೇಳಿ ಅಲ್ಲಿಂದ ಡಿ. ಸಿ. ಯವರಿಗೆ ಹೇಳಿಸಿದ್ದೇನೆ. ಅದು ಬಿಡಿ. ಇನ್ನೊಂದು ಸಮಾಚಾರ ಇತ್ತಲ್ಲಾ ?"

"ಏನು ಆ ಮೊಗಿಂದು ? ಏನಾದರೂ ಪತ್ತೆ ಆಯಿತೋ ?"

"ಅರರೇ, ನಾಯಕಸಾಬ್‌ರು ಹೇಳಿದ ಮೇಲೆ ಅದೇ ಮಾತೋ ಮಷ್‌ಗಿರಿಯೋ ? ನಾನು ಆಗಲೇ ತಲಾಷ್ ಮಾಡಿಸಿದೆ, ಈ ಮಧ್ಯೆ ಸರಕಾರದವರು ನಮ್ಮನ್ನು ಧಾರವಾಡಕ್ಕೆ ಹೋಗಿ ಬಾ ಅಂತ ಕಳುಹಿಸಿಬಿಟ್ಟರು. ಅದರಿಂದ, ಅಲ್ಲಿಂದ ಬರೋದು ತಡ ಆಯಿತು. ಯಾಕೆ, ತಮಗೆ ಗೊತ್ತಲ್ಲ, ನಾವು ಮೂರು ತಿಂಗಳು ರಜಾದ ಮೇಲೆ ಇದ್ದದ್ದು ?"

"ಹೌದು. ನಾವೂ ಹಕೀಂನ ಕಳೀಸಿದ್ದೋ ! ಅವ ಬಂದು ಸಾಹೇಬರು ರಜಾ ಹೋಗವ್ರೇ ! ಅವರಿರೋ ತಾವೇ ಗೊತ್ತಿಲ್ಲ ಅಂದ !"

"ಹೌದು. ನಾವು ತಲಾಷ್‌ಗೆ ಹೋಗುವಾಗ ಹಂಗೇ ಹೋಗೋದು. ಬೇದಿರಸ್‌ನಲ್ಲಿ, ಫಕೀರ್ ಹಂಗೆ, ಭಿಕಾರಿ ಹಂಗೆ, ಪರದೇಸೀ ಹಂಗೆ ಹೋಗೋದು."

"ಅದೇನು ?"

"ಓ ! ಅದು ಬೋ ದೊಡ್ಡ ಕತೆ ನಾಯಕ್‌ಸಾಬ್ ! ನೋಡಿ, ಕಲ್ಕತ್ತ ಕೇಳಿದ್ದೀರಲ್ಲ. ಅದು ಇರೋದು ಬಂಗಾಳಾದಲ್ಲಿ. ಅಲ್ಲಿ ರಾಣೀ ಸರ್ಕಾರದವರು ಬಂಗಾಳಾ ಎರಡು ಪಾಲು ಮಾಡಿ, ಅದೇ ಬೇರೆ ಇದೇ ಬೇರೆ ಅಂತ ಮಾಡಿತ್ತು. ಆ ಬಂಗಾಳಿ ಜನ ಕೊಂಚ ಬೇಗ ರೇಗೋ ಜಾತಿ, ಅವರೆಲ್ಲ ಮಸಲತ್ ಮಾಡಿ ದಂಗೆ ಎದ್ದು

ಬಿಟ್ಟರು. ಅಲ್ಲಿ ಬಿಪಿನ್ ಚಂದ್ರಪಾಲ್, ಅವರು ಇವರು ಯಾರು ಯಾರೋ ಗಲಾಟೆಯೋ ಗಲಾಟೆ ಮಾಡಿ ಬಿಟ್ರು : ಅದಕ್ಕೆ ತಕ್ಕಂಗೆ ಪೂನಾದಿಂದ ಬಾಲಗಂಗಾಧರ್ ತಿಲಕ್‌ರು ಗಲಾಟೆ ಮಾಡಿದರು. ಅಲ್ಲಿ ಪಂಜಾಬ್‌ನಿಂದ ಲಾಲಾ ಲಜಪತ್‌ರಾಯ್ ಗಲಾಟೆ ಮಾಡಿದರು. ಈ ಗಲಾಟೆನೆಲ್ಲ ನೋಡಿ ರಾಣಿ ಸರ್ಕಾರ ಕೂಡ ಹೆದರಿ ಬಿಟ್ಟು ಬಂಗಾಳ ಒಂದು ಮಾಡಿ ಬಿಡ್ತು. ಆಮೇಲೆ ಅಲ್ಲಿ ಪರಮಹಂಸ ಅನ್ನೋರು ಇದ್ದರಲ್ಲ, ಅವರ ಸಿಸ್ಯ ವಿವೇಕಾನಂದರು ಅಮೇರಿಕಾಕ್ಕೆ ಹೋಗಿ ಬಂದು ಈ ಕಿರಿಸ್ತಾನರ ಗುರುಗಳನ್ನೆಲ್ಲ ಹೆದರಿಸಿ ಬಿಟ್ಟರು. ಈಗ, ಅವರ ಕಡೆ ಸನ್ಯಾಸಿಗೋಳು ಈ ರಾಣಿ ಸರ್ಕಾರದ ಮೇಲೆ ಫಿತೂರಿ ಮಾಡೋಕೆ ಸುತ್ತುತಾ ಇದ್ದಾರೆ. ನೋಡೋಕೆ ಸನ್ಯಾಸಿ, ಕಪನಿ ಹಾಕ್ಕೊಂಡು. ಕೇಳಿದರೆ ರಾಮೇಶ್ವರ್ ಜಾತಾಹುಂ, ಹರಿದ್ವಾರ್ ಜಾತಾಹುಂ ಅಂತ ತಿರುಗತಾ ದೇಶಾನ್ನೆಲ್ಲಾ ಹರಾಂ ಮಾಡುತಾ ಅವ್ರೆ ! "

"ಅಂಯ್ ! ಬುಡಿ, ಇನ್ಸ್‌ಪೆಕ್ಟರೆ, ಸನ್ಯಾಸಿಗಳು ಪಾಪ, ದೇಶಾನೇನು ಹರಾಂ ಮಾಡಾರು ! "

"ಇಲ್ಲ, ನಾಯಕ್‌ಸಾಬ್, ಅವ್ರೋನು ಮಾಡುತಾರೆ ಗೊತ್ತು ? ಈ ನೌಜವಾನ್‌ಗಳಿರುತಾರಲ್ಲ, ಅವರಿಗೆ ಹೇಳೋದು, ನೋಡಿ, ಇಂಗ್ಲೀಷಿನೋರು ನಮ್ಮನ್ನೆಲ್ಲಾ ತುಳಿದಿದ್ದಾರೆ. ನಮ್ಮ ದೇಶದಲ್ಲಿ ನಮ್ಮನ್ನೇ ಗುಲಾಮರನ್ನ ಮಾಡಿದ್ದಾರೆ, ಮೊದಲು ಇವರ್ನ ಓಡಿಸ ಬೇಕು ಅನ್ನೋದು. ಬೋಲೋ ವಂದೇಮಾತರಂ ಅನ್ನೋದು. ಅವರ ತಲೆ ಕೆಡಿಸೋದು."

"ವಂದೇಮಾತರಂ ಅಂದರೆ ? "

"ಅದೇ ಇಂಗ್ಲೀಷರ ವೈರಿಗಳು ಮಾಡಿ ಕೊಂಡಿರೊ ಮಂತ್ರ ! ತಾವು ಕಾಣಿರಿ. ನಾನು ಮೊನ್ನೆ ಹೋಗಿದ್ದುದು ಒಬ್ಬ ಸನ್ಯಾಸಿ ಹಿಂದೆ. ಅವನು ವಂದೇಮಾತರಂ, ಜಲ, ಫಲ, ಅಂತಾ ಏನೇನೋ ಜಪಮಾಡಿ ವಂದೇಮಾತರಂ ಅಂದರೆ, ಅವನ ಮಾತು ಕೇಳಿದರೆ, ಅವನು ಹೇಳೋದೆಲ್ಲ ನಿಜ, ಈ ಯೂನಿಫಾರಂ ಕಿತ್ತು ಎಸೆದು,

ಅವನ ಜೊತೇಲಿ ಹೊರಟು ಬಿಡೋಣ ಅನ್ನಿಸೋದು. ಆ ವಂದೇ ಮಾತರಂ ಅದೆಯಲ್ಲ ಬಂಗಾಳಿ ಹಾಡು. ಆನಂದಮಠ ಅಂತ ಒಂದು ಕಥೆ. ಸನ್ಯಾಸಿ ದಂಗೆ ಆದಾಗ ಹುಟ್ಟಿದ್ದು. ಅದು ಈಗ ಮತ್ತೆ ಚಾಲ್ತೀಗೆ ಬಂದಿದೆ. ಅಂತೂ ದಿನದಿನ ಬೆಳೀತದೆ. ಇವರೂ ದಬಾಯಿಸ್ತಾ ಇದ್ದಾರೆ. ನೋಡಬೇಕು ಏನಾಯ್ತದೋ ?"

"ನೀವು ಸಾವಿರ ಹೇಳಿ ನಮ್ಮೋರಿಗೆ ಬುದ್ಧಿಯಿಲ್ಲ. ಕಳ್ಳಕಾಕರನ್ನೆಲ್ಲ ತಪ್ಪಿಸಿ, ಧರ್ಮದಿಂದ ರಾಜ್ಯವಾಳುತ್ತಿದ್ದಾರೆ. ಅವರ ಮೇಲೆ ಕೈಮಾಡೋದು ? ಮಾಡಿದರೆ, ಜೊತ್ತೀಮಕ್ಕಳನ್ನೆಲ್ಲಾ ಗುಂಡು ಹಾಕಿ ಸುಟ್ಟು ಬಿಟ್ಟರೆ ? ನಾವು ಹೊಡದಾಡಬೇಕು ಅಂದರೆ, ನಮ್ಮಲ್ಲೀನು ಮದ್ದು ಇದ್ದೀತಾ ? ಬಂದೂಕ ಅದೆಯೊ ? ಹಿಂದಿನ ಕಾಲದಂಗೆ ಗಂಡಾಳು ಅವೆಯಾ ? ಏನೋ, ಸಾವಿರ ಹೇಳಿ, ಅವರ ಧರ್ಮ ಆದೆ. ನಮ್ಮೋರು ಆ ಇಂಗ್ಲೀಷ್‌ನೋರ ರೋಮ ಕೂಡ ಅಲ್ಲಾಡಿಸಲಾರರು."

"ಈಗ ಅದೇ ಈ ಕೆಂಪು ಬಟ್ಟೆ ಜನಾಹೇಳೋದು ಯಾರಾದರೂ ಇಂಗ್ಲೀಷರ್ನ ಭಲೇ ಅಂದರೆ, ನೋಡಿ, ನೋಡಿ, ಇವರೆಲ್ಲ ಗುಲಾಮರು ಅಂತಾರೆ. ಈಗ ಬೊಂಬಾಯಿ, ಪೂನಾ, ಲಾಹೋರು, ಕಾರ್ನ್‌ಪುರ್, ಅಲ್ಲೆಲ್ಲಾ ಬೀದೀಲೆಲ್ಲಾ ಇವರ ಗಲಾಟೆಯೇ ಗಲಾಟೆ. ತಮ್ಮಂಥಾ ದೊಡ್ಡೋರು ಈಚೆ ಬರೋಹಂಗಿಲ್ಲ."

"ಕೊನೆಗೆ ಏನಾಯ್ತದೋ ? ಹಿಂಗಾದರೆ ?"

"ನೋಡಬೇಕು. ಸರಕಾರಕ್ಕೆ ಕೋಪ ಬಂದದೆ. ಅವರು ಢರ್ ಢರ್ ಅಂತ ಗುಂಡು ಹಾಕಿ ಕೊಲ್ತಾರೆ. ಈ ಜನ, ನಮ್ಮ ಜನ ತುಫಾನ್ ಬಂದಾಗ ಅಲೆಬರೋ ಹಂಗೆ ಮೇಲೆಮೇಲೆ ಬರ್ತಾನೆ ಅವೆ. ಅಬ್ಬಾ ! ಆ ಕಲ್ಕತ್ತಾದಲ್ಲಿ ನೋಡಬೇಕು. ಅದನ್ನೆಲ್ಲಾ !"

ನಾಯಕನಿಗೆ ಅವೊಂದೂ ಬೇಕಾಗಿಲ್ಲ. ಇನ್ಸ್‌ಪೆಕ್ಟರ್‌ನಿಗೆ ಯಾರಿಗೂ ತಿಳಿಯದ ಅಂಶ ತನಗೆ ತಿಳಿದಿದೆಯೆಂದು ಹೇಳಿಕೊಳ್ಳಲು ಆಶೆ. ಆಲ್ ಇಂಡಿಯಾದಲ್ಲಿ ಆರಂಭವಾಗಿರುವ ನ್ಯಾಷನಲ್ ಮೂವ್‌ಮೆಂಟ್ ವಿಚಾರ ಹೇಳಬೇಕು ಎಂದು ಹಂಬಲ. ಏನ್ಷಿಯಂಟ್

ಪ್ರ್ಯಾಕ್ಟಿಷನರ್‌ನಹಾಗೆ ಕೇಳುವವರಿಗೆ ಬೇಕಾಗಲೀ, ಬೇಡವಾಗಲೀ ತಾನು ಹೇಳಬೇಕು ಎಂದಿರುವುದನ್ನು ಹೇಳಿ ತೀರುವ ಚಟ ಆತನಿಗೆ. ನಾಯಕನಿಗೆ ಮರ್ಯಾದೆ. ಅವನಿಂದ ತನಗೆ ಒಂದು ಕೆಲಸ ಆಗಬೇಕಾಗಿರುವ ಲೋಭ. "ನನಗೆ ಬೇಕಾದ್ದನ್ನು ಹೇಳಿ ಹೋಗಯ್ಯ. ನಿನ್ನ ಕಣಿ ಯಾರಿಗೆ ಬೇಕು ?" ಎನ್ನಲಾರ. ಏನೋ ದಾಕ್ಷಿಣ್ಯ.

ಇನ್ಸ್ಪೆಕ್ಟರನು "ಎಲ್ಲಿ ಹೋದರೂ ಲಾಲ್ ಬಾಲ್ ಪಾಲ್." ಎಂದು ಮುಂದೆ ಹೊರಟನು.

"ಹಾಗಂದರೆ ?"

"ಲಾಲ್ ಎಂದರೆ ಲಾಲಾ ಲಜಪತ್‌ರಾಯ್. ಬಾಲ್ ಎಂದರೆ ಬಾಲಗಂಗಾಧರ್ ತಿಲಕ್, ಪಾಲ್ ಎಂದರೆ ಬಿಪಿನ್ ಚಂದ್ರಪಾಲ್. ಒಬ್ಬರು ಲಾಹೋರಿನವರು. ಇನ್ನೊಬ್ಬರು ಪೂನಾದವರು, ಮತ್ತೊಬ್ಬರು ಕಲ್ಕತ್ತಾದವರು. ಈಗೇನಂತೀರಿ ? ಸ್ಕೂಲು ಹುಡುಗರೆಲ್ಲಾ ಮೂರು ಕಾಸು ಕೊಡೋದು, ಒಂದು ಮೂರು ಬೆರಳು ಅಗಲದ ಕಾಗದದಲ್ಲಿ ಅವರ ಮೂರು ಜನರ ಫೋಟೋ ಪ್ರಿಂಟ್ ಮಾಡಿರುತಾರೆ. ಅದನ್ನು ಎದೆಮೇಲೆ ಪಿನ್ ಹಾಕಿಕೊಂಡು ಲಾಲ್, ಬಾಲ್, ಪಾಲ್‌ಕೀ ಜೈ ಅನ್ನೋದು, ತಿರುಗೋದು."

ಹೀಗೇ ಸುಮಾರು ಒಂದು ಗಂಟೆಯ ಹೊತ್ತು ತನ್ನ ಪ್ರತಾಪವೆಲ್ಲ ಕೊಚ್ಚಿಕೊಂಡ ಮೇಲೆ, ಇನ್ಸ್ಪೆಕ್ಟರನು ನಾಯಕನಿಗೆ ಬೇಕಾದ ವಿಷಯವನ್ನೆತ್ತಿದನು. ಅದುವರೆಗೆ ಆಕಳಿಕೆ ಬಂದರೂ ಕೈ ಮುಚ್ಚಿಕೊಂಡು ಆಕಳಿಸುತ್ತ ಕುಳಿತಿದ್ದ ನಾಯಕನು, ಸೋಫಾದಲ್ಲಿ ಸರಿಯಾಗಿ ಕುಳಿತುಕೊಂಡನು. ಇನ್ಸ್ಪೆಕ್ಟರನು ಕೊಟ್ಟ ನಶ್ಯವನ್ನು ಏರಿಸಿ ಮೈಯೆಲ್ಲಾ ಕಿವಿಯಾಗಿ ಕುಳಿತನು. ಇನ್ಸ್ಪೆಕ್ಟರನು ಹೇಳಿದನು :

"ನೋಡಿ. ನೀವು ಹೇಳಿ ಸುಮಾರು ದಿನ ಆಯಿತು. ನಾನು ಏನು ಮಾಡಿದೆ ? ಮಲ್ಲಣ್ಣನ ಹೆಂಡತಿ ಮೊಗ ತಂದದಿವಸದ ಸುಮಾರಿನಲ್ಲಿ ಈ ಊರಿಗೆ ಬಂದ ದೊಂಬರ ಗುಂಪುಗಳನ್ನೆಲ್ಲಾ ಪೋಲೀಸ್ ಡೈರಿನಲ್ಲಿ ನೋಡಿ ಗುರ್ತು ಹಚ್ಚಿಕೊಂಡೆ. ಆಮೇಲೆ ಅವರ್‍ನ ತಲಾಷ್ ಮಾಡೋಕೆ ಷುರು. ಆ ಗುಂಪು ಎಲ್ಲೆಲ್ಲೋ ಅಲೆ

ಕೊಂಡು ಹೋಗಿ, ಎಲ್ಲೋ ಕಳ್ಳತನ ಮಾಡಿ, ಜೈಲ್‌ಸೇರಿಬುಡ್ತು. ಅದನ್ನೆಲ್ಲಾ ನೋಡಿಕೊಂಡು, ಅವರು ಯಾವ ಜೈಲಿನಲ್ಲಿದಾರೆ ಅದನ್ನು ತಿಳಿಕೊಂಡು ಬರೋಕೇ ನಾನು ಮೊದಲು ರಜಾ ತಕ್ಕೊಂಡದ್ದು. ತಾವು ಹೇಳಿದ್ದರಲ್ಲಾ, ಗುಟ್ಟಾಗಿರಬೇಕು ಅಂತ ಅದರಿಂದ ನಾನೇ ಹೋದೆ. ಕೊನೆಗೆ ಅವರು ಹೇಳಿದರು. ಕಾವೇರೀ ನದಿಗೆ ಕೊಂಚದೂರದಲ್ಲಿ ಕೊಳ್ಳೇಗಾಲದ ಆಚೆ ಒಂದು ಮಠ. ಅಲ್ಲಿ ಒಬ್ಬ ಅಯ್ಯ. ಅವನು ಇವರನ್ನು ಕರೆದು "ಈ ಮೊಗಾ ತಕೊಂಡು ಹೋಗಿ ಯಾರಿಗಾದರೂ ಉತ್ತಮರಿಗೆ ಕೊಟ್ಬುಬಿಡರೋ !" ಅಂತ ಇವರಿಗೆ ಒಂದುನೂರು ರೂಪಾಯಿ, ಆ ಮೊಗಾನೂ ಕೊಟ್ಟ. ಅದು ಆಗ ಐದಾರು ದಿನದ ಬೊಮ್ಮಟೆ. ಆ ಮೊಗದ ಅಮ್ಮ ಕೂಡ, ಒಂದು ಒಂದು ಸೀರೆ ರವಿಕೆ ಕೊಟ್ಟು, ಚೆನ್ನಾಗಿ ಕಾಪಾಡೋರಿಗೆ ಕೊಡಿ ಅಂತ ಕಣ್ಣಲ್ಲಿ ನೀರಿಟ್ಟುಕೊಂಡರು. ದೊಂಬರು ಒಂದು ತಿಂಗಳವರೆಗೂ ಆ ಮೊಗ ಸಾಕಿ ಕೊನೆಗೆ ಮಲ್ಲಣ್ಣನ ಹೆಂಡತಿಗೆ ಕೊಟ್ಟರು. ಮತ್ತೆ ಹೋಗಿ ಮಠದ ಅಯ್ಯನಿಗೆ ಹೇಳಿ ಬಂದರು. ಆ ಮಠ ಕೂಡ ಹೋಗಿ ನೋಡಿಕೊಂಡ್ಬು ಬಂದೆ. ಆ ಅಯ್ಯ ನಾನು ಹೋಗಿದ್ದಾಗ ಕಾಶೀ ಯಾತ್ರೆ ಹೋಗಿತ್ತು."

ನಾಯಕನಿಗೆ ಒಂದು ಸಂತೋಷವಾಯಿತು. ಮಲ್ಲಿ ತಾನೆಂದು ಕೊಂಡಿದ್ದಂತೆ ಉತ್ತಮರ ಕುಲದಲ್ಲಿ ಹುಟ್ಟಿದವಳು. ತಿರುಪದವರ ಮನೆಯಲ್ಲಿ ಹುಟ್ಟಿದವಳಲ್ಲ.

ಇನ್ಸ್‌ಪೆಕ್ಟರನು ಹೇಳಿದನು :

"ಆ ಅಯ್ಯನ ಹೆಸರು ಶಿವರಾಮಯ್ಯ. ಆ ಮಠವಿರುವುದು ದೇವರ ಹಳ್ಳಿಯಲ್ಲಿ. ಆ ಅಯ್ಯನು ಬಹು ಚೆನ್ನಾಗಿ ಭಾರತ ರಾಮಾಯಣ ಓದುತ್ತಾನೆ. ಹತ್ತು ಜನಕ್ಕೆ ಬೇಕಾದವನು. ಒಂದು ಆಶ್ರಮ ಮಾಡಿಕೊಂಡು ಬಂದವರಿಗೆ ರೋಗರುಜಿನಕ್ಕೆ ಏನಾದರೂ ಮದ್ದು, ಮಂತ್ರ ಮಾಡುತ್ತ ದಿನ ತಳ್ಳುವನು. ಅವನ ಆಶ್ರಮದಲ್ಲಿ ಗಂಡುಸರೂ ಹೆಂಗಸರೂ ಅನಾಥರೂ ಬಂದು ಅಷ್ಟುದಿನ ಇದ್ದು ಹೋಗುತಾರೆ."

"ಹಾಗಾದರೆ ನೀವು ಅಲ್ಲಿಗೆ ಹೋಗಿ ಎಷ್ಟು ದಿನವಾಯಿತು. ?"

"ನಾನು ಮೊನ್ನೆ ಮೊನ್ನೆ ಹೋಗಿದ್ದೆ. ಈ ತಲಾಷೆಯೆಲ್ಲ ಮುಗಿಸಿಕೊಂಡು ಬಂದು ಛಾರ್ಜು ತಕೊಂಡೆ. ಛಾರ್ಜು ತಕೊಂಡು ಹತ್ತು ದಿನ ಆಯಿತು."

"ಹಂಗಾದರೆ ನಮಗೋಸ್ಕರ ಬೋ ಕಷ್ಟ ಬಿದ್ದಿರಿ !"

"ಅದೇನು ಕಷ್ಟ ಅಂದರೆ ಕಷ್ಟ ! ಆದರೆ, ತಾವು ದೊಡ್ಡೋರು ತಮ್ಮ ಮಾತಿಗೆ ಮಹಾರಾಜಾ ಸಾಹೇಬ್ ಕೂಡ ಬೆಲೆ ಕೊಡುತಾರೆ. ಅಂತಾದ್ದರಲ್ಲಿ, ನಾವು ಬೆಲೆ ಕೊಡದಿದ್ದರೆ ?"

"ಉಂಟಾ ಸ್ವಾಮಿ, ತಾವು ಎಷ್ಟೇ ಆಗಲಿ ಸರಕಾರದ ಆಫೀಸರು. ಪೋಲೀಸ್ ಇನ್ಸ್‌ಪೆಕ್ಟರ್ ಅಂದರೆ, ಅಮಲ್ದಾರ್ನ ಬಿಟ್ಟರೆ ನೀವೇ ತಾಲ್ಲೋಕು ದಣಿ. ಆಯಿತು. ಈಗ ನೀವು ನಮಗಾಗಿ ಪಟ್ಟ ಕಷ್ಟಕ್ಕೆ ಏನಾದರೂ ಅಷ್ಟೋ ಇಷ್ಟೋ ಕೊಟ್ಟರೆ, ನಾಯಕನ ಜಂಬಾ ನೋಡು, ನಮಗೆ ಲಂಚ ಕೊಟ್ಟ ಅಂದುಬುಡ್ತೀರೊ ಏನೋ ? ನಿಮ್ಮನ್ನ ಕಂಡರೇನೇ ನಮಗೆ ದಿಗಿಲು."

"ನೋಡಿ, ನಾಯಕ್‌ಸಾಬ್, ನಾವಾಗಿ ಕೊಡಿ, ಇಲ್ಲದಿದ್ದರೆ ನಿಮ್ಮ ಕೆಲಸಾನೇ ಮಾಡೋಕಿಲ್ಲ, ಅಂತ ಷರತ್ ಹಾಕಿ ತಕೊಂಡರೆ ಅದು ಲಂಚ. ನಮ್ಮ ಖುಷಿಯಿಂದ ನಾವು ಮಾಡಿದ ಕೆಲಸಕ್ಕೆ ನಿಮ್ಮ ಖುಷಿಯಿಂದ ನೀವೇ ನಿಮಗೆ ತೋರಿದ್ದು ಕೊಟ್ಟರೆ ಅದು ಮರ್‍ಯಾದೆ. ಅದು ಲಂಚ ಅಲ್ಲ."

"ಹಂಗಾದರೆ ನಾವು ಬದುಕಿದೋ ! ದಯವಿಟ್ಟು ಒಂದು ಗಳಿಗೆ ಕುಂತಿರಿ. ಬಂದೆ."

ನಾಯಕನು ಒಳಕ್ಕೆ ಹೋಗುತ್ತಿರುವಾಗ ದೀಪದ ಬೆಳಕಿನಲ್ಲಿ ಆತನ ಕೈಯಲ್ಲಿದ್ದ ಉಂಗುರಗಳು ಹೊಳೆಯಿತು. ಇನ್ಸ್‌ಪೆಕ್ಟರನಿಗೆ "ಇಂಥಾದ್ದು ಒಂದು ವಜ್ರದ ಉಂಗುರ ಆದರೂ ಕೊಟ್ಟರೆ" ಎನ್ನಿಸಿತು. ಜೊತೆಯಲ್ಲಿಯೇ, "ಆತನು ಕೊಟ್ಟರೂ ನಾನೇನು ಹಾಕ್ಕೊಂಡು ತಿರುಗೋಕಾದೀತಾ ? ಬರಿಯ ಆಸೆ" ಎನ್ನಿಸಿ, "ಛೀ, ನಾನೇಕೆ ಏನೇನೋ ಆಸೆ ಪಡಲಿ ? ನಾಯಕನ ಕೈಯ್ಯಿಂದ

ಕೊಡಿಸುವವನು ದೇವರು." ಎಂದು ಸುಮ್ಮನಾದನು.

ನಾಯಕನು ಎರಡು ತಟ್ಟೆಗಳನ್ನು ಆಳಿನ ಕೈಯಲ್ಲಿ ತೆಗೆಸಿಕೊಂಡು ಬಂದನು. ಒಂದರ ತುಂಬಾ ಸುಮಾರು ನೂರು ರಸಬಾಳೆಯಹಣ್ಣು. ಗಿಡದ ಮೇಲೆಯೇ ಬಲಿತು ಹಣ್ಣಾಗಿ ಪುಟವಿಕ್ಕಿದ ಚಿನ್ನದಿಂದ ಮಾಡಿದಂತಿದೆ. ಇನ್ನೊಂದು ತಟ್ಟೆಯಲ್ಲಿ ಸುತ್ತು ವೀಳ್ಯ–ಅದರ ನಡುವೆ ಕೆಲವು ಪಸಿರು ನೋಟುಗಳು.

ನಾಯಕನು ತಾನೇ ಆತನಿಗೆ ಫಲತಾಂಬೂಲ ಕೊಟ್ಟು "ಇವೊತ್ತು ರಾತ್ರಿ ಇಲ್ಲಿಯೇ ಇರಬೇಕು. ನಾಳೆಯೂ ಇದ್ದರೆ ಇನ್ನೂ ಸಂತೋಷ." ಎಂದು ವಿಶ್ವಾಸದಿಂದ ಹೇಳಿದನು.

ರಜಾಕ್ ಸಾಹೇಬನು ಉಪಚಾರದ ಮಾತು ಹೇಳಿ ತನಗಾಗಿ ಗೊತ್ತಾಗಿದ್ದ ಎಡೆಗೆ ಹೋದನು. ದಾರಿಯಲ್ಲಿಯೇ ಜೇಬಿನಲ್ಲಿಯೇ ಎಣಿಸಿದರೆ, ನೋಟು ಹತ್ತು ಇತ್ತು. ಅವನಿಗೆ ಮತ್ತೆ ಕೈಗೆ ತೆಗೆದು ಕೊಂಡು ಎಣಿಸಬೇಕು ಎಂದು ಬಲವಾದ ಆಸೆ. ಅದರಿಂದ ಬೇಗ ಬೇಗ ಹೊರಟು ಹೋದನು.

## ೧೬

ಕೆಂಪಿಯೂ ಬಂದು ರಾಣಿಯವರನ್ನು ಕಾಣಿಸಿಕೊಂಡಳು.

ರಾಣಿಯೂ ಅವಳನ್ನು ವಿಶ್ವಾಸದಿಂದ ಕರೆದು ಕೂರಿಸಿಕೊಂಡು "ಏನು ಕೆಂಪನ್ಮಾ, ಬಂದೆ?" ಎಂದು ವಿಚಾರಿಸಿದಳು.

"ಬುದ್ಧಿ, ತಮ್ಮ ಪಾದ, ತಿನ್ನೋದು ತಮ್ಮ ಅನ್ನ, ಇರೋದು ತಮ್ಮ ಮನೆ, ಉಡೋದು ತಮ್ಮ ಸೀರೆ ಹಿಂಗಿರೋವಾಗ ತಾವು ಕೆಂಪೀನ ಕೆಂಪಮ್ಮ ಅಂದರೆ ಬದುಕಬೋದಾ? ಏನಾಗಲಿ, ತಾವು ದಣಿಗಳು, ನಾವು ಪಾದದ ಗುಲಾಮರು. ನನ್ನ ಕೆಂಪೀ ಅಂತಲೇ ಕರೀಬೇಕು ತಮ್ಮ ಪಾದ."

"ನೋಡು, ಮೊಳಕೆ ಬಂದು ಬೆರಳ ಗಾತ್ರ ಇದ್ದರೆ ಸೊಸಿ ಅಂತೀವಿ; ಅದು ರಟ್ಟೆ ಗಾತ್ರ ಆದಾಗ ಗಿಡ ಅಂತೀವಿ. ತೊಡೆ ಗಾತ್ರ ಆದಾಗ ಮರ ಅಂತೀವಿ. ಹಂಗೆ ಮಲ್ಲಿ ಬರೋಕೆ ಮುಂಚೆ ಕೆಂಪಿ, ಈಗ ಕೆಂಪಮ್ಮ, ಮುಂದೆ ನಾವಂದುಕೊಂಡಂಗೇ ಬುದ್ಧಿಯೋರು ಮೆಚ್ಚಿಕೊಂಡು ಮಾಡಿಕೊಂಡರೆ, ನಮ್ಮಂಗೆ ನೀನೂ ಕೆಂಪಮ್ಮಣ್ಣಿ. ಅದಕ್ಕೇನಾ? ಇರಲಿ. ಅದೇನು ನೀನು ಬಂದದ್ದು ಹೇಳು."

"ಇನ್ನೇನು ಬಡವರು ಬುದ್ಧೀ ಅಂತ ಬರೋದು ಇನ್ನ್ಯಾಕೆ? ಏನಾದರೂ ಕೇಳೋಕೆ! ಏನಾದರೂ ಕೇಳೋಕೆ? ತಮ್ಮ ಪಾದ, ಕೇಳಿಕೋ ಅಂದರೆ ಕೇಳಿಕೋತೀನಿ."

"ಹೇಳು – ನಾವೂ ಕೇಳೋವ."

"ಬುದ್ಧಿ, ಇನ್ನು ಎಂಟು ದಿನಕ್ಕೆ ಮಲ್ಲಿಗೆ ಹುಟ್ಟಿದಹಬ್ಬ. ಅವೊತ್ತು ಅಲ್ಲಿ ದೊರೆ ಮಗ ಬಂದಿದ್ದಾಗ, ತಾವೇ ಅವಳಿಗೆ ಒಡವೆ ವಸ್ತ್ರಾ ಹಾಕಿ ಸಿಂಗಾರ ಮಾಡಿದ್ದಿರಿ. ಇನ್ನೊಂದು ಸಲ ಹಂಗೇ ಸಿಂಗಾರ ಮಾಡಿ ನೋಡಬೇಕು ಅನಸ್ತದೆ. ಈ ಮುಕ್ಕ ಯಾವಾಗಲೋ ಏನೋ? ಕಣ್ಣುಮುಚ್ಚೋಕೆ ಮುಂಚೆ ನೋಡಬೇಕು ಬುದ್ಧಿ."

"ಇದೇನು ಮಹಾ! ಖಾಂವದರಿಗೆ ಹೇಳಿದರೆ ಆಗಲಿ, ಅಂತಾರೆ, ಆದರೆ, ಈಗ ಇವಳ ಅಳತೆಯೋವು ನಮ್ಮ ಅರಮನೇಲಿ ಇದ್ದಾವೋ ಇಲ್ಲವೋ? ಇಲ್ಲದಿದ್ದರೆ ಮಾಡಿಸಿಯೇ ಬುಡೋದು. ಆಯ್ತು, ಎಷ್ಟು ತುಂಬ್ತದೆ ಅವಳಿಗೆ?

"ಇದು ಒಂಭತ್ತು ಬುದ್ಧಿ."

"ನೋಡಿದೆಯಾ, ವಯಸ್ಸು ಹೆಂಗೆ ಬಂತು? ಆದರೂ ನೀನು ನಿಜವಾಗಿ ಮೊಗಾನ ಚೆನ್ನಾಗಿ ಬೆಳಿಸಿದಿ. ನೋಡಿದರೆ, ಹನ್ನೆರಡು ವರ್ಷದವಳಂಗೇ ಕಾಣ್ತಾಳೆ. ಹಾರುವರ ಮನೇಲಾಗಿದ್ದರೆ ಅವಳಿಗೆ ಆಗಲೇ ಗಂಡು ಹುಡುಕುತಿದ್ದರು."

"ಅವರು ಉತ್ತಮರು. ನಾವು ಅವರಂಗೆ ಅದೇವಾ ಬುದ್ಧಿ. ಆದರೆ, ದೇವರು ನಮಗೆ ಆ ಕಷ್ಟ ತಪ್ಪಿಸವ್ನಲ್ಲಾ! ತಾವಿರೋವಾಗ ನಮಗೇಕೆ ಆ ಸಂಕಟ?"

"ನಮಗೆ ಬುಟ್ಟರೆ, ನಮಗೆ ಗೊತ್ತಿರೋದು ಒಂದೇ ದಾರಿ. ನಮಗೆ ಪಸಂದಾದ್ದೆಲ್ಲ ನಮ್ಮ ಖಾವಂದ್‌ರಿಗೆ ಮೀಸಲು. ನೀನೊ ಪ್ಪೀಯಾ ?"

"ಬುದ್ಧಿಯೋರ ಮಾತಿಗೆ ಎದುರು ಹೇಳಿ ನಾನ್ಯಾವ ನರಕಕ್ಕೆ ಹೋಗಲಿ ?"

"ನಿಮ್ಮ ಮಲ್ಲಣ್ಣ ಏನಂತಾನೋ ?"

"ಅವರು ಬುಡಿ ಬುದ್ಧಿ, ದೇವರಂತಾವ್ರು. ನಿಂದು ನೊಗ, ನೀನೇನಾದರೂ ಮಾಡಿಕೋ ಅಂದರು."

"ಏನಾದರೂ ಮಾಡಿಕೋ ಅನ್ನೋದು ತಪ್ಪಿಸಿಕೊಳ್ಳೋ ಮಾತು. ಬಾಯಿ ಬುಟ್ಟು ಆಗಲಿ ಅಂದರೆ ಮುಂದಿನ ಮಾತು."

"ಅದೂ ಆಗಬೊಯ್ದು."

"ಹಂಗಾದರೆ ಹೋಗಿ ಕೇಳಿಕೊಂಡು ಬಾ."

* * *

ಇಂದು ಮಲ್ಲೀಗೆ ಹುಟ್ಟಿದ ಹಬ್ಬ. ಮಲ್ಲಣ್ಣನ ಮನೆಯ ಮುಂದೆ ಒಳ್ಳೇ ಚಪ್ಪರ ಹಾಕಿದೆ. ಅರಮನೆಯವರೇ ಬಂದು ಅದನ್ನು ಸಿಂಗರಿಸಿ ಕಂದೀಲು, ಗುಳೋಪು, ಕಟ್ಟಿದ್ದಾರೆ. ಮೇಲು ತೋರಣ, ಚಿತ್ರದ ಛತ್ತು, ಎಲ್ಲಾ ಮದುವೆ ಮಂಟಪಕ್ಕೆ ಇದ್ದ ಹಾಗೆ ಇವೆ. ಒಂದು ಕಡೆ ಎತ್ತರವಾದ ಗಾದಿಮಾಡಿ ಅಲ್ಲಿ ರಾಣಿಯವರು ಕುಳಿತು ಕೊಳ್ಳುವುದಕ್ಕೆ ಸೋಫಾ ತಂದು ಹಾಕಿದ್ದಾರೆ. ಎದುರಿಗೆ ಖಾವಂದರು ಬಂದು ಮುಹೂರ್ತ ಮಾಡಲು ಒಂದು ಸಣ್ಣ ಮಂಟಪ ಕಟ್ಟಿ ಅದನ್ನು ಪುಷ್ಪಗಳಿಂದ ಅಲಂಕರಿಸಿದ್ದಾರೆ. ಮಗ್ಗುಲಲ್ಲಿ ಗಂಧದೆಣ್ಣೆ ಬೆರೆಸಿರುವ ತುಪ್ಪ ಹಾಕಿ ಐದು ಸೊಡರಿನ ಪಂಚಾರ್ತಿಯಂತಹ ದೀಪವನ್ನು ಹಿಡಿದಿರುವ ದೀಪದ ಮಲ್ಲಿಯನ್ನು ಇಟ್ಟಿದ್ದಾರೆ.

ಮಂಟಪದಲ್ಲಿ ಊರಿನ ಮುತ್ತೈದೆಯರೆಲ್ಲಾ ಬಂದು ಕುಳಿತಿದ್ದಾರೆ. ಮಲ್ಲೀಗೆ ಮೊಗ್ಗಿನ ಜಡೆ ಹೆಣೆದು ಬಕಾವಲಿಯ ಅಲಂಕಾರ ಮಾಡಿ ಕುಳ್ಳಿರಿಸಿದ್ದಾರೆ. ಮಂಟಪದ ಒಂದು ಕೊನೆಯಲ್ಲಿ ಓಲಗದವರು ಕುಳಿತು ನಾಗಸ್ವರ ಬಾರಿಸುತ್ತಿದ್ದಾರೆ. ಗಂಡಸರೆಲ್ಲರೂ ಮಂಟಪದ

ಆಚೆ ನಿಂತು, ಕುಳಿತು ನೋಡುತ್ತಿದ್ದಾರೆ.

ಮಲ್ಲಣ್ಣನು, ನಾಯಕನೇ ಅಂದು ರಾಜಕುಮಾರನ ದರ್ಶನಕ್ಕೆ ಹೋದಾಗ ಹೊಲಿಸಿಕೊಟ್ಟಿದ್ದ ರೇಶಿಮೆಯ ನಿಲುವಂಗಿ, ಷರಾಯಿ, ರುಮಾಲುಗಳನ್ನೂ, ವಲ್ಲಿಯನ್ನೂ ಧರಿಸಿ ಮದುವೆಗಂಡಿನ ಹಾಗೆ ಓಡಾಡುತ್ತಿದ್ದಾನೆ. ಬಂದವರನ್ನೆಲ್ಲಾ ಕೈಮುಗಿದು "ಬುದ್ಧಿಯವರು ದಯಮಾಡಬೇಕು" ಎಂದು ಚಾಪೆಯನ್ನು ತೋರಿಸುತ್ತಿದ್ದಾನೆ. ಆದರೂ ಅವರೆಲ್ಲ "ಬುಡೋ ಮಲ್ಲಣ್ಣ! ನಾವೇನು ಕೂತುಕೊಂಡು ಹಾಡುಹಸೆ ಕೇಳಬೇಕಾ? ಏನೋ ನಿನ್ನ ಮೊಗೀನಲಂಕಾರ ನೋಡು ಕೊಂಡು ಹೋಗೋವಾ ಅಂತ ಬಂದೋ" ಎನ್ನುತ್ತಾರೆ. "ಚೆನ್ನಾ ಯಿತು, ಬುದ್ಧಿಗೋಳು ತಾವೆಲ್ಲ ಚೆನ್ನಾಗಿರು ಅಂತ ಮೊಗಾನ ಹರಸ ದಿದ್ದರೆ ಆದೀತಾ? ಏನೋ ನಾವು ಬಡಬೊಡ್ಡೀ ಮಕ್ಕಳು, ದಿನಾ ತಮ್ಮನ್ನೆಲ್ಲಾ ಕರೆಯೋಕೆ ಆದೀತಾ?" ಎಂದು ಉಪಚಾರ ಹೇಳಿ, ಎಲ್ಲರನ್ನೂ ಅಲ್ಲಲ್ಲಿ ಕೂರಿಸುತ್ತಿದ್ದಾನೆ. ಎಲ್ಲರೂ ನಾಯಕ ನನ್ನು ನಿರೀಕ್ಷಿಸುತ್ತಿದ್ದಾರೆ

ಕೊಂಬಿನ ಕೂಗು ಕೇಳಿಸಿತು. ಎಲ್ಲರೂ ಸಡಗರದಿಂದ ಸಿದ್ಧ ರಾಗಿ ಅರಮನೆಯ ಹಾದಿಯನ್ನು ನೋಡಿದರು. ಬೆಸ್ತರು ಮೇನಾ ಹೊತ್ತು ತಂದರು. ಬಿಳಿಯ ಮೇಲು ಮುಸುಕನ್ನು ಧರಿಸಿ ಜೊತೆಯ ಲ್ಲಿಯೇ ಬಂದಿದ್ದ ದಾಸಿಯು ಮೇನಾದ ಬಾಗಿಲನ್ನು ತೆರೆದಳು. ಒಳಗಿಂದ ರಾಣಿ ಸುಂದರಮ್ಮಣ್ಣಿಯು ಬೆಳಕಿನ ಬೊಂಬೆಯಂತೆ ತನ್ನ ರತ್ನಾಭರಣಗಳ ಕಾಂತಿಯನ್ನು ಚೆಲ್ಲುತ್ತಾ ಇಳಿದಳು. ಕೆಂಪಿಯು ಹೋಗಿ, ನೆಲದವರೆಗೂ ಬೊಗ್ಗಿ, ಕಾಲುಮುಟ್ಟಿ ಕಣ್ಣಿಗೆ ಒತ್ತಿಕೊಂಡು ಕರೆದು ಕೊಂಡುಬಂದು ಆಕೆಗಾಗಿ ಸಿದ್ಧಮಾಡಿದ್ದ ಉನ್ನತಾಸನದಲ್ಲಿ ಕುಳ್ಳಿರಿಸಿದಳು. ಮುತ್ತೈದೆಯರ ತಂಡವೆಲ್ಲ ಎದ್ದು ಕೈಮುಗಿದು ಸಲ್ಲಿಸಿದ ಗೌರವವನ್ನು ಸ್ವೀಕರಿಸಿದಳು. ತಂಡದಲ್ಲಿ ಕುಳಿತಿದ್ದ ಆ ಹೆಂಗಸರಲ್ಲಿ ಒಬ್ಬೊಬ್ಬರನ್ನಾಗಿ ಕರೆದು ಯೋಗಕ್ಷೇಮಗಳನ್ನು ವಿಚಾರಿಸಿ ದಳು. ಪುರೋಹಿತರು, ಜೋಯಿಸರು, ಶಾನುಭೋಗರ ಹೆಂಡರಿಗೆ ಅಗ್ರ ಗೌರವವು ದೊರಕಿತ್ತು. ಮುತ್ತೈದೆಯರೆಲ್ಲ ಆಕೆಯನ್ನು

ನೋಡಿ, "ಇಂಥ ಮಹಾಲಕ್ಷ್ಮಿ ಮನೇಲಿರೋ ವೇಳೆಗೆ ತಾನೇ ನಾಯಕರಿಗೆ ಮಹಾರಾಜರೂ ಮರ್ಯಾದೆ ಮಾಡಿದ್ದು ! ಒಳ್ಳೇ ತಾಯಿಯ ಮಗಳು. ಒಳ್ಳೇ ತಾಯಿ ! ಎಲ್ಲಾದರೂ ಹತ್ತುಕಾಲ ಸುಖವಾಗಿರಲಿ" ಎನ್ನುವವರೇ.

ರಾಣಿಯು ಬಂದ ಸಡಗರವು ಅಡಗಿತು ಎನ್ನುವುದರೊಳಗಾಗಿ ಕುದುರೆಗಳ ತಾಳದಂತಹ ಕಾಲಸದ್ದು ಕೇಳಿಸಿತು. ಕಾಲ ಕಡಗಗಳನ್ನು ಹಾಕಿರುವ ಕುದುರೆಗಳು ನರ್ತಕರಂತೆ ಝಿಲ್ ಝಿಲ್ ಎಂದು ಕಾಲ ನ್ನಿಟ್ಟುಕೊಂಡು ಗಂಭೀರವಾಗಿ ಬರುತ್ತಿವೆ. ತಲೆಯಮೇಲಿನ ತುರಾಯಿ, ಕತ್ತಿನಲ್ಲಿರುವ ಗೆಜ್ಜೆಗಳು, ಎದೆಯಬಳಿ ತೂಗಾಡುತ್ತಿರುವ ಬಿಳಿಯ ಚಾಮರ, ಮೊಕದಿಂದ ಬಾಲದವರೆಗೂ ಹಾಕಿರುವ ಲೋಹದ ಸಾಮಾನು, ಎಲ್ಲದಕ್ಕಿಂತ ಹೆಚ್ಚಾಗಿ ಆ ಕುದುರೆಗಳು ಆ ಕತ್ತನ್ನು ಘನವಾಗಿ, ಗಂಭೀರವಾಗಿ, ಗತ್ತಿನಿಂದ, ಹೆಮ್ಮೆಯಿಂದಲೋ ಎಂಬಂತೆ, ಎತ್ತಿ ತಿರುಗಿಸಿಕೊಂಡು ಬರುತ್ತಿದ್ದರೆ, ಕುಸ್ತಿಗೆದ್ದು ಬರುತ್ತಿರುವ ಪೈಲ್ವಾನಿನ ಝೋಕು ಕಂಡು ನೋಡಿದವರಿಗೆ ಭಲೆ ಎನ್ನಿಸುವಂತಿದೆ.

ಸಾರೋಟು ಬಂದು ಹಾದಿಯಲ್ಲಿ ನಿಂತಿತು. ಕೋಚ್‌ಮ್ಯಾನಿನ ಪಕ್ಕದಲ್ಲಿ ಕುಳಿತಿದ್ದ ಜಮಾದಾರನು ಕೆಳಗೆ ಇಳಿದುಬಂದು ಬಾಗಿಲನ್ನು ತೆಗೆದನು. ನಾಯಕನು ಇಳಿಯುತ್ತಿದ್ದ ಹಾಗೆಯೇ ಗಾಡಿಯ ಹಿಂದೆ ಚಾಮರಗಳನ್ನು ಧರಿಸಿನಿಂತಿದ್ದ ಇಬ್ಬರು ಇಳಿದು ಬಂದು ನಾಯಕನ ಹಿಂದೆ ನಿಂತರು. ಬೃಹತ್ಕಾಯನಾದ ನಾಯಕನ ಕಿವಿಗಳಲ್ಲಿ ಅಕ್ಕ ಪಕ್ಕದಲ್ಲಿ ಕಟ್ಟಿರುವ ಸಣ್ಣ ಟಾರ್ಚ್‌ಗಳಂತೆ ವಜ್ರದ ಹತ್ತಕಡುಕು ಮೆರೆಯುತ್ತಿತ್ತು ; ಕೈಮುಗಿಯುತ್ತಿರುವವರಿಗೆ ಕೈಮುಗಿಯಲು ಎತ್ತಿದ ಆತನ ಕೈಯ ಉಂಗುರಗಳು ಸುತ್ತಲೂ ನಡೆಯುತ್ತಿರುವ ದೀವಟಿಗೆಯ ಸಲಾಂಗಳೆಂಬಂತಿತ್ತು ; ಆಡಂಬರವಿಲ್ಲದೆ ಗೌರವವಾಗಿ ಮಾನವತಿ ಯಾದ ಹೆಣ್ಣಿನಂತೆ ಮರೆಯಲ್ಲಿರುವ ಆತನ ಐಶ್ವರ್ಯದ ಗುರುತೆಂಬಂತೆ, ರತ್ನದ ಘೋಡಾ ಅಂಗಿಯ ತೋಳಿನಲ್ಲಿ ಮರೆಯಾಗಿರುವ ಷರ್ಟಿನ ಕಫ್ ಹಿಂದೆ ಥಳಥಳ ಎನ್ನುತ್ತಿತ್ತು. ಮಹಾರಾಜ, ಚಕ್ರವರ್ತಿಗಳ ಅನುಗ್ರಹವು ಭಾರತೀ ದೇವಿಯ ಕತ್ತಿಗೆ ಹಾಕಿರುವ ದಾಸ್ಯಶೃಂಕಲೆಗಳಂತೆ

ಮೆರೆಯುತ್ತಿದ್ದುವು.

ಸೋಟಾ ಜಮಾದಾರನು ಮರ್ಯಾದೆಯಾಗಿ ಜನಸಂದಣಿಯನ್ನು ಬಿಡಿಸಿಕೊಂಡು ಹೊರಟನು. ದಾರಿಯುದ್ದಕ್ಕೂ ಕೆಂಪು ಕಿಂಕಾಪು ಹಾಸಿತ್ತು. ಮಲ್ಲಣ್ಣನು ನಡುಕಟ್ಟಿಕೊಂಡು ಮುಂದೆ ಬಂದು ಅಡ್ಡಬಿದ್ದು, ತನ್ನ ಮನೆಗೆ ಬಂದ ದೇವರಂತೆ ನಾಯಕನಿಗೆ ಗೌರವವನ್ನು ಒಪ್ಪಿಸಿದನು. ಅದನ್ನು ನೋಡಿ ಜನ, ಆ ಕಾರ್ಯವನ್ನು ತಾವೇ ಮಾಡುತ್ತಿರುವಷ್ಟು ಗೌರವದಿಂದ ಸಂಭ್ರಮದಿಂದ, ಸಂತೋಷದಿಂದ ಕರತಾಡನ ಮಾಡಿದರು.

ನಾಯಕನು ಬಂದು ತನಗಾಗಿ ವಿರಚಿತವಾಗಿದ್ದ ಭದ್ರಾಸನದಂತಹ ಬೆಳ್ಳಿಯ ಕುರ್ಚಿಯಲ್ಲಿ ಕುಳಿತನು. ಗಾಂಭೀರ್ಯವೇ ಮೂರ್ತಿಮತ್ತಾಗಿ ಬಂದಿರುವಂತೆ ಎಲ್ಲರ ಕಣ್ಣಿಗೂ ಕಾಣುತ್ತಿದ್ದ ನಾಯಕನು ಎದುರಿಗೆ ಪುಷ್ಪಾಲಂಕೃತವಾದ ಮಂಟಪದಲ್ಲಿ ಪುಷ್ಪಾಲಂಕೃತೆಯಾಗಿ ಊರಿಗೆ ಬಂದ ವನದೇವಿಯಂತಿರುವ ಮಲ್ಲಿಯನ್ನು ನೋಡಿ ಚಕಿತನಾದನು. ಎದೆಯು ಬೆದರಿತು. ಮನಸ್ಸು ಬೆಚ್ಚಿತು. ತಾನು ಊರವರೆಲ್ಲರ ನಡುವೆ ಇರುವನೆಂಬುದೂ ಒಂದು ಗಳಿಗೆ ಮರೆತು ಹೋಯಿತು. ಹೋಗಿ ಅವಳನ್ನು ಅನಾಮತ್ತು ಎತ್ತಿಕೊಂಡು ಮುತ್ತಿನ ಸುರಿಮಳೆ ಸುರಿಸಬೇಕು ಎನ್ನಿಸಿತು. ಆದರೆ ಗೌರವ. ಅದರಿಂದ, ಏರಿಬಂದ ಹುಚ್ಚು ಹೊಳೆಯನ್ನೂ ಧೈರ್ಯವಾಗಿ ಗೌರವಮರ್ಯಾದೆಗಳ ಕಟ್ಟೆಯು ತಡೆಯಿತು.

ರಾಣಿಯು ಬಂದಾಗಿನಿಂದಲೂ ನಡೆಯುತ್ತಿದ್ದ ವಾಲಗವು ನಾಯಕನು ಬಂದು ಆಸನಸ್ಥನಾದ ಮೇಲೆ ನಿಂತಿತು. ಹೆಂಗಸರ ಹಾಡುಗಳು ಆರಂಭವಾದುವು. ಹಾಡು ಆದಮೇಲೆ ಆರತಿಯಾಯಿತು.

ಮಲ್ಲಿಯು ಅಷ್ಟು ಹೊತ್ತೂ ಗಂಭೀರವಾಗಿ ಕುಳಿತಿದ್ದಳು. ಎಲ್ಲಿ ಯಾವಾಗ ರೆಪ್ಪೆ ಬಡಿಯುವಳೋ! ಅಂತೂ ಅನಿಮಿಷಳಾಗಿಯೇ ಕುಳಿತಿದ್ದಂತೆ ಎಲ್ಲರಿಗೂ ತೋರುವುದು. ತನ್ನ ತಲೆಯಲ್ಲಿರುವ ಜಡೆಯ ಮಲ್ಲಿಗೆಯ ಮೊಗ್ಗಿಗೂ ಬೇಕೆಂದರೆ ಅಷ್ಟು ಶುಭ್ರತೆಯನ್ನು ಕೊಡುವ ಆ ನಿರ್ಮಲ ದೇಹಕಾಂತಿ, ಅವಳ ಸುತ್ತಮುತ್ತಲಿನ ಹೂಗಳಿಗೆಲ್ಲಾ ಗೌರವವನ್ನು ಕೊಟ್ಟಿತ್ತು. ಗುಲಾಬಿಯ ಬಣ್ಣದ ತೆಳುವಾದ ಸೀರೆ

ಉಡಿಸಿ ಅದರ ನೆರಿಯನ್ನು ಕಾಲಬಳಿ ಚೆಲ್ಲಿದ್ದರೆ, ಅವಳಿನ್ನೂ ಕನ್ನೆ, ಮೈನೆರೆಯದ ಹುಡುಗಿ, ಎನ್ನುವುದಕ್ಕೆ ಯಾರಿಗೂ ತೋರದು : ಒಳ್ಳೆಯ ಹದಿನಾರು ವರ್ಷದ ಹೊಸಜವ್ವನದ ಮೈಯುಬ್ಬಿನ ತರುಣಿಯಂತೆ ಕಾಣುತ್ತಿದ್ದಾಳೆ. ಭೋಗಲಕ್ಷ್ಮಿಯ ಸೌಭಾಗ್ಯವನ್ನು ಎರಕ ಹೊಯ್ದು ಇಟ್ಟಂತೆ, ಅದು ರಸಾವೇಶದಿಂದ ಕರಗಿ ಕೆಳಗಿಳಿದು ಚೆಲ್ಲಿದಂತೆ ಆ ನೆರಿಯ ಹರಹು ಕಾಣಿಸುತ್ತಿದೆ. ಆ ದುಂಡುತೋಳು ಅಗಲವಾದ ಎದೆಗೆ ಕಾವಲಿರುವ ಸಿಪಾಯಿಗಳಂತಿವೆ. ಕುಳಿತಿರುವ ಠೀವಿ, ಮಹಾರಾಣಿಗೆ ಠೀವಿಯನ್ನು ಕಲಿಸುವಂತಿದೆ. ಎಲ್ಲರ ಬಾಯಲ್ಲೂ, ಒಂದೇಮಾತು : “ಈ ಮಲ್ಲಣ್ಣನ ಮನೆಗೆ ಎಲ್ಲೋ ಮಾದೇವಿ ಬಂದವಳೆ ಕಣೋ ! ನಮ್ಮ ಖಾವಂದರನ್ನ ಬಿಟ್ಟು ಈ ಲೋಕದಲ್ಲೇ ಇನ್ನು ಯಾರೂ ಈ ಹೆಣ್ಣಿಗೆ ತಕ್ಕೋರಿಲ್ಲ.”

ಅರಮನೆಯ ಪುರೋಹಿತರು ಅರಮನೆಯಿಂದ ಅಪ್ಪಣೆಯಾಗಿದ್ದ ಖಿಲ್ಲತ್ತನ್ನು ಮಂತ್ರ ಪೂರ್ವಕವಾಗಿ ಹರಸಿ ಮಲ್ಲೀಗೆ ಕೊಟ್ಟರು. ಅದನ್ನು ಸ್ವೀಕರಿಸುವಾಗಲೂ ಅವಳು ಅರಮನೆಗೇ ಅನುಗ್ರಹ ಮಾಡುವಳಂತೆ ಕಾಣಿಸುತ್ತಿದ್ದಾಳೆ. ಆ ಗತ್ತನ್ನು ಕಂಡು, ಆ ಗಾಂಭೀರ್ಯವನ್ನು ನೋಡಿ, ನಾಯಕನಿಗೂ, ನಾಯಕನ ರಾಣಿಗೂ ಬಹಳ ಸಂತೋಷ, ಇಬ್ಬರಿಗೂ ಆಶ್ಚರ್ಯ. “ಬಡವನ ಮನೆಯಲ್ಲಿ ಬೆಳೆದ ಈ ಮುಕ್ಕನಿಗೆ ಇಷ್ಟು ಗಾಂಭೀರ್ಯ ಎಲ್ಲಿಂದ ಬಂತು ?” ಎಂದು ಇಬ್ಬರೂ ಬೆರಗಾಗಿ ಹೋದರು. ಆ ಸಭೆಯಲ್ಲಿ ಮಲ್ಲಿಯ ಗಾಂಭೀರ್ಯ ನೋಡಿ ಸೋಲದವರು ಒಬ್ಬರೂ ಇರಲಿಲ್ಲ.

ಎಲ್ಲರಿಗೂ ಗಂಧ ಪುಷ್ಪ ತಾಂಬೂಲಗಳಾಯಿತು. ಇನ್ನು ಹಸೆಯಿಂದ ಏಳುವ ಕಾಲ. ನಾಯಕನು ಅವಸರವಾಗಿ ಆಳನ್ನು ಕಣ್ಣು ಸನ್ನೆಯಿಂದ ಬರಮಾಡಿಕೊಂಡು, “ನಮಗೆ ದೂರದಿಂದಲೇ ಕೈಮುಗಿಯಬೇಕು. ಆಗೋ ಮರ್‍ಯಾದೆ ಯೆಲ್ಲ ಅಲ್ಲೇ ಜನಾನಾಗೇ ಆಗಬೇಕು ಅಂತ ಮಲ್ಲಣ್ಣನಿಗೆ ಹೇಳಿಬಾ” ಎಂದನು. ನಾಯಕನ ಅಪ್ಪಣೆ ಮಲ್ಲಣ್ಣನ ಮೊಕ ಪೆಚ್ಚಾಗುವಂತೆ ಮಾಡಿತು. ಅವನು ಕೆಂಪೀಗೂ ಹೇಳಿದನು. ಕೆಂಪಿಯು ಹೋಗಿ

ಮಗಳಿಗೆ ಹೇಳಿದಳು. ಮಲ್ಲಿಯ ಹಿಮ ಶುಭ್ರವಾದ ಮುಖವು ಅಸಮಾಧಾನದ ಕೆಂಪಿನಿಂದ ದಂತದ ಬಣ್ಣವಾಯಿತು. ಕೂಡಲೇ ಅನಿರೀಕ್ಷಿತವಾಗಿ ಥಟ್ಟನೆ ಎದ್ದು, ಶಾಂತವಾದ ಶರಧಿಯು ತನ್ನ ದ್ರವತ್ವ ಸ್ವಭಾವಾನುಗುಣವಾಗಿ ಚಲಿಸುವಾಗ ತೋರುವ ಸಣ್ಣ ತರಂಗಗಳಂತೆ ಮುಸಿಮುಸಿ ನಗುತ್ತಾ ನೇರವಾಗಿ ನಾಯಕರ ಬಳಿಗೆ ಹೋಗಿ ಆತನ ಪಾದಗಳಲ್ಲಿ ತಲೆಯಿಟ್ಟಳು.

ನಾಯಕನ ಅಪ್ಪಣೆಯನ್ನು ನಿರ್ಲಕ್ಷಿಸಿದ ಮಗಳ ದಿಟ್ಟತನವನ್ನು ಕಂಡು ತಾಯಿ ತಂದೆಗಳು ಅವಾಕ್ಕಾದರು. ಸುಗ್ರೀವಾಜ್ಞೆಯ ನಾಯಕನ ಕೋಪಕ್ಕೆ ತಾವು ಗುರಿಯಾದರೇನುಗತಿ ಎಂದು ನಡುಗಿದರು. ಆದರೂ ಅವಳಿಗೆ ಉಪನದಿಯು ಮಹಾನದಿಯನ್ನು ಸೇರುವಾಗ ಇರುವ ಸಹಜವಾದ ಸರಳಭಾವವಿತ್ತು. ಹೊರಗೆ ಹೋಗಿ ಚೆನ್ನಾಗಿ ಮೇದು ಬಂದಿರುವ ಹಸುವು ತನ್ನ ಗೊತ್ತಿನಲ್ಲಿ ಹೋಗಿ ನಿಂತುಕೊಳ್ಳುವಷ್ಟು ಸಹಜವಾಗಿ ಬಂದು ಪಾದಾಭಿನಂದನ ಮಾಡಿದ ಮಲ್ಲಿಯ ದಿಟ್ಟತನವು ನಾಯಕನಿಗೆ ಬೇಡವಾಗಲಿಲ್ಲ; ಅವಳು ತನ್ನ ಹತ್ತಿರ ಬರುತ್ತಿದ್ದರೆ, ಭೋಗ ಸಾಮ್ರಾಜ್ಯವೊಂದು ತನ್ನನ್ನು ಹುಡುಕಿಕೊಂಡು ಬರುತ್ತಿರುವಂತೆ ಅವನಿಗೆ ತೋರಿತಲ್ಲದೆ, ತನ್ನ ಅಪ್ಪಣೆಯನ್ನು ಮೀರಿದ ಅಪರಾಧಿಯಂತೆ ಕಾಣಿಸಲಿಲ್ಲ.

ಅವಳ ನಡತೆಯಂತೂ, ಅಬ್ಬಾ! ಅಲ್ಲಿದ್ದವರು ಅದನ್ನು ನೋಡಿ "ಭಲೇ ಪಟ್ಟದ ಹನಾಕಣೋ!" ಎಂದು ಅಂದೇ ಬಿಡಬೇಕು. ಆದರೆ ನಾಯಕನ ಸಾನ್ನಿಧ್ಯ: ಅಲ್ಲಿ ಉಸಿರು ಕೂಡ ಗಟ್ಟಿಯಾಗಿ ಬಿಟ್ಟು ಅಭ್ಯಾಸವಿಲ್ಲ. ಅದರಿಂದ ಮನಸ್ಸು ಮನಸ್ಸಿನೊಡನೆ ಮಾತನಾಡಿಕೊಂಡು, ಕಣ್ಣು ಕಣ್ಣಿನೊಡನೆ ಗುಟ್ಟಾಗಿ ಪಿಸು ಮಾತನಾಡಿಕೊಳ್ಳುವಂತೆ ಕಾಣಿಸಿತು. ಅವಳು ನಡೆಯುವಾಗ ಕಾಲಿನ ಕಡಗ, ಸರಪಣಿ, ಪಿಲ್ಲಿಗಳ ಗೆಜ್ಜೆ ಗಂಟೆಗಳು ಹಿತವಾಗಿ ಮಿತವಾಗಿ ನುಡಿಯುತ್ತ ಎಲ್ಲರ ಮನಸ್ಸಿನಲ್ಲೂ ಇದ್ದ "ಭಲೆ, ಹೆಣ್ಣೆ, ನಿನ್ನಂತಾ ಚೆಲುವೆ ಇರಲಿಲ್ಲ, ಬರೋದಿಲ್ಲ" ಎಂಬ ಅಭಿನಂದನ ವಾಕ್ಯಗಳಂತೆ ಶೋಭಿಸುತ್ತಿದ್ದವು.

ಇಂತಹ ಗೌರವ ಹೊಸದಲ್ಲದ ನಾಯಕನಿಗೂ ಅವಳು ಬಂದು ಕಾಲುಮುಟ್ಟಿ ನಮಸ್ಕಾರ ಮಾಡಿದಾಗ ಏನು ಮಾಡಬೇಕೋ ತಿಳಿಯದೆ ಭಾವಪ್ರಲಯವಾಗಿ, ಅವಳೇ ಅನುಗ್ರಾಹಕಳಾಗಿ, ತಾನು ಅನುಗ್ರಾಹ್ಯನಾಗಿದ್ದರೆ ಹೇಗೋ ಹಾಗೆ ನಡೆದುಕೊಂಡನು. ಎದ್ದು ಅವಳನ್ನು ಎತ್ತಿ ಅರ್ಧಾಲಿಂಗನದಿಂದ ಗೌರವಿಸಿ, ಎಡಗೈಯ ಕಿರುಬೆರಳಲ್ಲಿದ್ದ ಉಂಗುರವನ್ನು ತೆಗೆದು ಅವಳ ಕೈಯಲ್ಲಿಟ್ಟು ಮನಃಪೂರ್ವಕವಾಗಿ ಹರಸಿ, ತಲೆ ಸವರಿ, ಬೀಳ್ಕೊಟ್ಟನು. ನಾಯಕನು ಭದ್ರಾಸನದಿಂದ ಮೇಲಕ್ಕೆದ್ದುದನ್ನು ಕಂಡು ಎಲ್ಲರಿಗೂ ಆಶ್ಚರ್ಯವಾಯಿತು. ಪುರೋಹಿತರು ಜೋಯಿಸರು ಒಬ್ಬರ ಮುಖ ಇನ್ನೊಬ್ಬರು ನೋಡಿದರು.

ಮಲ್ಲಿಯು ನಾಯಕನ ಅನುಗ್ರಹವನ್ನು ಸ್ವೀಕರಿಸಿ ನೇರವಾಗಿ ಬಂದು ರಾಣಿಗೆ ನಮಸ್ಕಾರ ಮಾಡಿದಳು. ರಾಣಿಯು ತುಂಬು ಮನಸ್ಸಿನಿಂದ ಎದ್ದು ಅವಳನ್ನು ಆಲಿಂಗಿಸಿಕೊಂಡು ಮಗ್ಗುಲಲ್ಲಿ ಕುಳ್ಳಿರಿಸಿಕೊಂಡಳು; ನಾಯಕನ ವರ್ತನೆಯಿಂದ ಅರ್ಧ ಚಕಿತವಾಗಿದ್ದ ಜನ ರಾಣಿಯ ವರ್ತನೆಯಿಂದ ಪೂರ್ಣವಾಗಿ ವಿಸ್ಮಯಗೊಂಡಿತು. ಎಲ್ಲರ ಕಣ್ಣುಗಳೂ ಕುತೂಹಲವಾಗಿ ತನ್ನನ್ನೇ ನೋಡುತ್ತಿರಲು ರಾಣಿಯು ಕೆಂಪಿಯನ್ನು ಕರೆದು ಅಲ್ಲಿ ಫಲ ಪೂರ್ಣವಾಗಿದ್ದ ತಟ್ಟೆಯೊಂದನ್ನೂ ವೀಳೆಯವನ್ನೂ ತರಿಸಿಕೊಂಡಳು. ಸಭೆಯ ಕುತೂಹಲವಿಮ್ಮಡಿಸಿತು. ಎಲ್ಲರೂ ಕಣ್ಣೊಂದರಲ್ಲೇ ತಮ್ಮ ಜೀವಿತವನ್ನೆಲ್ಲಾ ಕೇಂದ್ರೀಕರಿಸಿರುವವರಂತೆ ನೋಡಿದರು.

ರಾಣಿಯು ಎದ್ದು ಮಲ್ಲಿಯನ್ನು ತನ್ನ ಆಸನದಲ್ಲಿ ಕುಳ್ಳಿರಿಸಿ ತನ್ನ ಕತ್ತಿನಲ್ಲಿದ್ದ ರತ್ನ ಖಚಿತವಾದ ಬಂದಿಯನ್ನು ತೆಗೆದುಕೊಂಡು ನಾಯಕನ ಮುಖವನ್ನು ಪರಮ ಪ್ರೀತಿಯಿಂದ ಚುಂಬಿಸುವಳಂತೆ ನೋಡಿ, ಆತನ ಪಾದಗಳನ್ನು ಮುಟ್ಟಿ ಕಣ್ಣೊತ್ತಿಕೊಂಡು ಅಪ್ಪಣೆಯನ್ನು ಕೇಳುವ ವಿನಯದಿಂದ ಇನ್ನೂ ಒಮ್ಮೆ ನೋಡಿ, ಆ ಬಂದಿಯನ್ನು ಮಲ್ಲಿಯ ಕತ್ತಿಗೆ ಹಾಕಿದಳು. ತಾಂಬೂಲವನ್ನು ಕೊಟ್ಟು ಮಗ್ಗುಲಲ್ಲಿ ಅವಳನ್ನು ಆಲಿಂಗಿಸಿಕೊಂಡು ಕುಳಿತಳು.

ಸಭೆಯು ಆಶ್ಚರ್ಯಮೂಕವಾಯಿತು.

ನಾಯಕನು ಅಮೃತಪುತ್ಥಳಿಯನ್ನು ಆಲಿಂಗಿಸಿದವನಂತೆ ಪುಳಕಿತನಾಗಿ, ಧರ್ಮದೇವತೆಗೆ ಪ್ರೇಮದಿಂದ ಭಕ್ತಿಯಿಂದ ಪೂಜೆಯನ್ನೊಪ್ಪಿಸಿ ಪ್ರಸಾದಗ್ರಹಣ ಮಾಡುವ ಭಕ್ತನ ಮನೋಭಾವದಿಂದ ಪತ್ನಿಯನ್ನು ನೋಡಿ ವಿಸ್ಮಯಾವಿಷ್ಟನಾದನು.

ಮಲ್ಲಣ್ಣನು, ಕಣ್ಣು ಅಂಗೈಯಗಲವಾಗಿರಲು, ಬಾಯಿ ತೆರೆದುಕೊಂಡು, ತಾನು ನೋಡಿದುದನ್ನೇ ನಂಬಲಾರದವನಂತೆ, ಮೈಮೇಲೆ ಅರಿವಿಲ್ಲದೆ ಮರವಾದಂತೆ ನಿಂತಿದ್ದನು.

ಕೆಂಪಿಯು ಒಂದು ಕೈಯ್ಯ ನಡುವಿನಮೇಲೆ, ಇನ್ನೊಂದು ಕೈಯ್ಯ ಪರಮಾಶ್ಚರ್ಯದ ಭಾವವನ್ನು ತಡೆಯಲಾರದೆ ಕೆಳಕ್ಕೆ ಬಿದ್ದು ಹೋಗುವತಲೆಗೆ ಊರಿಕೊಟ್ಟಂತೆ ಗಲ್ಲವನ್ನು ಅಂಗೈಯಲ್ಲಿ ಹಿಡಿದಿರಲು, ನೆಟ್ಟಕಣ್ಣಿನ ನಿಡುನೋಟದಿಂದ ರಾಣಿಯೊಡನೆ ಇರುವ ಮಗಳನ್ನು ನೋಡುತ್ತಿದ್ದಾಳೆ.

ಸಭೆಯಲ್ಲಿರುವವರು ತಾವು ಗಂಡೋ ಹೆಣ್ಣೋ ಎಂಬುದು ಮರೆತು ಚಿತ್ರಾರ್ಪಿತ ಪ್ರತಿಮೆಗಳಾಗಿದ್ದಾರೆ. ಎಲ್ಲರೂ ಅವಾಕ್ಕಾಗಿದ್ದಾರೆ.

ರಾಣಿಯು ನಿಲುಗನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನೇ ನೋಡಿಕೊಳ್ಳುತ್ತ, ರೂಪ ಸೌಭಾಗ್ಯದರ್ಶನದಿಂದ ಸಂತುಷ್ಟಳಾಗಿರುವ ಗಂಧರ್ವಕನ್ನೆಯಂತೆ ಸಂತುಷ್ಟಳಾಗಿದ್ದಾಳೆ.

ಮಲ್ಲಿಯು, ಆ ಗರ್ಭ ಶ್ರೀಮಂತರ ಮನೆಯಲ್ಲಿ ಹುಟ್ಟಿ ಅಖಂಡ ಶ್ರೀಮಂತನ ಕೈಹಿಡಿದಿರುವ ಆ ಕುಲಸ್ತ್ರೀರತ್ನದ ಜೊತೆಯಲ್ಲಿ ಸಾಣೆ ಹಿಡಿದ ಪಟ್ಟೆವಜ್ರಕ್ಕೆ ವರ್ತಿಯಾಗುವ ಹಲಗೆವಜ್ರದಂತೆ ಏನೂ ವಿಕಾರವಿಲ್ಲದೆ, ಗುಲಾಬಿಯು ಮುಳ್ಳಿನ ಪೊದೆಯಲ್ಲಿ ಅರಳಿದರೂ ಸಹಜವಾದ ಪರಿಮಳವನ್ನು ಸುತ್ತಮುತ್ತಿಗೆ ಕೈಗಾಣಿಕೆಗೊಟ್ಟು, ಸನ್ನಿವೇಶವೊಪ್ಪಿಸಿದ ಮೆಚ್ಚಿನ ಪ್ರತಿಕಾಣಿಕೆಯನ್ನು ಅಂಗೀಕರಿಸಿ ಗರ್ವಗಂಧರಹಿತವಾಗಿ ಗಂಭೀರವಾಗಿ ಮೆರೆಯುವ ವಿಕ್ಟೋರಿಯಾ ಗುಲಾಬಿಯಂತೆ ಮುಗ್ಧಾಗಿ ಕುಳಿತಿದ್ದಾಳೆ.

ನಾತಿದೂರದಲ್ಲಿ ನಿಂತಿದ್ದ ಗಾಡಿಗೆ ಕಟ್ಟಿದ್ದ ಸುಲ್ತಾನ್, ರಾಣಿ, ಎರಡು ಕುದುರೆಗಳೂ ಈ ಕಾರ್ಯವನ್ನು ಸಂಪೂರ್ಣವಾಗಿ ಅನು

ಮೋದಿಸಿದ ಪ್ರಕೃತಿದೇವಿಯಿಂದ ಪ್ರತಿಕೋದಿತವಾದಂತೆ ಏಕಕಾಲದಲ್ಲಿ ಕೆನೆದುವು. ಮಗ್ಗುಲಲ್ಲಿ ನಿಂತಿದ್ದ ಹಕೀಂನು, ಅದನ್ನು ಒಪ್ಪಿಕೊಂಡವ ನಂತೆ ಎರಡನ್ನೂ ಪ್ರೀತಿಯಿಂದ ಮುದ್ದಿಸುತ್ತಾ "ಬೊಹತ್ ಅಚ್ಛೇ ಕರೇ ಬೇಟೋಂ" ಎಂದು ಅವುಗಳ ಕೆನ್ನೆಯನ್ನು ಸವರಿದನು.

ಮೃಗಗಳ ಧ್ವನಿ, ಅದರೊಡನೆ ಬಂದ ಮನುಷ್ಯವಾಕ್ಯ ಸಭೆಯ ವರನ್ನೆಲ್ಲಾ ಎಚ್ಚರಿಸಿತು. ನಾಯಕನ ಮುಖವು ಉತ್ತಮವಾದ ಮದ್ಯ ರಾಜವನ್ನು ಪಾನಮಾಡಿದವನ ಮುಖದಂತೆ ಕೆಂಪಾಗಿತ್ತು. ಅದರೂ ಉದ್ವೇಗವೇನನ್ನೂ ತೋರಿಸದೆ, ಎಲ್ಲವೂ ಯಥಾಸ್ಥಿತವಾಗಿರುವಾಗ ಇರುವಂತೆ ಎದ್ದು, ಎಲ್ಲರಿಗೂ ಯಥೋಚಿತವಾಗಿ ಪ್ರಣಾಮಾದಿ ಗೌರವಗಳನ್ನು ಸಲ್ಲಿಸಿ ಹೊರಟುಹೋದನು.

ಸಭೆಯು ವಿಸರ್ಜಿತವಾಯಿತು. ಎಲ್ಲರೂ ಒಪ್ಪಿಸಿದ ಮರ್ಯಾದೆಗೆ ಪ್ರತಿ ಮರ್ಯಾದೆಗಳನ್ನು ಒಪ್ಪಿಸಿ, ರಾಣಿಯೂ ಎದ್ದಳು. "ಕೆಂಪಮ್ಮಣ್ಣಿ, ಇತ್ತ ಬಾ. ಮಲ್ಲಮ್ಮಣ್ಣಿ ಇವೊತ್ತು ಅರಮನೆಯಲ್ಲಿದ್ದು ನಾಳೆ ಇಲ್ಲಿಗೆ ಬರುತ್ತಾಳೆ." ಎಂದಾಗ ಅವಳಿಗೆ ಪೂರ್ಣ ಎಚ್ಚರ ವಾಯಿತು.

ಮಲ್ಲಿಯು ಮಲ್ಲಮ್ಮಣ್ಣಿಯಾಗಿ ಸುಂದರಮ್ಮಣ್ಣಿಯೊಡನೆ ಹೊರ ಟಳು. ಪುರೋಹಿತರೂ, ಜೋಯಿಸರೂ ಅವರ ಪತ್ನಿಯರೂ ಅವ ರೊಡನೆ ಮೇನಾದವರೆಗೂ ಬಂದರು. ಮಲ್ಲಣ್ಣ ಕೆಂಪಮ್ಮಣ್ಣಿ ಇಬ್ಬರೂ ಮೂಕರಂತೆ ಅವರಹಿಂದೆ ಹೋಗಿ ಬೆಸ್ತರು ಮೇನಾ ಎತ್ತಿ ದಾಗ ರಾಣಿಗೆ ಕೈಮುಗಿದರು.

## ೧೮

ಮಲ್ಲಿಯು ಮಲ್ಲಮ್ಮಣ್ಣಿಯಾದಮೇಲೆ, ಮಲ್ಲಣ್ಣನೂ ಕೆಂಪಿಯೂ ಮಜ್ಜಿಗೆಯ ಹಳ್ಳಿಯನ್ನು ಬಿಟ್ಟು, ಮೈಸೂರಿಗೆ ಬಂದರು. ನಾಯಕನು ಈಡಿಗದಲ್ಲಿ ಹತ್ತುಸಾವಿರ ಕೊಟ್ಟು ಮನೆಯನ್ನು ಕೊಂಡುಕೊಂಡನು.

ಕಟ್ಟಡಕ್ಕಿಂತ ಕಾಂಪೌಂಡು ಹೆಚ್ಚಾಗಿತ್ತು. ಅಲ್ಲಿ ಆ ದಂಪತಿಗಳಿಗೆ ವಾಸ. ಇನ್ನು ಇಪ್ಪತ್ತು ಸಾವಿರ ಖರ್ಚುಮಾಡಿ ಮಗ್ಗುಲಲ್ಲಿ ಒಂದು ನಡುಮನೆ, ವಿಶಾಲವಾದ ಕೋಣೆಗಳೆರಡು, ಒಂದು ಆಫೀಸ್‌ರೂಮ್, ಒಂದು ವೆರಾಂಡಾ, ಒಂದು ಕುದುರೆಲಾಯ, ಒಂದು ದನದಕೊಟ್ಟಿಗೆ, ಇಷ್ಟನ್ನೂ ಕಟ್ಟಿಸಿದನು. ಅದು ಕಟ್ಟಿ ಮುಗಿದಮೇಲೆ, ಯಾರು ಬಂದರೂ, "ಭರ್ಜರಿ ಬಂಗಲೆಯಾಯಿತು. ಐವತ್ತು ಸಾವಿರಕ್ಕೆ ಮೋಸವಿಲ್ಲ" ಎನ್ನುವರು.

ಮಲ್ಲಣ್ಣನು ಮನೆಯ ಯಜಮಾನನಾದನು. ಸುತ್ತಮುತ್ತಿನವರು ಏನೋ ಮಲ್ಲಣ್ಣ ಎನ್ನುತ್ತಿದ್ದುದು ತಪ್ಪಿ, ಏನು ಮಲ್ಲಣ್ಣನೋರೆ ಎನ್ನುವರು. ಕೆಂಪಿಯು ಕೆಂಪಮ್ಮನವರು ಆಗಿದ್ದಾಳೆ. ತಿಂಗಳಿಗೆ ಐವತ್ತು ರೂಪಾಯಿ ಎರಡನೆಯ ತಾರೀಖು ಬಂದುಬಿಡುವುದು. ಗಂಡಹೆಂಡಿರು ಹೇಗೆಹೇಗೆ ಖರ್ಚುಮಾಡಿದರೂ ತಿಂಗಳಿಗೆ ನಾಲ್ಕೈದು ರೂಪಾಯಿ ಉಳಿಯುವುದು. ಈಗ ಗಂಡಹೆಂಡರಿಗೆ ನಿತ್ಯವೂ ತುಪ್ಪ, ಮೊಸರು ಇಲ್ಲದೆ ಊಟವೇ ಇಲ್ಲ.

ಜೊತೆಗೆ ಬಾಗಿಲು ಗುಡಿಸಿ ರಂಗವಲ್ಲಿ ಇಡುವುದಕ್ಕೆ, ಕಸಮುಸರೆಗೆ ಒಬ್ಬಳು ಆಳು–ಅವಳಿಗೆ ಸಂಬಳ ತಿಂಗಳಿಗೆ ಎಂಟಾಣೆ. ಅವಳ ಗಂಡನೇ ಹೊಸ ಬಂಗಲೆಗೆ ಕಾವಲುಗಾರ. ಅವನೇ ತೋಟದ ಮಾಲಿ. ಅವನಿಗೆ ತಿಂಗಳಿಗೆ ಹತ್ತುರೂಪಾಯಿ. ಅವರಿಗೊಬ್ಬ ಮಗ, ಮಗಳು. ಮಾಲಿ ಹೆಸರು ತಿಮ್ಮ : ಅವನ ಹೆಂಡತಿಯ ಹೆಸರು ರಂಗಿ. ಮಗನ ಹೆಸರು ಸುಬ್ಬ : ಮಗಳ ಹೆಸರು ಮಾದಿ.

ಅರಮನೆಯಿಂದ ಬರುವ ಸಂಬಳವೂ ಮಲ್ಲಣ್ಣನ ಕೈಗೆ ಬರುವುದು. ನಾಯಕನು "ಅದನ್ನೂ ನೀವೆ ತಕೊಳ್ಳಿ. ಖರ್ಚುಮಾಡಿಕೊಳ್ಳಿ. ಇಟ್ಟುಕೊಂಡಿರಿ. ಇದ್ದರೆ ಎಲ್ಲಿ ಹೋಯ್ತದೆ !" ಎಂದು ಅಪ್ಪಣೆಯನ್ನು ಕೊಟ್ಟಿದ್ದನು. ಆದರೂ ಮಲ್ಲಣ್ಣನು " ಹೆಣ್ಣು ಮಗುವಿನ ಸೊತ್ತು " ಎಂದು ಅದನ್ನು ತಿಂಗಳೂ ಕಟ್ಟಿ ಹಾಕುವನು.

ಕೆಂಪಿಗೆ ಬೇಜಾರು. ಅಮ್ಮ ಅಮ್ಮ ಎಂದು ಕೊಂಡು ಕಾಲಿಗೆ ಸುತ್ತಿಕೊಂಡು ತಿರುಗುತ್ತಿದ್ದ ಮಗಳನ್ನು ಬಿಟ್ಟಿರುವುದು ಅವಳಿಗೆ

ಕಷ್ಟವಾಯಿತು. ಮಲ್ಲಣ್ಣನೊಡನೆ ತನ್ನ ಕಷ್ಟವನ್ನು ಹೇಳಿಕೊಂಡಳು. ಒಂದು ಸಲ ಹೂಂ ಎಂದನು. ಎರಡನೆಯ ಸಲ ಕೊಂಚ ಯೋಚಿಸಿ, ನೋಡೋವ ಎಂದನು. ಮೂರನೆಯ ಸಲ ಅವಳು ಊಟ ಮಾಡಿ ಬಾಯಿ ತುಂಬ ತಾಂಬೂಲ ಹಾಕಿಕೊಂಡು ಹಾಸುಗೆಯ ಮೇಲೆ ಕುಳಿತುಕೊಂಡು "ಮೊಗಾನ ಕರೆತರೋಲ್ಲವಾ ? ಯಾಕೋ ಮನಸ್ಸೆಲ್ಲಾ ಬಿಮ್ಮಂತದೆ" ಎಂದು ಆರಂಭಿಸಿದಳು.

ಮಲ್ಲಣ್ಣನು ಗಂಭೀರವಾಗಿ ಒಂದು ಗಳಿಗೆ ಅಡಕೆಲೆ ಅಗಿಯುವುದನ್ನೂ ನಿಲ್ಲಿಸಿ, ಹಾಗೇ ಇದ್ದು "ನೋಡು ಹೆಣ್ಣೆ, ಅದೆಲ್ಲಿಂದಲೋ ಯಾರೋ ತಂದು ಕೊಟ್ಟರು: ಇವರು ಬಂದು ಅದರುದ್ದ ಹಣ ಸುರಿದು ಕರಕೊಂಡು ಹೋದರು. ಜನ್ಮದಲ್ಲಿ ಮೈಸೂರಲ್ಲಿ ಮನೆ ಮಾಡಿಕೊಂಡು, ಎರಡು ಹೊತ್ತು ಹೊಟ್ಟೇ ತುಂಬಾ ಉಂಡುಕೊಂಡು, ಮೈ ತುಂಬಾ ಬಟ್ಟೆಹಾಕಿಕೊಂಡು ಇರುತೀವಿ ಅಂತಾ ನಾವಂದುಕೊಂಡಿದ್ದೆವಾ ? ಏನೋ ಆ ಮೊಗ ಎಲ್ಲಿ ಹುಟ್ಟಿತೋ ನಮ್ಮ ಮನೆಗೆ ಮಹಾಲಕ್ಷ್ಮಿ ಅಂಗೆ ಬಂದು ನಮ್ಮನ್ನು ಉದ್ಧಾರ ಮಾಡಿ, ತಾನೆಲ್ಲಿರಬೇಕೋ ಅಲ್ಲಿಗೆ ಹೋಯ್ತು. ನಾನು ಹೋಗಿ ಯಾವ ಮೊಕಾ ಇಟ್ಟುಕೊಂಡು ಮೊಗಾನ ಕಳ್ಸಿಕೊಡಿ ಅನ್ನಲಿ ! ಅಲ್ಲದೆ ನಿಜ ಹೇಳಬೇಕು ಅಂದರೆ, ನಾನು ಬುದ್ಧಿಯೋರ ಕೈಲಿ ಮಾತಾಡೋದು ಉಂಟು. ಆದರೂ ಗಾಬರೀನೇ ! ಆದರಿಂದ ಆ ಮಾತು ನನ್ನ ಕೈಲಾಗೋಕಿಲ್ಲ. ಈಗ ನೋಡು, ಕಾವೇರವ್ವ ಕೊಡಗಿನಿಂದ ಬಂದು ನಮ್ಮ ಮೈಸೂರಿಗೆ ಬೇಕಾದ್ದು ಮಾಡಿ ಕಣಿವೆ ಕೆಳಕ್ಕೆ ಹೋಗುವಾಗ ಧಢಂ ಅಂತ ಧುಮುಕಿ ಹೊರಟು ಹೋಗ್ತಾಳೆ. ಹಂಗಾಯ್ತು ಮಲ್ಲೀದು – ಅಲ್ಲಿ ಸುಖವಾಗಿರಲಿ ಬುಡು."

ಕೆಂಪಿ ಆ ಮಾತು ಕೇಳಿ ಕಣ್ಣಲ್ಲಿ ನೀರಿಟ್ಟುಕೊಂಡಳು. ಆ ಕಣ್ಣೀರು ನೋಡಿ ಗಂಡನೇನೆಂದುಕೊಳ್ಳುವನೋ ಎಂದು ಅತ್ತ ಕಡೆ ತಿರುಗಿಕೊಂಡಳು. ಮಲ್ಲಣ್ಣನ ಕಣ್ಣಿಗೆ ಅಷ್ಟರೊಳಗಾಗಿ ಅದು ಬಿತ್ತು ; "ಛೇ ! ಬುಡು. ಬುಡುತು ಅನ್ನು. ಮೋಗೀನ ಸುದ್ದಿ ಎತ್ತಿ ಕಣ್ಣೀರು ಬುಡುತಿಯಾ ! ಹೆಂಗಿದ್ದರೂ ನಾವು ತಿರಪದೋರು.

ಮನೆ ಇದ್ದೋರಿಗೆ ಒಂದು ಮನೆಯಾದರೆ ಮನೆಯಿಲ್ಲದಿದ್ದೋರಿಗೆ ಊರೆಲ್ಲಾ ಮನೆಯಂತೆ. ಇಗೋ, ತಿಮ್ಮನ ಹೆಂಡತೀಗೆ ಹೇಳು. ಆ ಮಕ್ಕಳ್ನೇ ನಿನ್ನ ಮಕ್ಕಳು ಅನ್ಕೋ! ಏನು ಅವರಿಬ್ಬರ ಊಟಕ್ಕೆ ದೇವರು ಕೊಟ್ಟಿಲ್ಲವಾ? ಒಂದು ಹೆಣ್ಣಿಗೆ ಬದಲು ಒಂದು ಹೆಣ್ಣು, ಗಂಡು ಎರಡು ಬಂತು ಅನ್ಕೋ! ದಿನಾ ಅವರಿಗೆ ತುಪ್ಪಾನ್ನ ಇಟ್ಟು ಮಲ್ಲಿ ಚೆನ್ನಾಗಿರಲಿ ದೇವ್ರೆ ಅನ್ನೂ. ಹೆಂಗಿದ್ದರೂ ಅರಮನೆಯಿಂದ ಮಲ್ಲೀಗೆ ಬರೋ ಹತ್ತು ರೂಪಾಯಿ ಇದ್ದೇ ಇದೆ! ಅವಳ ಹೆಸರ್ನಲ್ಲಿ ಒಂದು ಛತ್ರಾ ನಡೆದು ಹೋಗಲೇಳು."

ಕೆಂಪಿಯು ಯತ್ನವಿಲ್ಲದೆ ಒಪ್ಪಿಕೊಂಡಳು. ಆಗ ಸುಮಾರು ಇನ್ನೂ ಎಂಟೆಂಟೂವರೆಗಂಟೆ ಇರಬಹುದು. ತಿಮ್ಮನೂ ಊಟಮಾಡಿ ಮಲಗೋಕೆ ಮುಂಚೆ ಬಂಗಲೆ ಸುತ್ತಾ ಒಂದು ಗಸ್ತು ಬಂದಿದ್ದವನು, "ಏನು ಬುದ್ಧಿ, ಇನ್ನೂ ಮಲಗಿಲ್ವಾ?" ಅಂದ.

ಮಲ್ಲಣ್ಣನು ಮೊಳಕ್ಕೈಲಿ ಕೆಂಪಿಯನ್ನು ತಿವಿದು "ಕೇಳಿದಾ, ಅವನೇನಂದಾ!" ಎಂದು, ನಶ್ಯದ ಚಿಟಿಕೆ ಮೂಗಿನ ಕಡೆಗೆ ಹೊರಟಿದ್ದುದನ್ನು ಹಾಗೇ ತಡೆದು "ಯಾರಯ್ಯ ಅದು? ತಿಮ್ಮಯ್ಯನಾ?" ಎಂದ.

"ಹೌದು ಬುದ್ಧಿ! ದೀಪಕಂಡೆ. ಆದಕ್ಕಾಗಿ ಕೇಳಿದೆ ಬುದ್ಧಿ"

"ಸಟೀಕೆ ಒಳಕ್ಬಾ!"

ಕೆಂಪಿಯು ಎದ್ದು ಬಾಗಿಲು ತೆಗೆದಳು. ಮಾಲಿ ತಿಮ್ಮಯ್ಯನು ಒಳಕ್ಕೆ ಬಂದನು. ಕೆಂಪಿಯು ನಡು ಮನೆಯ ಕಂಭವನ್ನು ಒರಗಿ ಕುಳಿತಳು.

ಮಲ್ಲಣ್ಣನು ತನ್ನ ಮುಂದಿದ್ದ ಅಡಕೆಲೆ ತಟ್ಟೆಯಿಂದ ಎಲೆ ಅಡಕೆ ಎತ್ತಿ ಅವನ ಕೈಲಿ ಹಾಕಿ, "ಕುಂತುಕೋ, ಮಾತಾಡಬೇಕು" ಎಂದನು.

ತಿಮ್ಮಯ್ಯನು ಬಾಗಿಲ ಹತ್ತಿರ, ಅಡಗಿಕೊಂಡು ಹೊದೆದಿದ್ದ ಕಂಬಳಿಯನ್ನು ಎಳೆದುಕೊಂಡು ಕುಕ್ಕುರಗಾಲಲ್ಲಿ ಕುಳಿತುಕೊಂಡನು. ಮಲ್ಲಣ್ಣನು ಒಂದು ದೊಡ್ಡ ಚೂರು ಹೊಗೆಸೊಪ್ಪು

ಅವನ ಕೈಲಿ ಹಾಕಿ, " ಏನು ಸಮಾಚಾರ ತಿಮ್ಮಯ್ಯ ? " ಎಂದನು.

" ಏನು ಹೇಳಲಿ ಬುದ್ಧಿ, ನೋಡಿ ತಾವು ಹೊಗೆಸೊಪ್ಪು ಕೊಟ್ಟಿರಲ್ಲಾ, ಇಲ್ಲೊಬ್ಬ ಅಯ್ಯನವರು ಹೈದರಾಬಾದಿನ ಕಡೆಯಿಂದ ಬಂದವರೆ ಬುದ್ಧಿ, ಅವರು ನಾವು ಮಾಡುತಿರೋ ತೋಟನೋಡಿ, ಈ ದಿನ ಒಳಾಕೆಬಂದು ' ಏನಯ್ಯಾ ಗಿಡಎಲ್ಲಾ ನೋಡಬೋದಾ ? ಯಾರದು ಬಂಗಲಿ ? ' ಅಂತ ಎಲ್ಲಾ ಕೇಳಿದರು. ನಾನು ಖಾವಂದರ ಇಚಾರ ನಂಗೊತ್ತಿರೋಷ್ಟು ಹೇಳಿ, ಮಲ್ಲಣ್ಣ ಬುದ್ಧಿಯೋರು ಇಲ್ಲವರೆ. ಅವರ್ನ ಕೇಳಿ ಅಂದೆ. ' ಇವೊತ್ತು ಪುರಸೊತ್ತಿಲ್ಲ, ಇನ್ನೊಂದಿನ ಆಗಲಿ ' ಅಂತ ಹೊರಟು ' ಗಿಡ ಬಹು ಚೆನ್ನಾಗಿದೆ ಕಣಯ್ಯ, ತಕೋ, ನಿನಗೊಂದು ಅಪರೂಪದ ಒಸ್ತಾ ಕೊಡುತೀವಿ ' ಅಂತ ಒಂದು ಡಬ್ಬೀ ತೆಗೆದು ಅಷ್ಟು ಹೊಗೇಸೊಪ್ಪು ಕೊಟ್ಟರು. ಒಂದು ಚೂರು ಬಾಯ್ಗೆ ಆಕ್ಕೊಂಡರೆ, ಅವ್ವಯ್ಯ, ಅದೇನಂತೀರಿ ? ಯಾರೋ ರಾಜರು ಮಾರಾಜರೂ ಆಕ್ಕೊಳ್ಳೊ ಹೊಗೇಸೊಪ್ಪು ಬುದ್ಧಿ. ಅಪ್ಪಣೆ ಆದರೆ ಒಂದೀಟು ಇನ್ನು ಅದೆ. ತಂದುಕೊಡುತೀನಿ. "

"ತತ್ತಾ, ನೋಡೋವ"

ತಿಮ್ಮನು ಹೋಗಿ ಒಂದು ಅಷ್ಟು ಸುವಾಸನೆಯ ಹೊಗೆಸೊಪ್ಪು ತಂದನು. ಮಲ್ಲಣ್ಣನು ಅದನ್ನು ಒಂದು ಕಾಸಿನಷ್ಟು ತಾನು ಬಾಯಲ್ಲಿ ಹಾಕಿಕೊಂಡು, ಇನ್ನೊಂದಿಷ್ಟು ಕೆಂಪೀಗೆ ಕೊಟ್ಟು, "ನೋಡಿದೆಯಾ ಕೆಂಪಿ, ಸೀಮಂತಿಕೆ ಅಂದರೆ ಹೆಂಗದೆ ?" ಎಂದು, ತಿಮ್ಮಯ್ಯನ ಕಡೆ ತಿರುಗಿ "ಇದು ಎಲ್ಲಿದಂತೆ ? ಇದಕೇನು ಹೆಸರಂತೆ ?" ಎಂದು ಕೇಳಿದನು.

"ಇದು ಹೈದರಾಬಾದಂತೆ ಬುದ್ಧಿ. ಇದರ ಹೆಸರು ಜಲ್ದಾ ಅಂತಲೋ ಬರ್ದಾ ಅಂತಲೋ ಏನೋ ಅಂದರು."

"ಆ ಅಯ್ಯನವರು ಎಲ್ಲಿರೋದು ?"

"ಇದೇ ಬೀದೀಲಿ ಬತ್ತಾ ಇರ್ತಾರೆ."

"ನಾಳೇ ನೋಡಿಕೊಂಡಿದ್ದು ಅವರು ಬರತ್ತಲೂ ಕರೀ !"

"ಅಪ್ಪಣೆ ಬುದ್ಧಿ"

"ಆಯಿತು. ತಿಮ್ಮಯ್ಯ, ಈಗ ನಮ್ಮ ಹೆಂಗುಸು ಒಂದು

ಮಾತು ಹೇಳ್ತಾ ಳಲ್ಲ ಹೆಂಗೆ ?"

"ಅಪ್ಪಣೆ ಆಗಲಿ, ಬುದ್ಧಿ"

"ಇನ್ನು ಮೇಲೆ ನಿಮ್ಮೆರಡು ಮಕ್ಕಳ್ನ ಇಲ್ಲೇ ದಿನಾ ಊಟಕ್ಕೆ ಕಳುಸರೋ ಅಂದರೆ ಏನಂತೀರಿ ?"

"ಅಂಯಪ್, ತಮಾಸಿ ಮಾಡ್ತೀರಾ ಬುದ್ಧಿ"

"ಇಲ್ಲ ತಿಮ್ಮಯ್ಯ, ದಿಟವಾಗಿಯೂ. ನೋಡು, ನಮ್ಮ ಮನೇಲಿ ಮಲ್ಲಿ ಅಂತ ಮೊಗಾ ಇತ್ತು. ಅದು ಖಾವಂದ್‌ರಿಗೆ ಕೊಟ್ಟುಬುಟ್ವಿ. ಈಗ ನಮಗೆ ಆ ಮೊಗಾ ಮಗ್ಗುಲಲ್ಲಿ ಇಲ್ಲದೆ ಗಂಟಲಲ್ಲಿ ತುತ್ತೇ ಇಳಿಯೋಕಿಲ್ಲಾ ! ಇನ್ಯಾವುದಾದರೂ ಮಕ್ಕಳು ತಂದಿಟ್ಟುಕೋಬೇಕು. ಹೊರಗಿಂದು ಏಕೆ, ನಿಮ್ಮೋವೇ ಆಗಲಿ ಅಂತ."

"ಅಂದರೆ ನಾವು ಬುದ್ಧಿ ?"

"ನೀವು ಇಲ್ಲೇ ಇರುತೀರಲ್ಲೋ ? ಎಲ್ಹೋಯ್ತೀರಿ ? ದಿನಾ ಮಕ್ಕಳು ಅಲ್ಲಿ ನಿಮ್ಮನೇಲಿ ಆಡಿಕೊಂಡಿರೋದು ಇಲ್ಲೇ ಆಡಿಕೊಂಡಿರಲಿ ಅಂತಾ !"

ಕೆಂಪಿಯು ತಿಮ್ಮಯ್ಯನೇನೆಂದಾನೋ ಅಂತ ಗಾಬರಿಯಾದಳು. ಅವನು ಆಗುವುದಿಲ್ಲ ಎಂದರೆ ಏನುಗತಿ ಎಂದು ಅವಳಿಗೆ ಎದೆ ನಡುಗಿತು. ಮಲ್ಲಣ್ಣನಿಗೆ ಅಷ್ಟು ಇಲ್ಲದಿದ್ದರೂ, ನೀರು ನುಂಗುವಷ್ಟಾದರೂ ಆಯಿತು.

ತಿಮ್ಮಯ್ಯನು ಒಂದುಗಳಿಗೆ ಯೋಚಿಸಿ "ನೀವು ಏಳಿದಂಗೇ ಆದರೆ ನಮ್ಮ ತಿಮ್ಮಪ್ಪ ಒಲಿದಾ ಅಂತಲೇ ಆಯ್ತು ಬುದ್ಧಿ ! ನಾನೇನೋ ನಿಮ್ಮ ಪಾದದಲ್ಲೇ ಬಿದ್ದಿವ್ನಿ. ನನ್ನದೇನಿಲ್ಲ ? ಆದರೆ, ಎತ್ತೊಟ್ಟ್ಳ್ನ ಕೇಳದೆ ಎಂಗೇಳ್ಲಿ ಬುದ್ಧಿ" ಎಂದನು.

ಕೆಂಪಿಗೆ ಅವಸರ. "ಕೇಳಿಕೊಂಡೇ ಬಂದುಬುಟ್ಟರೆ ? ನಿನ್ನೆಂಡ್ತಿ ಎದ್ದಿಲ್ವಾ ?" ಎಂದಳು.

ತಿಮ್ಮಯ್ಯನು ಬಾಗಿಲಲ್ಲೇ ನಿಂತು "ಇತ್ತ ಬಂದೀಯಾ ಅಂತೀನಿ." ಅಂದನು.

"ಮಕ್ಕಳು ಮನಗಿಸ್ತೀದೀನಲ್ಲಾ ?" ಉತ್ತರ ಬಂತು.

"ಇನ್ನೂ ಎದ್ದವೆಯಾ ?"

"ಯಾಕೋ ಮಲಗಲೇ ಒಲ್ಲೋ !"

"ಒಳ್ಳೇದೇ ಆಯಿತು. ಅವರ್‍ನೂ ಕರಕೊಂಡು ಜಟ್ಟನೆ ಬಾ !"

ರಂಗಿಯು ಎರಡು ಮಕ್ಕಳ್ನೂ ಕರೆತಂದಳು.

ಕೆಂಪೀಗೆ ಆ ಮಕ್ಕಳ್ನ ಹಾಗೆ ಬರಸೆಳೆದು ತಬ್ಬಿಕೊಳ್ಳಬೇಕು ಎನ್ನಿಸಿತು. ಆದರೆ ಇಷ್ಟು ದಿನವೂ ಇಲ್ಲದ ಪ್ರೇಮ ಈಗೇಕೆ ? ಎಂದು ಸುಮ್ಮನಾದಳು. ಆಗಾಗ ಮಕ್ಕಳಿಗೇ ನೇರವಾಗಿ, ಇನ್ನೊಂದೊಂದು ಸಲ ತಾಯಿಯ ಹಸ್ತ, ತಿಂಡಿ ಸಿಕ್ಕುತ್ತಿತ್ತು. ಈಗಲೂ ಏನಾದರೂ ಕೊಡಬೇಕೆಂದು ಒಳಕ್ಕೆ ಹೋಗಿ ನೋಡಿದಳು. ಒಂದಷ್ಟು ಹುರಿ ಗಾಳು ಇತ್ತು. ಇನ್ನೇನೂ ಇಲ್ಲವಲ್ಲ ಎಂದು ನೊಂದುಕೊಂಡು ತಿರು ಗಿದಳು. ಹೆಪ್ಪು ಇದ್ದ ಮಡಕೆ ನೆಲುವಿನಮೇಲೆ ಕಾಣಿಸಿತು. ಒಂದು ರೆಪ್ಪೆ ಹೊಯ್ಯುವಷ್ಟು ಹೊತ್ತು ಹಾಕಿದ ಹೆಪ್ಪು ಒಡೆಯುವುದೇ ಎನ್ನಿ ಸಿತು. ಮಕ್ಕಳಿಗಿಲ್ಲದ್ದು ಮತ್ತಿಯಾರಿಗೆ ಎಂದುಕೊಂಡು, ಆ ಹೆಪ್ಪು ಹಾಕಿದ್ದ ಹಾಲನ್ನೇ ಎರಡು ಬಟ್ಟಲಲ್ಲಿ ತೆಗೆದುಕೊಂಡು ಮಡಲಲ್ಲಿ ಹುರಿಗಾಳು ತುಂಬಿಕೊಂಡು ಬಂದಳು. ಅವರಿಬ್ಬರಿಗೂ ಒಂದೊಂದು ಹಿಡಿಕೊಟ್ಟು ಮಿಕ್ಕುದನ್ನು ರಂಗಿಯ ಮಡಲಿಗೆ ಹಾಕಿ "ನಿನ್ನ ಗಂಡನಿಗ್ಗಾ ಕೊಡು" ಎಂದು, ಮಕ್ಕಳಿಗೆ ಎರಡು ಬಟ್ಟಲು ಹಾಲು ಕೊಟ್ಟಳು. ಮಕ್ಕಳು ಹಾಲು ಕುಡಿದು ಹುರಿಗಾಳು ತಿನ್ನುತ್ತಾ ಕುಳಿತರು.

ತಿಮ್ಮಯ್ಯನು "ತಾವೇ ಕೇಳಿ ಬುದ್ಧಿ" ಎಂದನು.

"ಹಾ ! ಉಂಟಾ ! ನೀನು ಕೇಳು ಅವಳು ಹೇಳ್ಲಿ"

"ನೋಡಮ್ಮೀ ಬುದ್ಧಿಯೋರ ಮಾತ ಕೇಳ್ದ್ಯಾ."

"ಏನು ?"

"ಇನ್ನುಮೇಲೆ ದಿನಾ ಈ ಮಕ್ಕಳು ಇಲ್ಲೇ ಉಣ್ಣೋಕೆ ಬರಲಿ ಅಂತಾರೆ"

"ನಮ್ಮಗತಿ ?"

"ನೀವು ನಿಮ್ಮನೇಲಿ ಉಂಡುಕೊಳ್ಳಿ"

"ಮಕ್ಕಳು ಬಿಟ್ಟು ನಾವು ದೈಯ್ಯಗಳಂಗೆ ಉಂಡ್ಕೊಳ್ಳೋದಾ ?"

"ಅಲ್ಲಕಣಮ್ಮಿ ನಿಂಗೆ ಅಷ್ಟುಕಮ್ಮಿ ಆದರೆ, ನೀನೂ ಉಣ್ಣೋ ವಾಗ ಒಂದೊಂದು ತುತ್ತಿಡು."

"ಅದೇನು ನೀವೇಳೋದು ? ನಂಗೆ ತಿಳಿಯೋಕೇ ಇಲ್ಲವಲ್ಲಾ ? ನಮ್ಮಕ್ಕಳ್ಗೆ ಇವರ್ಯಾಕೆ ಉಣ್ಣೋಕಿಡೋದು ? ."

"ಏ ಮೊಂಕುಮೊಂಕಾಗಿ ಮಾತಾಡಬೇಡ. ಬುದ್ಧಿಯೋರು ನಿನ್ನ ಮಕ್ಕಳು ಮಾರು ಅನ್ನಿಲ್ಲ. ಅವರಿಗೆ ಮಕ್ಕಳು ಕಂಡರಾಸೆ, ಅದಕೆ ಇಲ್ಲೀಗೆ ಊಟಕ್ಕೆ ಬರಲಿ ಅಂದರು."

"ಮೊದಲೇ ಏಳ ಬೇಡವಾ ಬುದ್ಧಿ – ಇಂಗೇ ಇವರು ಇಲ್ಲದ ತೀಟೆ ಮಾಡೋದು. ಈಗದಕೇನು ? ನೀವೇ ಆಗಬೋದು ಅಂದಿದ್ದರೆ ಆಗುತಿರಲಿಲ್ವಾ. ನನ್ಯಾಕ್ಕೆ ಕರೀಬೇಕಿತ್ತು ? "

"ಸರೀ ಬುದ್ಧಿ. ನಾವು ಉಣ್ತಿರೋದೂ ನಿಮ್ಮ ಅನ್ನಾನೇ ! ನಮ್ಮಕ್ಕಳು ಉಣ್ತಿರೋದೂ ನಿಮ್ಮ ಅನ್ನಾನೇ, ಅಲ್ಲಿ ಉಣ್ಣೋಬದಲು, ಇಲ್ಲೇ ಉಂಡ್ಕೊಳ್ಲಿ, ನಾ ಏಳಿದ್ದು ಸರಿಯಾ ಎಣ್ಣೇ ? "

"ಮಲಗೋದು ಮಾತ್ರ ಅಲ್ಲೇ ! "

"ಆಗಲೇಳು."

ಮರು ದಿನದಿಂದ ಕೆಂಪಿಯು ಆ ಇಬ್ಬರು ಮಕ್ಕಳಿಗೆ ಸ್ನಾನ ಮಾಡಿಸುವಳು. ತಲೆ ಬಾಚುವಳು. ಊಟಕ್ಕೆ ಬಡಿಸುವಳು. ಅಂತೂ ಒಂದು ಮಗುವಿಗೆ ಬದಲಾಗಿ ಎರಡು ಮಕ್ಕಳಿಗೆ ಸೇವೆ ಮಾಡು ವುದಕ್ಕೆ ಆರಂಭಿಸಿದಳು.

ಅದೇ ಮನುಷ್ಯ ಸ್ವಭಾವವಿರಬೇಕು. ತನಗೆ ಬೇಕಾದ ಒಂದು ಇಲ್ಲದಿದ್ದರೆ, ಅದನ್ನು ಪಡೆಯುವುದು ಅಸಾಧ್ಯವೆನ್ನಿಸಿದರೆ, ಅದಕ್ಕೆ ಪ್ರತಿಯಾಗಿ ಮತ್ತೊಂದನ್ನು ಇಟ್ಟುಕೊಂಡು, ಅದೇ ಇದು ಎಂದು ಕೊಳ್ಳುವುದು.

ನದಿಯಲ್ಲಿ ಹರಿದು ಮುಂದೆ ಹೋದ ನೀರಿನ ಎಡೆಯನ್ನು ಹಿಂದಿನಿಂದ ಬಂದ ನೀರು ಹಿಡಿಯುತ್ತದೆ. ಮೇಲಿನಿಂದ ನೋಡು ವವರಿಗೆ, ನದಿಯಲ್ಲಿಳಿದಿರುವವರಿಗೆ, ಎಲ್ಲರಿಗೂ ಹೊಸ ನೀರು ಬರುತ್ತಿ ರುವುದು ಕಾಣಿಸುತ್ತದೆ: ಗೊತ್ತಿದೆ. ಆದರೂ ಅದನ್ನು ಹಳೆಯ

ದೆಂದೇ, ಹಳೆಯದೂ ಹೊಸದೂ, ಒಂದೇ ಎಂದೇ ಭಾವಿಸುವುದೇ ಅಭ್ಯಾಸ.

ಕೆಂಪಿಗೂ ಹಾಗೆಯೇ ಆಯಿತು. ಮಲ್ಲಿಗೆ ಬದಲಾಗಿ ಮಲ್ಲಿ ಬೇಕಾಗಿ, ಒಂದಕ್ಕೆರಡು ಬಂದಾಗ ಮನಸ್ಸಿಗೆ ಏನೋ ಒಂದಿಷ್ಟು ಆಪ್ಯಾಯನವಾಯಿತು ನಿಜ. ಮಾದಿಯನ್ನು ಚಿಕ್ಕಮಲ್ಲಿ ಎಂದು ಕರೆದಾಗ ಅವಳಿಗೆ ಇನ್ನೂ ಆಪ್ಯಾಯನವಾಯಿತು. ಅದೂ ನಿಜ. ಆದರೂ, ಚಿಕ್ಕಮಲ್ಲಿಯನ್ನು ಕರೆಯುವಾಗಲೆಲ್ಲ ಎಲ್ಲೋ ದೂರದಲ್ಲಿರುವ ಮಲ್ಲಿಯ ನೆನೆಪು ಮಾತ್ರ ಬರದೆ ಇರುತ್ತಿರಲಿಲ್ಲ.

ಮಲ್ಲಣ್ಣ ಹೆಂಡತಿಯ ಮನಸ್ಸನ್ನು ಬಲ್ಲ: ಗಾಯವಿರುವುದು ಗೊತ್ತು. ತನ್ನ ಮನಸ್ಸಿನಲ್ಲಿರುವ ನೋವೂ ಕಳೆದು ಕೊಳ್ಳಲಾರ. ಆದರೂ ತೇಪೆ ಹಾಕುವುದಕ್ಕೆ ಬಲು ಬಲು ಯತ್ನ ಮಾಡುತ್ತಿದ್ದ.

## ೧೯

ಶಂಭುರಾಮಯ್ಯನು ರಸಿಕ. ಅವನಿಗೆ ಜರ್ದಾ ಎಂದರೆ ಪ್ರಾಣ. ಅಡಕೆಲೆ ಇಲ್ಲದಿದ್ದರೂ ಬಾಯಲ್ಲಿ ಒಂದು ಚೂರು ಜರ್ದಾ ಇರಬೇಕು. ಅದೇ ಜರ್ದಾನೇ ಅವನಿಗೆ ಮಲ್ಲಣ್ಣನ ಸ್ನೇಹವನ್ನು ಸಂಪಾದಿಸಿ ಕೊಟ್ಟದ್ದು. ತಿಮ್ಮಯ್ಯನು ಹೊಸ ಬುದ್ಧಿಗಳನ್ನು ತೋರಿಸಿದ. ಮಲ್ಲಣ್ಣನಿಗೆ ಕೊಳ್ಳೇಗಾಲದ ಆಚೆ ಕಾವೇರೀ ನದಿಯ ಹತ್ತಿರ ಮಠದಲ್ಲಿದ್ದ ಸ್ವಾಮಿ ಶಿವರಾಮಯ್ಯ ಇವನೇ ಇರಬಹುದೆ? ಎಂದು ಅನುಮಾನವಾಯಿತು. ಆದರೂ ಕೇಳಲಿಲ್ಲ.

ಶಂಭುರಾಮಯ್ಯನ ಹೆಂಡತಿ ಆನಂದಮ್ಮನು ಮದರಾಸಿನವಳು. ಅವಳು ಥಿಯೋಸಫಿಯ ಪ್ರಭಾವಕ್ಕೆ ಒಳಗಾಗಿ ಬಾಲ್ಯ ವಿವಾಹವನ್ನು ನಿರೋಧಿಸಿದ್ದಳು. ಆಕೆಗೆ ದಿನವೂ ಧ್ಯಾನ ಜಪ ಮೊದಲಾದವುಗಳನ್ನು ಮಾಡುವುದರಲ್ಲಿ ಆಸಕ್ತಿ. ಜೊತೆಗೆ ಏನಾದರೂ ಲೋಕೋಪಕಾರ

ಮಾಡಬೇಕೆಂದು ಆಸೆ.

ಶಂಭುರಾಮಯ್ಯನು ಅವಳಿಗೆ ಗಂಟು ಬಿದ್ದುದು ವಿಚಿತ್ರವಾದ ಸಂದರ್ಭದಲ್ಲಿ. ಸುಮಾರು ಹದಿನೈದು–ಇಪ್ಪತ್ತುವರ್ಷದ ಕೆಳಗೆ ಅವನು ಮದರಾಸಿಗೆ ಹೋಗಿದ್ದ. ಮೈಸೂರಿನಲ್ಲಿ ಪ್ರಸಿದ್ಧಳಾದ ಒಬ್ಬಳು ಸಂಗೀತಗಾರಳು ಮದರಾಸಿಗೆ ಬಂದಿದ್ದಾಗ ಅವಳ ಸಂಗೀತ ಕೇಳಿ ಆನಂದಮ್ಮನು ಅವಳ ಸ್ನೇಹಿತೆಯಾಗಿದ್ದಳು. ಶಂಭುರಾಮಯ್ಯನಿಗೂ ಸಂಗೀತಗಾರಳಿಗೂ ಏನೋ ಸಂಬಂಧವಿತ್ತೆಂದು ವದಂತಿ. ಸಂಗೀತ ಗಾರಳ ಮನೆಗೆ ಶಂಭುರಾಮಯ್ಯ ಹೋಗಿ ಇಳಿದುಕೊಂಡ. ಅಲ್ಲಿ ಸಂಗೀತಗಾರಳ ಬುದ್ಧಿವಂತಿಕೆಯೋ ಆನಂದಮ್ಮನ ಅವಿವೇಕವೋ, ಅವನ ಆಸೆಯೋ ಅಂತೂಇಂತೂ ಬೆಟ್ಟದ ನೆಲ್ಲಿಕಾಯಿಗೂ, ಘಟ್ಟದ ಉಪ್ಪಿಗೂ ಸಂಬಂಧ ಬಿದ್ದಂತೆ ಇಬ್ಬರಿಗೂ ತೆಕ್ಕೆಬಿತ್ತು.

ತೆಕ್ಕೆ ಬಿಚ್ಚಬೇಕೆಂದು ಇಬ್ಬರೂ ಒದ್ದಾಡಿದರೂ ಆಗಲಿಲ್ಲ. ಒಂದು ಮಗುವಾದಹಾಗೆ, ಆ ಮಗುವನ್ನು ಇಟ್ಟುಕೊಳ್ಳಲಾರದೆ ಯಾರಿಗೋ ಕೊಟ್ಟುಬಿಟ್ಟಹಾಗೆ, ಅದೇ ಕಾರಣವಾಗಿ ಇಬ್ಬರಿಗೂ ವಿಯೋಗ ವಾಗಿದ್ದು ಮತ್ತೆ ಗಂಟುಬಿದ್ದಹಾಗೆ, ಅವರ ಮಾತಿನಲ್ಲಿ ಆಗಾಗ ತೇಲು ತ್ತಿತ್ತು. ಎರಡನೆಯ ಸಲ ಸೇರಿದಾಗ, ಮೊದಲಿನ ಕಹಿ ಅಷ್ಟು ಕಡಿಮೆಯಾಗಿ ಕೊನೆಗಿಬ್ಬರೂ ಒಂದು ಮಠಕಟ್ಟಿಕೊಂಡು ಮೈಸೂರಿನಲ್ಲಿ ನಿಂತಿದ್ದರು. ಅವಳಿಗೆ ಒಂದಷ್ಟು ಗೆಪ್ಪೆಯಿತ್ತು. ಅದು ಕರಗದಹಾಗೆ, "ರೊಟ್ಟಿ ತೊಳೆದುಕೊಂಡು ನೀರು ಕುಡಿಯುತ್ತ" ಇಬ್ಬರೂ ಸಂಸಾರ ವನ್ನು ಸಾಗಿಸಿದ್ದರು.

ಆನಂದಮ್ಮನು ದಿನವೂ ಸಂಜೆ ಪುರಾಣವನ್ನು ಹೇಳುವಳು. ಮಧ್ಯಾಹ್ನ ನಾಲ್ಕು ಗಂಟೆಯಿಂದ ಆರು ಗಂಟೆಯವರೆಗೆ ಪುರಾಣವಾಗು ವುದು. ಏನೋ ಸತ್ಕಾಲಕ್ಷೇಪವೆಂದು ಅವರೂ ಇವರೂ ಬರುವರು. ಬಂದವರು ಬರಿಯ ಕೈಯಲ್ಲಿ ಬರುತ್ತಿರಲಿಲ್ಲ. ಹಾಗೂ ಹೀಗೂ ಅವರ ಮಠದಲ್ಲಿ ತಿಂಗಳಿಗೊಮ್ಮೆಯಾದರೂ ಸಮಾರಾಧನೆಯಾಗುವುದು. ಆಗ ಎಲ್ಲರೂ ಸೇರುವರು.

ಶಂಭುರಾಮಯ್ಯನ ಹರಟೆಯೋ ಹರಟೆ. ಅವನು ಉತ್ತರ

ದೇಶದಲ್ಲಿ ಎಂದು ಷುರು ಮಾಡಿದರೆ ಮುಗಿಯುವುದಕ್ಕೆ ಒಂದು ಗಂಟೆ ಆಗಬೇಕು. "ನೋಡಿ, ಕಾಶಿಗಿಂತ ಇನ್ನು ಇಲ್ಲವಲ್ಲ. ಅಲ್ಲಿಯೂ ಅಷ್ಟೆ! ವಿದ್ವಾಂಸರು, ಎಂತಹ ವಿದ್ವಾಂಸರು ಅಂತೀರಿ, ಘನ ವಿದ್ವಾಂಸರು. ನಮ್ಮ ದೇಶದವರು ಆಡಾದರೆ, ಅವರು ಆನೆ. ಅಷ್ಟು ಭಾರಿ ವಿದ್ವಾಂಸರೂ ಗಾಂಜಾ, ಅಫೀಮು, ರಾಮರಸ ಹೊಡೆದು ಬಿಡುತ್ತಾರೆ ಅಂದರೆ! ಅದೆಷ್ಟಾಗಲಿ, ಜ್ಞಾನ ಭೂಮಿ. ಇದೆಷ್ಟಾಗಲಿ ಕರ್ಮಭೂಮಿ – ನಿಮ್ಮ ಜಾತಿ ಜಾತಿಗಳ ಹೋರಾಟವೆಲ್ಲ ಈ ದಕ್ಷಿಣ ದಲ್ಲೇ! ಕನಕದಾಸರು ಅಷ್ಟಿಲ್ಲದೇ ಹೇಳಿದರೆ! 'ಕುಲ ಕುಲವೆನ್ನುತಿ ಹರಯ್ಯ! ಕುಲವಾವುದು ನಮ್ಮ ಶ್ರೀ ಹರಿಭಕ್ತರಿಗೆ' ಎನ್ನುವನು. ಅವನ ವಾಚಾಳತ್ವನೋಡಿ ಅನೇಕರು "ನೀವೇಕರಿ ಹರಿಕಥೆ ಮಾಡ ಬಾರದು." ಎನ್ನುವರು. "ಇರಲಿ, ಕಾಲ ಬರುತ್ತೆ" ಎನ್ನುವನು. ಅವನಿಗೂ ಎಷ್ಟೋವೇಳೆ ಅನ್ನಿಸಿತ್ತು. ಆದರೆ ಆಗಲಿ ಏನವಸರ ಎನ್ನುವ ಸ್ವಭಾವ.

ಅಂತೂ ಅವನು ದಿನವೂ ಪತ್ರಿಕೆ ಓದುವನು. ಮೈಸೂರಿನ ಸಾಧ್ವಿ, ವೃತ್ತಾಂತ ಪತ್ರಿಕೆಗಳಿರಲಿ, ಪೂನಾದ ಕೇಸರಿ, ಅಲಹಾಬಾದಿನ ಆಜ್, ಕೂಡ ತರಿಸುವನು: ಓದುವನು: ತಾನು ಓದಿದ್ದು ಎಲ್ಲರಿಗೂ ಹೇಳಬೇಕು ಎಂದು ಅವನಿಗೂ ಆಸೆ. ಆ ಆಸೆ ಒಂದೊಂದು ಸಲ ಫಲಿಸುತ್ತಿತ್ತು.

ಒಂದು ದಿವಸ ಅವನು ತಿಲಕರ ವೃತ್ತಾಂತ ಹೇಳುವುದಕ್ಕೆ ಆರಂಭಿಸಿದ್ದಾನೆ. ಅವರು ಗೀತೆಯನ್ನು ಎಲ್ಲರೂ ಓದಬೇಕು ಎನ್ನು ತ್ತಾರೆ. "ಗೀತೆ ಓದಿದರೆ ಮರಣದಭಯ ತಪ್ಪುತ್ತದೆ. ಮನುಷ್ಯನು ಧೀರನಾಗುತ್ತಾನೆ" ಎಂದು ಹೇಳುತ್ತಿದ್ದಾನೆ. ಒಬ್ಬನು ಎದ್ದು "ಏನು ಸ್ವಾಮಿಗಳೇ! ಗೀತೆ ಯಾವಾಗಲೂ ಮಡಿಯಲ್ಲಿ ಓದಬೇಕು. ಅದಕ್ಕೆ ಉಪದೇಶವಾಗಬೇಕು, ಅಂತಾರಲ್ಲ?" ಎಂದು ಕೇಳಿದ. ಅದಕ್ಕೆ ಸರಿಯಾಗಿ ಏನು ಹೇಳಬೇಕೋ ತಿಳಿಯಲಿಲ್ಲ. ಆದರೂ ಅಲ್ಲಿಗೇ ಬಿಟ್ಟರೆ ತನಗೆ ಅವಮಾನ ಎಂದು, ಏನೋ ಒಂದು ಭಿರ್ರ್ಕಾ ಹೊಡೆದ: "ನೋಡಿ. ಗೀತಾ ಅನ್ನೋದು ರುದ್ರಾಕ್ಷಿ ಹಾಗೆ. ಅಥವ ವೀರ

ಶೈವರ ಲಿಂಗದ ಹಾಗೆ. ಅವರು ಹೇಳುವಂತೆ ಲಿಂಗ ಯಾವಾಗಲೂ ಅಂಗದಲ್ಲಿ ಇದ್ದೇ ಇರಬೇಕು ಎನ್ನುವಂತೆ ಗೀತಾ ಯಾವಾಗಲೂ ನಿಮ್ಮ ಹೃದಯದಲ್ಲಿ ಇರಲೇಬೇಕು" ಎಂದ.

ಪ್ರಶ್ನೆ ಕೇಳಿದವನಿಗೂ ಅದು ಸರಿಯೋ ತಪ್ಪೋ ಗೊತ್ತಿಲ್ಲ. ಇನ್ನು ಮುಂದೆ ಕೇಳಿದರೆ ತನ್ನ ಅಜ್ಞಾನ ಎಲ್ಲಿ ಪ್ರಕಟವಾಗುತ್ತೋ ಅಂತ "ಅಹಹಾ! ಎಂಥಾ ಮಾತು! ಎಂಥಾ ಮಾತು! ತಾವು ಹೇಳಿದ್ದು ಬಹಳ ಸರಿ ಬಹಳ ಸರಿ," ಎಂದು ಶರಣು ಮಾಡಿ ಕೂತು ಬಿಟ್ಟ.

ಅಂದಿನಿಂದ ಶಂಭುರಾಮಯ್ಯನ ಕೀರ್ತಿ ಹೆಚ್ಚಿತು. ಸಂಜೆ ಆರು ಗಂಟೆಯಿಂದ ಎಂಟು ಗಂಟೆಯವರೆಗೂ ಸುತ್ತಮುತ್ತಿನವರೆಲ್ಲರೂ ಅಲ್ಲಿಗೆ ಬಂದು ಹರಟೆ ಹೊಡೆಯುವರು. ಅದರೆ ಶಂಭುರಾಮಯ್ಯನ ಹರಟೆ ಪೇಪರುಗಳಿಗೆ ಹೆಚ್ಚು ಸಂಬಂಧ ಪಟ್ಟುದು. ಅಲ್ಲಿ ಹೀಗಂತೆ, ಇಲ್ಲಿ ಹೀಗಂತೆ, ಎನ್ನುವುದೇ ಹೆಚ್ಚು.

ಮಲ್ಲಣ್ಣನು ಅಲ್ಲಿಗೆ ಹೋಗುವುದಕ್ಕೆ ಆರಂಭಿಸಿದ. ಮೊದಮೊದಲು ಸುಮ್ಮನಿರುತ್ತಿದ್ದವನು ಬರುಬರುತ್ತಾ ಹೊಸ ನೆಲದಲ್ಲಿ ಹಾಕಿದ ಗಿಡದಂತೆ ಮೆಲ್ಲಗೆ ಚಿಗುತುಕೊಂಡ. ಇವನ ಹರಟೆಗೂ ಅಲ್ಲಿ ಒಂದು ಸ್ಥಾನ ಸಿಕ್ಕಿತು. ಶಂಭುರಾಮಯ್ಯನ ಪೇಪರ್ ಹರಟೆ ಜೊತೆಗೆ ಮಲ್ಲಣ್ಣನ ತತ್ತ್ವದ ಹರಟೆಯೂ ಆರಂಭವಾಯಿತು. ಯಾವಾಗಲೂ ನಿಜಗುಣರು, ಚಿದಾನಂದರು, ಸಪ್ಪಣ್ಣನವರು, ಇವರುಗಳ ಯಾವುದಾದರೂ ಒಂದು ತತ್ತ್ವ ಹಾಗೆನ್ನುವನು. ಸೇರಿದ್ದ ಜನ ಅರ್ಥವಾಗಲಿ, ಅರ್ಥವಾಗದಿರಲಿ, ಭೇಷ್ ಭೇಷ್ ಎಂದು ತಲೆದೂಗುವರು.

ಬರುಬರುತ್ತ ಮಲ್ಲಣ್ಣನೂ ಶಂಭುರಾಮಯ್ಯನೂ ಬಹಳ ಸ್ನೇಹಿತರಾದರು. ಇಬ್ಬರ ಸ್ನೇಹವೂ ಬಲಿತು ಕೆಂಪಮ್ಮ ಆನಂದಮ್ಮ ಇಬ್ಬರೂ ಇವರ ಮನೆಗೆ ಅವರು ಅವರ ಮನೆಗೆ ಇವರು ಬಂದು ಹೋಗುವಂತೂ ಆಯಿತು.

ಒಂದು ದಿನ ಅವರು ಸಂಜೆ ಪುರಾಣ ಮುಗಿಸಿದ ಮೇಲೆ "ಬನ್ನಿ ನಮ್ಮ ಮನೆಗೆ ಹೋಗೋವ" ಎಂದು ಕೆಂಪಿಯು ಆನಂದಮ್ಮನನ್ನು

ಕರೆದಳು.

" ಎಲ್ಲಮ್ಮಾ? ರಾತ್ರಿ ಅಡುಗೆ ಆಗ ಬೇಡವೆ ? "

" ಆಯ್ತದೆ. ತಪ್ಪಿದ್ದು ಯಾವೊತ್ತು ? ಬನ್ನಿ. ಅಡಕೆಲೆ ತಕೊಂಡು ಬರೋರಂತೆ ! "

ದಾರಿಯಲ್ಲಿ ಹೋಗುತ್ತ ಕೆಂಪಿಯು ಕೇಳಿದಳು. " ಏನವ್ವಾ ನಿಮಗೆ ಮಕ್ಕಳಾಗಲಿಲ್ಲವಾ ? "

ಆನಂದಮ್ಮನಿಗೆ ಆ ಪ್ರಶ್ನೆಗೆ ಉತ್ತರ ಥಟ್ಟನೆ ಹೇಳಲಾಗಲಿಲ್ಲ. ಒಂದು ಗಳಿಗೆ ತಡೆದು ಹೇಳಿದಳು : " ಅದೆಲ್ಲ ಯಾಕೆ ಕೇಳುತ್ತೀರಿ ಕೆಂಪಮ್ಮ ! ಇದ್ದಿದ್ದರೆ ನನಗೂ ಒಂದು ಹೆಣ್ಣು ಮಗು ಸುಮಾರು ಹತ್ತು ವರುಷದ್ದು ಇರಬೇಕಾಗಿತ್ತು. ಏನೋ ಹಣೆಯಲ್ಲಿ ಬರೆಯಲಿಲ್ಲ ! ಏನು ಮಾಡೋದು ? "

" ಅಂದರೆ ಹೋಗಿ ಬುಡುತಾ ? "

" ಅಯ್ಯೋ ಪಾಪ ! ಎಲ್ಲಾದರೂ ಚೆನ್ನಾಗಿರಲಿ. ಆಗ ಹೆರಿಗೇಲಿ ಕಷ್ಟವಾಯಿತು. ನನಗೆ ಹುಷಾರಾಗೋಕೆ ಎರಡು ಮೂರು ತಿಂಗಳಾಯಿತು. ಅದುವರೆಗೂ ಯಾರ ಹತ್ತಿರಲೋ ನೋಡಿಕೊಳ್ಳೋಕೆ ಅಂತ ಮಗು ಬಿಟ್ಟಿದ್ದೆ. ಅವರು ರಾಮೇಶ್ವರದ ಯಾತ್ರೆ ಹೋಗಿ ಬರುತ್ತೀವಂತ ಹೋಗುವಾಗ ಮಗೂನೂ ಕರೆದುಕೊಂಡು ಹೋದರು. ಅದನ್ನು ಮತ್ತೆ ನಮಗೆ ಕೊಡಲೇ ಇಲ್ಲ. ನಾವೂ ಯತ್ನವಿಲ್ಲದೆ ಉತ್ತರ ದೇಶಕ್ಕೆ ಹೋಗಬೇಕಾಗಿ ಬಂತು. ಏನೇನೊ ಆಯಿತು. ನಮಗೆ ಮತ್ತೆ ಮಗು ಕೈಗೆ ಸಿಕ್ಕಲೇ ಇಲ್ಲ."

ಕೆಂಪಮ್ಮ ಸಹಜವಾಗಿ ಕೇಳಿದಳು : " ಹಿಂಗೂ ಉಂಟಾ ? " ಆನಂದಮ್ಮನಿಗೆ ತನ್ನ ಮಾತಿನ ಸುಳ್ಳು ಅವಳಿಗೂ ಗೊತ್ತಾಯಿತೋ ಏನೋ ಅನ್ನಿಸಿ ಹೇಳಿದಳು : " ನಾವೂ ಪೋಲೀಸಿಗೆ ಹೇಳೋಣ ಅಂದು ಕೊಂಡೆವು. ಆದರೆ, ಅವರು ನಮಗೆ ಮಾಡಿದ ಉಪಕಾರಕ್ಕೆ ನಾವು ಅವರನ್ನು ಕೋರ್ಟಿಗೆಳೆಯುವುದು ಬೇಡ. ಒಂದು ಕೊಟ್ಟ ದೇವರು ಇನ್ನೊಂದು ಕೊಡಲಾರನೇ ಎನ್ನಿಸಿತು. ಸುಮ್ಮನಾದೆವು."

" ನಮ್ಮದೂ ಅಂಗೇ ಆಯಿತು ಕಣವ್ವ ! ಏನೋ ಹೊಟ್ಟೇ

ಲಂತೂ ಇಲ್ಲ. ಓಗಲಿ ಅಂತ ಒಂದು ಮೊಗಾ ತಕೊಂಡು ಸಾಕದೋ. ಆ ಮೊಗಾನಾದರೂ ಮೊಗವಲ್ಲ ಕಣವ್ವ, ಅದರ ಮಾತೋ? ಬುದ್ಧಿಯೋ? ರೂಪಾವೋ? ಒಂದೊಂದಾ? ಅದೇಳ ಬೇಕೂಂದ್ರೆ ಒಂದು ದಿನವೆಲ್ಲಾ ಬೇಕು. ಏನೋ ದೇವರು ಹೂವಿಲ್ಲ ಅಂದ್ಕೊಂಡರೆ ಮಲ್ಲಿಗೇ ಹೂವೇ ಕೊಟ್ಟಂಗೆ ಆಯಿತು. ಆದರೇನು? ಕೊಟ್ಟ ದೇವರು ಅವಳ...."

ಕೆಂಪಿಯ ಬಾಯಲ್ಲಿ ಮಾತು ಹೊರಡದೇ ಹೋಯಿತು – ಆನಂದಮ್ಮನು "ಏನಾಯಿತಮ್ಮ? ಮಗುವಿಗೆ ಏನಾದರೂ ಕೆಟ್ಟ ದಾಯತೇ?" ಎಂದು ಮರುಕದಿಂದ ಕೇಳಿದಳು.

"ಮೊಗಾ ಏನೋ ಚೆನ್ನಾಗದೆ: ಆದರೆ ನಮಗಿಲ್ಲದೇ ಹೋಯಿತು. ನಮ್ಮ ಖಾವಂದರ ಕಣ್ಣಿಗೆ ಬಿತ್ತು. ಅದ್ನ ಅವರೇ ಮಾಡಿಕೊಂಡೇ ಬುಟ್ಟರು."

"ಅಂದರೆ, ಅವರು ಬಲವಂತ ಮಾಡಿ ಕಿತ್ತುಕೊಂಡು ಬಿಟ್ಟರೆ?"

"ಇಲ್ಲ ಕಣವ್ವ, ಮದುವೇನೆ ಮಾಡಿಕೊಂಡು ಬುಟ್ಟರು. ಮೊಗಾ ಹೆಂಗದೇ ಅಂತೀರಿ. ಚಂದಮಾನು ಅನ್ನಿ. ಮಲ್ಲಿ ಅಂತ ಹೆಸರಿಟ್ಟದ್ದೋ? ಮಲ್ಲಿಗೆ ಮೊಗ್ಗೋ ನಮ್ಮ ಮಲ್ಲೀನೋ? ಒಂದೊಂದು ದಿನ ಹಿತ್ತಲಲ್ಲಿ ಹುಲ್ಲುಮೆದೇಲಿ ಕೂತುಕೊಂಡು ಒಂದು ಹುಲ್ಲುಕಡ್ಡಿ ಕಚ್ಚಿಕೊಂಡು ನನ್ನ ಮೊಗ ತತ್ವ ಹೇಳುತಾ ಒರಗಿ ಕೊಂಡಿದ್ದರೆ, ಎಲ್ಲಿ ನನ್ನ ಮೊಗಕ್ಕೆ ಕಣ್ಣೆಸರಾದೀತೋ ಅನ್ನೋದು ಕಣವ್ವ; ಈಗ ಹದಿನೈದು ದಿನದಲ್ಲಿ ಬಂದಿಮ್ಲ. ಈಸಲ ಬರುತಲೂ ನಿಮ್ಗೆ ತೋರ್ಸ್ತೀನಿ. ಈಸಲ, ಇಲ್ಲಿ ಕನ್ನಂಬಾಡಿ ಕಟ್ಟುತವರಲ್ಲಾ; ನೋಡೋಕೆ ನಮ್ಮ ಖಾವಂದಿರು, ರಾಣಿಯೋರು, ನಮ್ಮಮೊಗಾ, ಎಲ್ಲರೂ ಬರುತಾರೆ. ನಾವೂ ಹೋಯ್ತೀವಿ. ನೀವು ಬನ್ನಿ. ಜೊತೇನೂ ಇದ್ದಂಗಾಯ್ತು; ಕೆಂಪೀಮಾತು ನಿಜವೋ ಸುಳ್ಳೋ ನೀವೇ ಏಳೋರಂತೆ?"

ಮನೆಗೆ ಕರೆದುಕೊಂಡು ಬಂದು ಒಂದು ಗಳಿಗೆ ಕುಳ್ಳಿರಿಸಿ ಕೊಂಡಿದ್ದು ಕೆಂಪಿಯು ಒಂದುಚಿಪ್ಪು ರಸಬಾಳೆಹಣ್ಣು, ಒಂದುಕುಚ್ಚು

ಹೂವ್ವು, ಸೊಗಸಾದ ಎಲೆ ಅಡಿಕೆ, ಎಲ್ಲವನ್ನೂ ಕೊಟ್ಟು ಆನಂದಮ್ಮ ನನ್ನು ಕಳುಹಿಸಿಕೊಟ್ಟಳು.

ಆನಂದಮ್ಮನು ರಸಬಾಳೆಹಣ್ಣು ನೋಡಿ "ಏನು ಕೆಂಪಮ್ಮ? ಈ ಹಣ್ಣು ಎಲ್ಲಿಂದ ತರಿಸಿದಿರಿ?" ಎಂದಳು.

"ಅಂಯ್; ನಾವು ತರಿಸೋದೂ ಉಂಟಾ ಅವ್ವ; ನಮ್ಮ ಮಗಳ ಊರಿಂದ ಖಾವಂದರು ಕಳುಹಿಸಿಕೊಟ್ಟದ್ದು."

ಆನಂದಮ್ಮನಿಗೆ ಮಲ್ಲಿ, ಖಾವಂದರು, ರಾಣಿ ಎಂಬ ಹೆಸರುಗಳು ಗೊತ್ತಾದರೂ ಅವರವರ ಸಂಬಂಧ, ಅವರು ಯಾರು ಎನ್ನುವುದು ಯಾವುದೂ ಗೊತ್ತಾಗಲಿಲ್ಲ. ಕೇಳಬೇಕು ತಿಳಿದುಕೊಳ್ಳಬೇಕು ಎನ್ನುವ ಆಸೆ. ಆದರೂ ಏನೂ ಇಲ್ಲದಂತೆ ಸಮಾಧಾನದಿಂದ "ಹಾಗಾದರೆ ಕನ್ನಂಬಾಡಿಗೆ ಯಾವಾಗ ಹೋಗುತ್ತೀರ?" ಎಂದು ಕೇಳಿದಳು.

"ನಮ್ಮ ಖಾವಂದ್ರು ದಿವಾನರಿಗೆ ಬೋ ಬೇಕಾದವರು ಕಣ್ರವ್ವ; ಅವರು ನೀವು ಖಂಡಿತ ಬರಬೇಕು ಅಂತ ಏಳವ್ರಂತೆ. ಅವರು ಬಂದಾಗ ನಾನೇ ಕರೆಯೋಕೆ ಬತ್ತೀನಿ. ತಾವೂ ಬನ್ನಿ. ಅಯ್ಯನೋರಿಗೂ ಏಳಿರಿ. ಎಲ್ಲರೂ ಓಗೋವ."

"ಹಾಗಂದರೆ ನಿಮ್ಮ ಖಾವಂದ್ರು ಯಾರು?" ಆನಂದಮ್ಮನು ತಡೆಯದೆ ಕೇಳಿಯೇಬಿಟ್ಟಳು.

"ಮಜ್ಜಿಗೇಹಳ್ಳಿ ನಾಯಕರು ಅಂತ ನೀವು ಕೇಳಿಲ್ಲವಾ?"

ಉತ್ತರವಾಗಿ ಬಂದ ಪ್ರಶ್ನೆ ಆನಂದಮ್ಮನಿಗೆ ಏನೋ ನೆನೆಪಿಗೆ ತಂತು. ಆ ನೆನೆಪನ್ನು ಮುಚ್ಚಿಕೊಳ್ಳುವಳಂತೆ "ಹೂಂ. ಅದು ಯಾರೋ ಶ್ರೀಮಂತರು ಆ ಹೆಸರಿನವರು ಇದ್ದಾರಂತೆ, ಕೇಳಿದ್ದೀನಿ."

"ಸೀಮಂತರು? ಚೆನ್ನಾಗಿ ಏಳಿದ್ರಿ? ಅವರ ಮನೇಲಿ ಕೊಳಗದಲ್ಲಿ ಅಳೆಯೋಷ್ಟು ಹಣ ಅದೆ ಕಣವ್ವ; ನಮ್ಮ ಮಲ್ಲೀಗೆ ಎರಡು ಮೂರು ತೊಡವೆ ಒಡವೆ ಇಟ್ಟವ್ರೆ?"

"ಹಾಗಾದರೆ ಮದುವೆ ಮಾಡಿಕೊಂಡರು ಅನ್ನಿ."

ಕೆಂಪೀಗೆ ತನ್ನ ಮಗಳಿಗೆ ಬಂದಿಹಾಕಿದರು ಎನ್ನುವುದು ಇಷ್ಟವಿಲ್ಲ. ಆದರಿಂದ "ಹೂಂ." ಎಂದಳು. ನಂಬಿಕೆ ಬರಲೆಂದೋ ಏನೋ ನಕ್ಕಳು.

"ಹಾಗಾದರೆ ಆ ಮೊಗುವಿಗೆ ಎಷ್ಟು ವರುಷ ?"

"ಹತ್ತು ತುಂಬ್ತದೆ ಅನ್ನಿ."

ಆನಂದಮ್ಮನು ಆ ಮಾತು ಕೇಳಿ ಉರಿಉರಿಯಾಗಬೇಕಾಗಿತ್ತು. ಮಜ್ಜಿಗೆಪಳ್ಳಿ, ಹತ್ತುವರುಷ, ತಕೊಂಡಮಗು, ಎಂಬ ಆ ಮಾತುಗಳೆಲ್ಲಾ ಏನೇನೋ ಯೋಚನೆಗಳನ್ನು ತಲೆಗೆ ತುಂಬಿದಂತಾಗಿ, "ಇನ್ನು ಹೊತ್ತಾಯಿತು. ಇನ್ನೊಂದು ದಿವಸ ಮಾತಿಗೆ ಕುಳಿತುಕೊಳ್ಳೋಣ" ಎಂದು ಅವಸರ ಅವಸರವಾಗಿ ಹೊರಟು ಹೋದಳು.

ಯಾವನಾದರೂ ಮನಶ್ಶಾಸ್ತ್ರಜ್ಞನಿದ್ದಿದ್ದರೆ, ಆಕೆಯ ಅವಸರದಲ್ಲಿ ಏನೇನು ಕಂಡು ಹೇಳುತ್ತಿದ್ದನೋ ?

ಆನಂದಮ್ಮನು ಹೋದ ಅಷ್ಟು ಹೊತ್ತಿಗೆ, ಮನವಾರ್ತೆ ನಂಜಪ್ಪನು ಉಗ್ರಾಣದ ಗಾಡಿಯನ್ನು ಹೊಡೆಯಿಸಿಕೊಂಡು ಬಂದನು. "ಬೆಳಗಾಗ ಖಾವಂದರೂ ಜನಾನಾ ಬರುತ್ತಾರೆ. ಮಧ್ಯಾಹ್ನ ಊಟ ಮಾಡಿಕೊಂಡು ಮೂರುಗಂಟೆಹೊತ್ತಿಗೆ ಕನ್ನಂಬಾಡಿ ನೋಡುವುದಕ್ಕೆ ಹೋಗುವುದು ಎಂದು ಗೊತ್ತಾಗಿದೆ" ಎಂದು ಹೇಳಿದನು.

ಕೆಂಪೀಗೆ ಮಗಳು ಬರುವಳು ಎಂಬ ಸಂತೋಷ ಹಿಡಿಸಲಾರದಷ್ಟು. ಮಲ್ಲಣ್ಣನಿಗೆ ಮಗಳನ್ನು ನೋಡುವುದಕ್ಕಿಂತ ಖಾವಂದ್‌ರ ದರ್ಶನದಲ್ಲಿ ಹೆಚ್ಚು ಆಸಕ್ತಿ.

## ೨೦

ನಂಜಪ್ಪನು ಬಂಗಲೆಯಲ್ಲಿ ಖಾವಂದರ ಆಗಮನಕ್ಕೆ ಏನೇನು ಬೇಕೋ ಎಲ್ಲವನ್ನೂ ಸಿದ್ಧಮಾಡಿದನು. ಹತ್ತು ಗಂಟೆಗೆ ಅಡುಗೆಯೆಲ್ಲ ಆಗಿ ಬಡಿಸುವುದಕ್ಕೆ ಸಿದ್ಧವಾಗಿತ್ತು.

ಸುಮಾರು ಹತ್ತೂವರೆಯಿರಬಹುದು. ಖಾವಂದರ ಸವಾರಿ ಸಾರೋಟಿನಲ್ಲಿ ದಯಮಾಡಿಸಿತು. ಅತ್ತಕಡೆ ಸುಂದರಮ್ಮಣ್ಣಿ. ಇತ್ತ

ಕಡೆ ಮಲ್ಲಮ್ಮಣ್ಣಿ, ನಡುವೆ ನಾಯಕ. ಕರೀ ಕುದುರೆಗಳನ್ನು ಗಾಡಿಗೆ ಕಟ್ಟಿದೆ. ಹಿಂದೆ ಹಕೀಂ, ಅವನ ಆಳು, ಸುಲ್ತಾನ್ ರಾಣಿಯರನ್ನು ಏರಿಕೊಂಡು ಬಂದಿದ್ದಾರೆ.

ಮಲ್ಲಣ್ಣನು ಬಂದು ಕಾಣಿಸಿಕೊಂಡು "ಪಾದಕ್ಕೆ ಅಡ್ಡಬಿದ್ದೆ" ಎಂದನು. ನಾಯಕನು ನಗುತ್ತಾ "ವರಸೇಲಿ ನೀವು ದೊಡ್ಡವರಾದರಿ?" ಎಂದನು. ಮಲ್ಲಣ್ಣ "ಉಂಟಾ ನಿಮ್ಮ ಪಾದ, ಆಡು ಬೆಳೆದರೆ ಆನೆ ಆದೀತಾ? ಎಂದಿದ್ದರೂ ತಾವು ದಣಿಗೋಳು, ನಾವು ತಾಬೇದಾರ್ರು" ಎಂದನು. ನಾಯಕನು ಬಲಕ್ಕೆ ತಿರುಗಿ ದಿವಾನ್‌ಖಾನೆಗೆ ಹೋಗಿ ಕುಳಿತುಕೊಂಡು, ಪೇಟಾ ತೆಗೆದು ಬೆವರು ಒರೆಸಿಕೊಳ್ಳುತ್ತಾ "ಏನು ವಿಶೇಷ, ಮಲ್ಲಣ್ಣಾ?" ಎಂದನು.

"ಏನು ಹೇಳಲಿ, ಬುದ್ಧಿ. ರಾಜ್ಯ ಆಳೋ ಮಹಾರಾಜರು, ದಿವಾನರು, ಎಲ್ಲರಿಗೂ ಬೇಕಾದವರು ತಾವು. ಆದರೂ ಏನೋ ಬಂತು ಬುದ್ಧಿ. ಲಕ್ಷಾಂತರ ಎಕರೆಗೆ ನೀರು ಕೊಡೋ ಭಾರೀಕೆರೆ ಕಟ್ಟುತಾ ಅವರೆ; ಆದರೂ ಬುದ್ಧಿ, ರೂಪಾಯಿಗೆ ಎಂಟು ಒಂಭತ್ತು ಸೇರು ಅಕ್ಕಿ ಆಗೋಯ್ತು. ರಾಗಿ ಪಲ್ಲ ನಾಕುವರೆ ಐದು ಆಯ್ತು. ಇನ್ನು ಬಡವರು ಬದುಕೋದೂ ಉಂಟಾ? ಅಂತ ದಿಗಿಲಾಯ್ತದೆ ಬುದ್ದಿ."

"ಅಂದರೆ, ನಿನಗಿನ್ನೂ ಒಂದು ಹತ್ತು ರೂಪಾಯಿ ಬೇಕೂಂತಲೇನಪ್ಪಾ ಈ ಆವಟಾ ಎಲ್ಲ?"

"ನನ್ನಾಣೆಗೂ ಇಲ್ಲ, ನಿಮ್ಮ ಪಾದ. ಲೋಕಕ್ಕೆ ಲೋಕವೇ ಕನ್ನಂಬಾಡಿ ಕಟ್ಟೋಕೆ ಎಲ್ಲೆಲ್ಲಿಂದಲೋ ಜನ ಬಂದುಬಿಟ್ಟವರೆ, ಧಾರಣೆ ಎಚ್ಚೋಯಿತು ಅಂತ ಗುಸುಗುಂಪಲು, ಏನೋ ದೊಡ್ಡವರಿಗೆ ಹೇಳ್ತೀರೇನೋ ಅಂದೆ."

"ಅಲ್ಲೋ ನಿಮ್ಮಗಳ ಸುದ್ದೀಕೇಳ್ನಿಲ್ಲ. ನಮ್ಮ ಸುಖಸಮಾಚಾರ ಕೇಳ್ನಿಲ್ಲ; ಮಳೆಬೆಳೆ ಕೇಳ್ನಿಲ್ಲ. ಎಲ್ಲಾ ಬುಟ್ಟು ಧಾರಣೆವಾಸಿ ಹೇಳುತಿದ್ದೀಯಲ್ಲ. ಇದೇನು ಸೋಜಿಗ?"

"ಬುದ್ಧಿ, ಇಲ್ಲಿ ಒಬ್ಬರು ಆಯ್ಯನೋರು ಬಂದವ್ರೆ. ನಮಗೂ

ಅವರ್ನೂ ಬಾಳ ನೇಸ್ತಾ ಬೆಳೆದಿದೆ. ಖಾವಂದ್ರೂ ಅವರ್ನ ನೋಡ ಬೇಕು. ಅವರು ಪೇಪರು ಗೀಪರು ಓದುತಾ, ಇದನ್ನೆಲ್ಲ ಹೇಳ್ತಾರೆ. ನಿನ್ನೆ ಸಂಜೆ ಧಾರಣೇದೇನೋ ಮಾಟಿಂಗಾಯ್ತು ಅಂತ ಓದಿದರು. ನಿನ್ನೆಯಿಂದ ಅದೇ ಗುಂಗು ಇತ್ತು. ಖಾವಂದ್‌ರ ಪತ್ರ ಹೇಳೋದು ಅಂದುಕೊಂಡೆ. ಬಾಯಲ್ಲಿ ಬಂದು ಬುಡುತು. ಅಷ್ಟೇ ಬುದ್ಧಿ".

"ಇರಲಿ. ವಿಚಾರಿಸೋವಾ! ನೀನೂ ನಿನ್ನ ಹೆಂಡತಿ ಎಲ್ರೂ ಚೆನ್ನಾಗಿದ್ದೀರೋ?"

"ಏನೋ ನಿಮ್ಮ ಪಾದ! ತಮ್ಮ ಹೆಸ್ರು ಹೇಳಿಕೊಂಡು ದೀಪ ಹಚ್ಚಿಕೊಂಡು, ತಾವು ಕೊಟ್ಟ ಅನ್ನ ಉಂಡುಕೊಂಡು, ತಾವು ಕೊಟ್ಟ ಬಟ್ಟೆ ಉಟ್ಕೊಂಡು, ಸುಖವಾಗಿದ್ದೀವಿ."

"ಅದೇನೋ ಮಕ್ಕಳು ಮಾಡಿಕೊಂಡಿದ್ದೀರಂತೆ. ಹೋದ ಸಲ ಬಂದಾಗ ನಂಜಪ್ಪ ಏನೋ ಹೇಳಿದ ಪುರಸೊತ್ತು ಇರಲಿಲ್ಲ. ಪೂರ್ತಿ ಕೇಳಲಿಲ್ಲ."

"ಅಂಯ್! ಅದೇನು ಬುಡೀ ತಮ್ಮ ಪಾದ. ಹೊಟ್ಟೆಗಿಲ್ಲದ ಸಂಕಟಕ್ಕೆ ಕ್ಯಾರೇಹಾವು ಆಡಿಸದ್ರು ಅಂದ ಹಾಗೆ. ಆ ನಮ್ಮ ಮುಕ್ಕ ಅವಳಲ್ಲ, ಅವಳು ಆ ಎಣ್ಣು ಮೊಗೀಗೆ ಚಿಕ್ಕಮಲ್ಲಿ ಅಂತ ಹೆಸರಿಟ್ಕೊಂಡು ಏನೋ ಬೊಂಬೆಗೊಂದು ಗಿಂಬೆ ಅಂದಹಂಗೆ ಹೊತ್ತು ಕಳೀತವಳೆ. ಅಷ್ಟೇ ಬುದ್ಧಿ."

"ನಿಮ್ಮ ಅಯ್ಯನೋರು ಯಾರು?"

"ಹತ್ತು ವರುಷದ ಹಿಂದೆ ಅತ್ತ ಕೊಳ್ಳೇಗಾಲದ ಸುತ್ತ ಒಬ್ಬ ಅಯ್ಯ ಇದ್ದ ಬುದ್ಧಿ ಏನೋ ಅಷ್ಟು ಔಸ್ತಿ ಗಿವ್‌ಸ್ತಿ ಮಾಡಿಕೊಂಡು. ನೋಡೋಕೇನೋ ಹಂಗೇ ಅವ್ನೆ. ಆ ಅಯ್ಯನಿಗೆ ಮಾತು ಅಷ್ಟು ಇರಲಿಲ್ಲ. ಇವ ಪೂರಾಮಾತು. ಮಾತಿನಭರದಲ್ಲಿ 'ಏನ್ರಿ, ನಿಮ್ಮ ಮೈಸೂರು, ಒಂದು ದೊಡ್ಡಹಳ್ಳಿ ಅಷ್ಟೇಕಣ್ರಿ, ಅಂತ ಷಹರ್ ಕೆಟ್ಟು ಹೋಯಿತೋ?' ಅಂದುಬಿಟ್ಟ. ಮಾತಾಡಿದರೆ, ಮದರಾಸು ಬೊಂಬಾಯಿ, ಪೂನಾ, ಕಲ್ಕತ್ತ ಅಂತಾನೆ. ಅಂತೂ ಪೂರಾಸುತ್ತವ್ನೆ."

"ಹೊಂ ಹಂಗಾ! ಇರಲಿ. ಕರೆಸಿ, ನೋಡೋವಾ."

"ಖಾವಂದ್ರು ಬರುತಲೂ ಕರೀತೀನಿ ಅಂದಿದ್ನಿ. ಇವೊತ್ತು ಪಾದ ಆಗಬೋದು ಅಂದರೆ, ಕನ್ನಂಬಾಡೀಗೆ ಅವರೂ ಬರುತಾರೆ."

"ಬರಲೇಳಿ ಅದಕೇನು? ಆದರೆ, ಎಲ್ಲರಿಗೂ ಸಾರೋಟಿನಲ್ಲಿ ಆಗೋಕಿಲ್ಲಾ. ಜಟಕಾ ಮಾಡಿಕೊಂಡು ನೀವೂ ಅವರೂ ಬನ್ನಿ. ಕೆಂಪಮ್ಮ ಜನಾನಾ ಜೊತೇಲಿ ಬರಲಿ. ನಾನು ಮಲ್ಲೀ ಕುದುರೆ ಮೇಲೆ ಬರುತೀವಿ."

"ಅವರ ಅಮ್ಮನೋರು ಬಂದಾರೇನೋ? ಕೆಂಪಿ ಕರಕೊಂಡು ಹೋಯ್ತೀನಿ ಅಂದಿದ್ದಳು."

"ಆಗಲೇಳಿ—ಅಕೋ ನಿಮ್ಮ ಮಲ್ಲೀ ಬಂದಳು. ಏನ್ರೀ ಆರೋ ಗಣೇಗೆ ಏಳೋಣೇನ್ರಿ?"

"ನಾನು ನಮ್ಮಪ್ಪಾಜಿ ನೋಡೋಕೇಬೇಡವಾ? ಅಪ್ಪಾಜೀ ಕಂಡು, ಆಮೇಲೆ ತಮ್ಮ ಪಾದಕ್ಕೆ ನೀರುಚೌಕ ತರುತೀನಿ."

"ನೋಡಿ, ನೋಡಿ, ಮಾತೆಲ್ಲ ಮುಗೀಲಿ. ಆಮೇಲೇ ನಮ್ಮ ಕಡೆ ತಿರುಗೋರಂತೆ."

ಮಲ್ಲಿಯು ನಾಯಕನ ನೊಕನೋಡಿ ನಕ್ಕು "ಏನಪ್ಪಾಜೀ, ಚೆನ್ನಾಗಿದ್ದಿರಾ?" ಎಂದು ಮಗ್ಗುಲಲ್ಲಿ ಬಂದುನಿಂತು ಕಾಲುಮುಟ್ಟಿ ಕಣ್ಣಿಗೊತ್ತಿಕೊಂಡಳು. ಮಲ್ಲಣ್ಣನು ಯಾರೋ ದೊಡ್ಡವರನ್ನು ಕಂಡು ಸಂಭ್ರಮ ಪಡುವಂತೆ ಸಂಭ್ರಮಪಡುತ್ತಾ "ನೋಡವ್ವಾ ಏನೋ ಹಿಂಗವ್ನಿ" ಎಂದು ಅವಳನ್ನು ತಬ್ಬಿಕೊಂಡು ಸಂಭ್ರಮ ಪಟ್ಟನು.

ಮಲ್ಲಣ್ಣ ಕೆಂಪಿಯರಿಗೂ ಖಾಸ್ ಬಿಡದಿಯಲ್ಲೇ ಅವರ ಜೊತೆಯಲ್ಲಿಯೇ ಊಟವಾಯಿತು.

ನಾಯಕನು ವಿಶ್ರಾಂತಿಗೆಂದು ಒಳಕ್ಕೆ ಹೋದಾಗ ಮಲ್ಲಣ್ಣನು ಹೋಗಿ ಶಂಭುರಾಮಯ್ಯನನ್ನು ಕರೆತಂದನು: ಕೆಂಪಿಯು ಆನಂದಮ್ಮನನ್ನು ಕರೆದುಕೊಂಡು ಹೋಗಿ ರಾಣಿಯವರ ದರ್ಶನಮಾಡಿಸಿದಳು. ಮಲ್ಲಿಯು ನೋಡುತ್ತ ನಿಂತಿದ್ದಳು. ಆನಂದಮ್ಮನವರ ಪುರಾಣಾದಿಗಳ ಕಥೆಯನ್ನು ಕೇಳಿದ ಸುಂದರಮ್ಮಣ್ಣಿಯು "ಮಲ್ಲಮ್ಮಣ್ಣಿ, ಅಮ್ಮ

ನೋರಿಗೆ ನಮಸ್ಕಾರ ಮಾಡಿ." ಎಂದಳು.

ಮಲ್ಲಿಯು ನಮಸ್ಕಾರ ಮಾಡಿದಳು. ಆನಂದಮ್ಮನು ಅವಳನ್ನು ಹಿಡಿದೆತ್ತಿ ಮಗ್ಗುಲಲ್ಲಿ ಕೂರಿಸಿಕೊಂಡಾಗ ಹೊಟ್ಟೆಯಲ್ಲಿ ಎದೆಯಲ್ಲಿ ಹೇಗೆಹೇಗೋ ಆಯಿತು. ಹಿಂದಿನದಿನ ಕೆಂಪಿಯಾಡಿದ್ದ ಮಾತುಗಳು ಏನೇನೋ ರೀತಿಯಲ್ಲಿ ಹೆಣೆದುಕೊಂಡು, ಏನೇನೋ ಸಂಬಂಧವನ್ನು ಕಲ್ಪಿಸಿಕೊಂಡು ಹತ್ತುವರ್ಷದ ನೆನಪನ್ನು ಎಳೆತಂದು ಚುಚ್ಚಿದಂತೆ ಆಯಿತು. ಆದರೂ ಅವಳು ಅದೊಂದನ್ನೂ ಗಮನಿಸದೆ, ಮಲ್ಲಿಗೆ ಆಶೀರ್ವಾದ ಮಾಡಿದಳು.

ಕೆಂಪಿಗೆ ತಿಳಿಯದಿದ್ದ ಒಂದಂಶ ಸುಂದರಮ್ಮಣ್ಣಿ ಕಣ್ಣಿಗೆ ಬಿತ್ತು. ಬಾಯಿ, ಕೆನ್ನೆ, ಕಣ್ಣು, ಹುಬ್ಬು, ಹಣೆ, ಎಲ್ಲವೂ ಆನಂದಮ್ಮನ ತದ್ರೂಪು ಮಲ್ಲೀಗೆ. ರಾಣಿಗೆ ಆಶ್ಚರ್ಯವಾಯಿತು. ಆದರೂ ಒಬ್ಬರಂತೆ ಒಬ್ಬರು ಇರುವುದಿಲ್ಲವೆ ಎಂದು ಆಕೆ ಸುಮ್ಮನಾದಳು.

ಮಧ್ಯಾಹ್ನ ಮೂರು ಗಂಟೆಗೆ ಕನ್ನಂಬಾಡಿಗೆ ಎಲ್ಲರೂ ಹೊರಟರು. ಮಲ್ಲಿಯು ಕುದುರೆ ಸವಾರನ ಪೋಷಾಕು ಧರಿಸಿದ್ದಾಳೆ. ಮೊಗದ ಮೇಲೆ ಗಂಡು ಕಳೆಯು ಕುಣಿದಾಡುತ್ತಿದೆ. ನಾಯಕನೂ ಅದೇ ಜಾತಿಯ ಪೋಷಾಕು ಧರಿಸಿದ್ದಾನೆ. ಇಬ್ಬರೂ ಹ್ಯಾಟ್ ಹಾಕಿಕೊಂಡಿದ್ದಾರೆ. ಈಚೆಗೆ ಬಂದರು. ಕೆಂಪಿ, ಮಲ್ಲಣ್ಣ, ಮಗಳು ಹಾಗೆ ಗಂಡುದಿರಸು ಹಾಕಿಕೊಂಡಿದ್ದನ್ನು ನೋಡಿರಲಿಲ್ಲ. ಇಬ್ಬರಿಗೂ ಆಶ್ಚರ್ಯವಾಯಿತು.

ಕೆಂಪಿಯು ಮೂಕಳಾಗಿ ರಾಣಿಯ ಮೊಕ ನೋಡಿದಳು: "ಹೌದು, ಈಗ ಅವರು ಹಾಗೆ; ಇಬ್ಬರೂ ಹೀಗೆ ಕುದುರೆಯ ಮೇಲೆ ತಿರುಗಿದ್ದೇ ತಿರುಗಿದ್ದು. ಹೋಗಲೇಳು, ಕೆಂಪಮ್ಮಣ್ಣಿ, ನಮಗೆ ಆ ಭಾಗ್ಯ ಇಲ್ಲ, ಅವಳಿಗಾದರೂ ಅದೆಯಲ್ಲ. ಇನ್ನೊಂದು ಬಲ್ಲೆಯಾ? ನಿನ್ನಮಗಳು, ಅಬ್ಬಾ, ಬೋ ಚಾಲೋಕಿನ ಹೆಣ್ಣು. ಬಂದೂಕು ಹಿಡಿದು ಗುಂಡು ಹೊಡೆದು ಒಂದು ಜಿಂಕೆ ಹೊಡೆದುಬಿಟ್ಟಳು. ಇನ್ನು ಕತ್ತಿ ವರಸೆಕೂಡ ಬುದ್ಧಿಯೋರೆ ಕಲುಸತಾರಂತೆ. ಏನೋ ಈ ಗಂಡುಬೀರಿ ಆಟಾನೇ ಏನೋ ಅಂದರೆ, ನನ್ನ ಹತ್ತಿರವೇ ವೀಣೇ ಕಲೀತಾ ಅವಳೆ.

ಇನ್ನೊಂದು ವರ್ಷ ಆದರೆ, ಆಯಿತು. ನಾನೂ ಕಲಿತು ಕಲಿಸಬೇಕು. ಅಂತೂ ಸಾವಿರ ಹೇಳು. ನಿನ್ನ ಪುಣ್ಯ ಅಷ್ಟಲ್ಲ; ಇಷ್ಟಲ್ಲ."

ಕೆಂಪೀಗೆ ಆ ಮಾತು ಕೇಳಿ ಎಲ್ಲೂ ಹಿಡಿಸಲಾರದಷ್ಟು ಆನಂದವಾಗಿ ಹೋಯಿತು. ಮಗ್ಗುಲಲ್ಲಿದ್ದ ಆನಂದಮ್ಮನಿಗೂ ಅದು ಕೇಳಿ ಆನಂದವೇ ಆಯಿತು. ಆದರೂ ಏನೋ ದೂರದ ನೋವು. ಏನೋ ತನ್ನದೇನೋ ಹೋದಂತೆ ಒಂದು ಸಣ್ಣ ಸಂಕಟ.

"ಆದರೆ ಇಷ್ಟೆಲ್ಲಾ ಆಯಿತಲ್ಲಾ! ಒಂದು ಮಾತ್ರ ವಿಚಿತ್ರ. ದಿನಾ ಒಂದುಸಲ ಹೋಗೋದು, ಹುಲ್ಲಿನ ಮೆದೆಹತ್ರ ಕುಂತು ನಮ್ಮಮ್ಮ ನಿಗೆ ನಾಹಿಂಗೆ ಕುಂತುಕೊಂಡರೆ ಬೋ ಚೆನ್ನ ಅಂಮ ಒಂದು ಕಡ್ಡೀ ಕಡಿಯೋಷ್ಟು ಹೊತ್ತು ಅಲ್ಲಿದ್ದು ಬರೋದು. ಒಂದುದಿನ ತಪ್ಪಿಸೋದಿಲ್ಲ ವಲ್ಲ. ಅವರಪ್ಪನ್ನಾದರೂ ಮರೆತಾಳು. ಅಮ್ಮನ್ನ ಮರೆಯೋದೇ ಇಲ್ಲ."

ಕೆಂಪಿಗೆ ಆನಂದದಲ್ಲಿ ಮೈಮರೆತು ಹೋಗಿತ್ತು. ಅರ್ಧ ಜ್ಞಾನದಲ್ಲಿದ್ದಂತೆ ಆ ಮಾತು ಕೇಳಿದಳು. ಆ ವೇಳೆಗೆ ಮಲ್ಲಿಯು ಒಳಗೆ ಬಂದಳು. ಕೈಯಲ್ಲಿದ್ದ ವಿಪ್ ತಿರುಗಿಸುತ್ತಾ "ಅವ್ವಾ! ನಾ ಹೆಂಗಿದೀನಿ!" ಎಂದಳು.

"ಅಂಯ್! ನನ್ನ ಚಿನ್ನಾ!" ಎಂದು ತಬ್ಬಿ ಮುತ್ತಿಟ್ಟುಕೊಂ ಡಳು. ಕೆಂಪಿಯ ತುಟಿಯಲ್ಲಿದ್ದ ತಾಂಬೂಲದ ಕೆಂಪು ಮಲ್ಲಿಯ ಕೆನ್ನೆ ಯನ್ನು ಅಲಂಕರಿಸಿತು. ಮಲ್ಲಿಯು ಎದುರಿನ ನಿಲುಗನ್ನಡಿಯಲ್ಲಿ ಅದನ್ನು ತೋರಿಸುತ್ತಾ "ನಮ್ಮವ್ವ ಕೊಟ್ಟ ವರ! ಆದರೆ ಅವ್ವ, ಖಾವಂದರ ಜೊತೆಯಲ್ಲಿ ಕುದುರೆ ಹತ್ತಬೇಕಲ್ಲಾ!" ಎಂದಳು.

ಕೆಂಪಿಯು ಏನೋ ಅಪರಾಧಮಾಡಿದವಳಂತೆ ಬೆಚ್ಚಿದಳು. ಆನಂದಮ್ಮನು ಥಟ್ಟನೆ ಬಂದು ಕೆನ್ನೆಯಮೇಲಿದ್ದ ಕೆಂಪನ್ನು ನಾಜೋ ಕಾಗಿ ಸೆರಗಿನಿಂದ ವರೆಸಿ, ಅದೂ ಒಂದು ಸೊಗಸಾಗುವಂತೆ ಮಾಡಿದಳು.

ರಾಣಿಗೆ ಆನಂದಮ್ಮನ ಚಾತುರ್ಯ ನಾಜೋಕುತನ ಬಲು ಸೊಗ ಸಿತು. ಆಕೆಯ ಕಣ್ಣು ಈಕೆಯ ಕಣ್ಣನ್ನು ಸಂಧಿಸಿದಾಗ ಭಲೇ ಎಂದು

ಮೆಚ್ಚುಗಾಣಿಕೆಯನ್ನು ಒಪ್ಪಿಸಿದುವು.

ಇತ್ತ ನಾಯಕನು ದಿವಾನ್‌ಖಾನೆಗೆ ಬಂದು ಶಂಭುರಾಮಯ್ಯ ನನ್ನು ಕಂಡನು. ನಾಯಕನ ಸೂಕ್ಷ್ಮದೃಷ್ಟಿ ಅವನು ಇಂಥವನೇ ಎಂಬುದನ್ನು ಥಟ್ಟನೆ ಕಂಡುಕೊಂಡಿತು. ಇನ್‌ಸ್ಪೆಕ್ಟರ್ ರಜಾಕ್ ಹೇಳಿದ್ದ ಮನುಷ್ಯ ಈತನೇ ಇರಬಹುದೋ ಎನ್ನಿಸಿತು. ಆದರೂ 'ವಚ್ಚ' ಕೊಡದೆ ಮಾತನಾಡಿದನು. ಆದರೂ ಏನೂ ತಿಳಿಯದವ ನಂತೆ, "ನಮ್ಮ ಹಿರಿಯರು ತಮ್ಮನ್ನು ಬಹಳ ಕೊಂಡಾಡುತ್ತಿದ್ದಾರೆ. ಒಂದುಸಲ ನಮ್ಮೂರಿಗೂ ಬನ್ನಿ." ಎಂದನು.

ಶಂಭುರಾಮಯ್ಯನು ತನ್ನೊಳಗೆ ಆದ ಗಡಿಬಿಡಿಯನ್ನೆಲ್ಲಾ ಒಳಗೇ ಇಟ್ಟುಕೊಂಡು, "ತಮ್ಮಂತ ಲಕ್ಷ್ಮೀಪುತ್ರರ ಪರಿಚಯವು ಲಭಿಸಿದುದು ನಮ್ಮ ಅದೃಷ್ಟ ! ಆಗಲಿ. ಬರುತ್ತೇನೆ" ಎಂದನು.

ನಿಯತಕಾಲದಲ್ಲಿ ಹೊರಟು ಎಲ್ಲರೂ ಕನ್ನಂಬಾಡಿಯನ್ನು ಸೇರಿದರು. ದಿವಾನರು ಬಂದಿದ್ದಾರೆ. ನಾಯಕನನ್ನು ಕಂಡು ಅವರಿಗೆ ಬಹು ಸಂತೋಷವಾಯಿತು : "ವೆರಿಗುಡ್, ರಾವ್‌ಬಹದ್ದೂರ್. ಬನ್ನಿ. ಈತ ಯಾರು ?" ಎಂದು ಮಲ್ಲಿಯನ್ನು ತೋರಿಸಿ ಕೇಳಿದರು.

ನಾಯಕನು ಏನು ಹೇಳಬೇಕೆಂದು ಯೋಚಿಸುತ್ತಿರುವಾಗ, ಅವರೇ, "ಪರ್‌ಹ್ಯಾಪ್ಸ್ ಯುವರ್‌ಸನ್, ಏನು ಓದುತ್ತಾನೆ? ಇಂಗ್ಲೀಷ್ ಓದಿಸಬೇಕು." ಎಂದು ಷೇಕ್ ಹ್ಯಾಂಡಿಗೆ ಕೈನೀಡಿದರು.

ಮಲ್ಲಿಯು ನಾಚಿ ನಾಯಕನ ಮೊಕವನ್ನು ನೋಡಿದಳು.

ದಿವಾನರು "ಓ ! ಷೈ ? ಡಸೆಂಟ್ ಮಾಟರ್. ಎ ಗರ್ಲ್ ! ಐಸೀ, ವೆರಿಗುಡ್," ಎಂದು ಕಟ್ಟೆಯಕಡೆ ತಿರುಗಿದರು.

ಅಷ್ಟು ಹೊತ್ತು ಕಟ್ಟಡದಮೇಲೆಲ್ಲಾ ತಿರುಗಿದರು. ಅವರ ಜೊತೆಯಲ್ಲಿ ನಾಯಕನೂ ಹೋದನು. ನಾಯಕನ ಜೊತೆಯಲ್ಲಿ ಮಲ್ಲಿಯೂ ಹೋದಳು.

ಎಲ್ಲವನ್ನೂ ಸುತ್ತಿಕೊಂಡು ಹಿಂತಿರುಗುವಾಗ ದಿವಾನರು, "ಏನು ರಾವ್‌ಬಹದ್ದೂರರೆ, ಹೇಗಿದೆ ?" ಎಂದರು.

"ಏನು ಮಹಾಸ್ವಾಮಿ, ಈ ನೀರು ನಮ್ಮವರಿಗೆ ಬಂದರೆ, ಚಿನ್ನ

ಹಾಕಿ ಚಿನ್ನ ಬೆಳೆದೇವು."

"ಬರುತ್ತದೆ, ಬರುತ್ತದೆ, ಕಾವೇರಮ್ಮ ಮೈಸೂರನ್ನು ನಂದನ ವನ ಮಾಡುತ್ತಾಳೆ. ಮೈಸೂರಲ್ಲಿ ತಂಜಾವೂರಿನಹಾಗೆ ಭತ್ತದ ಖಣಜ ಆಗುತ್ತದೆ."

"ಬುದ್ಧಿ, ಕಾವೇರಮ್ಮ ನಮ್ಮ ಕಡೆ ಯಾವಾಗ ಬಂದಾಳೋ? ಎಂತೋ? ತಾನನಕ ಬರಬೋದಲ್ಲ?"

ದಿವಾನರು ಹಾಗೇ ನಿಂತು, "ಮಿ|| ಸೆಕ್ರೆಟರಿ, ನೋಟ್ ಇಟ್ ಡೌನ್. ವಿ ಆರ್ ಗೋಯಿಂಗ್ ಟು ರಾವ್‌ಬಹದೂರ್ ನೆಕ್ಸ್ಟ ವೀಕ್" ಎಂದರು. ನಾಯಕನು ಸಮ್ಮತಿಸಿ ಕೈಮುಗಿದನು.

## ೨೧

ಕನ್ನಂಬಾಡಿಯು ಇನ್ನೂ ಕೃಷ್ಣರಾಜಸಾಗರವಾಗಿರಲಿಲ್ಲ. ಆದರೂ ಅಲ್ಲಿ ಆ ವೇಳೆಗೆ ಆದ ಕಟ್ಟೆಯ ಹರಹಿನ ಹಿಂದೆ ನಿಂತ ನೀರೇ ನೋಡುವವರಿಗೆ ಆಶ್ಚರ್ಯವಾಗುವುದು. ಅಲ್ಲದೆ ಕಾವೇರಿಯ ತಿಳಿನೀರು ಅಷ್ಟು ಅಗಲ ಒದೆದುಕೊಂಡು ನಿಂತಿದ್ದರೆ, ಏನೋ ಗಾಂಭೀರ್ಯ. ಏನೋ ಸೌಂದರ್ಯ. ಮುಂದೆ ಮಹಾಲಕ್ಷ್ಮಿಯಾಗುವ ಮಡದಿಯನ್ನು ಮನೆ ತುಂಬಿಸಿಕೊಂಡವನ ಮನಸ್ಸಿನ ತುಂಬು.

ಒಂದು ಕಡೆ ಡೈನಮೆಂಟ್‌ಗಳು ಸಿಡಿದು ಇದ್ದ ಅಡ್ಡಿಗಳನ್ನು ನಿವಾರಿಸುತ್ತಿವೆ. ಇನ್ನೊಂದು ಕಡೆ ಗಾರೆಯಂತ್ರಗಳು ಕಿವಿಯು ಕಿವುಡಾಗುವಂತೆ ಮೊರೆಯುತ್ತ ಸುತ್ತುತ್ತಿವೆ. ಸಣ್ಣ ಕಂಬಿಗಳ ಮೇಲೆ ಟ್ರಾಲಿಗಳಲ್ಲಿ ದಪ್ಪದಪ್ಪ ಕಲ್ಲುಗಳು ಭಾರಿಯ ಮನುಷ್ಯರಹಾಗೆ ಕುಳಿತು ಬರುತ್ತಿವೆ. ಎಲ್ಲಿ ನೋಡಿದರೂ ದುಡಿಮೆ. ಯಾರೂ ಸುಮ್ಮನೆ ಕುಳಿತಂತಿಲ್ಲ. ದಣಿದವನು ಅಡಕೆಲೆ ಹಾಕಿಕೊಳ್ಳಬೇಕಾದರೂ ಕೆಲಸ ಮಾಡುತ್ತ ಅಡಕೆಲೆ ಹಾಕಿಕೊಳ್ಳುತ್ತಾನೆ. ಬೀಡೀ ಸೇದುವವನೂ

ಕೆಲಸಮಾಡದಿದ್ದರೆ, ಕೆಲಸದ ವಿಚಾರವನ್ನು ಚಿಂತಿಸುತ್ತ ಬೀಡೀ ಸೇದುತ್ತಾನೆ. ಅಂತೂ ದುಡಿ, ದುಡಿ, ದುಡಿ, ಮಡಿಯುವವರೆಗೂ ದುಡಿ ಎಂದು ಆ ವಾತಾವರಣ ಎಲ್ಲರನ್ನೂ ಕತ್ತಿನಮೇಲೆ ಕೈ ಹಾಕಿ ದುಡಿಸುತ್ತಿದೆ ಎನ್ನುವಂತಿದೆ.

ಪಾರ್ಟಿಯು ಮೈಸೂರಿಗೆ ಹಿಂತಿರುಗಿಬರುವ ವೇಳೆಗೆ ಸುಮಾರು ಏಳುಗಂಟೆಯಾಗಿತ್ತು. ಎಲ್ಲರಿಗೂ ಏನೋ ಉತ್ಸಾಹವಿದೆ. ಏನೋ ಹೊಸತನ ಬಂದಂತಿದೆ. ಬೇಸಗೆಯಲ್ಲಿ ಒಮ್ಮೆ ಮಳೆ ಬಂದರೆ, ಮನೆಯಲ್ಲಿದ್ದು ಒಂದು ಹನಿ ಮಳೆಯೂ ಮೈಮೇಲೆ ಬೀಳದಿದ್ದರೂ ಏನೋ ಮೈತೊಳೆದುಕೊಂಡಂತೆ ಆಗುವುದಿಲ್ಲವೆ? ಹಾಗೆ ಎಲ್ಲರಿಗೂ ಹೊಸತನ. ಎಲ್ಲರಿಗಿಂತ ಹೆಚ್ಚಾಗಿ ಇಬ್ಬರಿಗೆ ಆಶ್ಚರ್ಯ.

ನಾಯಕನು ಮಲ್ಲಿಯು ಅಷ್ಟುದೂರ ಕುದುರೆ ಸವಾರಿಮಾಡುವಳು ಎಂದುಕೊಂಡಿರಲಿಲ್ಲ. ಎಷ್ಟೇ ಆಗಲಿ ಸಣ್ಣವಯಸ್ಸು: ಆಯಾಸ ವಾದೀತು ಎಂದು ಕೊಂಡಿದ್ದನು. ತಾನು ಕಟ್ಟೆಯನ್ನು ಹತ್ತಿ ಇಳಿ ದಾಗಲೆಲ್ಲ ಜೊತೆಯಲ್ಲಿ ಹತ್ತಿ ಇಳಿದಿದ್ದಾಳೆ. ಸುತ್ತಿದ ಕಡೆಯೆಲ್ಲ ಸುತ್ತಿ ದ್ದಾಳೆ. ಕುದುರೆಯ ಮೇಲೆ ಬಂದಿದ್ದಾಳೆ. ಆದರೂ ಮುಖದಲ್ಲಿ ಉತ್ಸಾಹವಿದೆ: ಸಂಭ್ರಮವಿದೆ. ಅವನಿಗೆ ಅದು ಆಶ್ಚರ್ಯ!

ಹಾಗೆಯೇ ಆಶ್ಚರ್ಯಪಟ್ಟವರು ಇನ್ನೊಬ್ಬರು ಎಂದರೆ ಆನಂದಮ್ಮ. ಅವರ ಮನಸ್ಸು ಮಲ್ಲಿಯನ್ನು ಅದೇದಿನ ನೋಡಿದ್ದು. ಆದರೂ ಅವ ರಿಗೆ ಆ ಮಗು ಎನ್ನಿಸುತ್ತದೆ: ಒಂದೇಸಲ ಮುಟ್ಟಿರುವುದು. ಆದರೂ ಹೊಟ್ಟೆಯ ತುಂಬ ಇದ್ದು ಈಚೆಗೆ ಬಂದು ಮಡಿಲುತುಂಬಾ ಆಗಿ, ಮನೆಯತುಂಬ, ಮನಸ್ಸಿನತುಂಬ ಆಗಿ ಬೆಳೆದ ಮಗಳನ್ನು ನೋಡಿ ದಂತಾಗಿದೆ. ಆಕೆಗೆ ಆದಿನ ಪುರಾಣ ಇಲ್ಲದ್ದು ಅದೃಷ್ಟ. ಇದ್ದಿದ್ದರೆ ಪುರಾಣವೆಲ್ಲ ಮಲ್ಲೀಪುರಾಣವೇ ಆಗಿ ಹೋಗುತ್ತಿತ್ತೋ ಏನೋ?

ಆನಂದಮ್ಮ ಓದಿದವಳು: ತನ್ನ ಮನಸ್ಸನ್ನು ಶಿಸ್ತಿನಲ್ಲಿಟ್ಟು ಕೊಂಡು ನಡೆಯುವವಳು. ಆದರೂ ಅವಳಿಗೆ ಏನೋ ಭಾವಾಂತರ ವಾದಂತಿದೆ. ಯಾವಾಗಲೂ ಕಳೆದುಕೊಂಡ ಪದಾರ್ಥ, ತನಗೆ ಬೇಡವೆಂದು ಎಸೆದ ವಸ್ತು ಎದುರಿಗೆ ಬಂದು ನಿಂತುಕೊಂಡು "ನಾನು

ಬೇಡವೇ ನಿಜಹೇಳು. ಎದೆ ಮುಟ್ಟಿಕೊಂಡು ಹೇಳು. ಮನಸ್ಸಿನಲ್ಲಿ ಹುಡುಕಿ ನೋಡಿ ಹೇಳು." ಎಂದು ಕೇಳಿದಂತಾಗಿದೆ. ಆಕೆ ಕನ್ನಂಬಾಡಿ ಯಲ್ಲಿ ನೋಡಿದ ಕಲ್ಲು, ಮಣ್ಣು, ಮಂದಿ, ಎಲ್ಲದರಮೇಲೂ ಮಲ್ಲಿಯ ಚಿತ್ರ ಮುದ್ದಾಗಿ ಚಿತ್ರಿತವಾಗಿತ್ತು. ಏನೋ ಹಂಬಲ, ಆಕೆ ಅಸುಖಿ ಯಲ್ಲ. ಕೆಟ್ಟ ಅಡುಗೆಯನ್ನು ಅಟ್ಟು ಸೈ ಎನ್ನಿಸಿಕೊಳ್ಳುವ ಜಾಣೆ. ಆದರೂ ಏನೋ ಸುಖಾಸುಖಸಂಮಿಶ್ರಣವೊಂದು, ಹಣ್ಣಾಗಿ ಹುಳಿ ಯನ್ನು ಸೀ ಮಾಡಿಕೊಳ್ಳುತ್ತಿರುವ ದಾಳಿಂಬೆಯ ಬೀಜ ಬಾಯಿಗೆ ಬಿದ್ದಂತೆ ಆಗಿ, ಮನಸ್ಸನ್ನು ಹಂಬಲಕ್ಕೀಡುಮಾಡುತ್ತಿದೆ.

ಮನೋಹರವಾದ ಶಬ್ದಗಳನ್ನು ರಮ್ಯವಾದ ದೃಶ್ಯಗಳನ್ನು ಕಂಡಾಗ ಸುಖಿಯಾದ ಜಂತುವೂ ಏನೋ ಅಸುಖವನ್ನು ಅನುಭವಿಸಿ ಚಂಚಲತೆಗೆ ಎಡೆಗೊಡುವುದಾದರೆ, ಅದು ಜನ್ಮಾಂತರದ ಸಂಗತಿಗಳನ್ನು ಅರಿತ ಮನಸ್ಸು ಹೂಡುವ ಆಟ ಎನ್ನು ಎಂದನಂತೆ ಕವಿಸಾರ್ವಭೌಮ. ಈಗ ಹಾಗಾಗಿದೆ ಅವಳಿಗೆ.

ಮಲ್ಲಿಯು ನಾಯಕನೊಡನೆ ಒಳಕ್ಕೆಬಂದು ಸೋಫಾದಲ್ಲಿ ಕುಳಿ ತಳು. "ಏನು ಬುದ್ಧಿ, ಇವೊತ್ತು ನಾನು ಸವಾರಿಮಾಡಿದ್ದು ಸರಿಯಾ ಗಿತ್ತಾ ?" ಎಂದಳು.

ನಾಯಕನು ಮೆಚ್ಚಿಕೊಂಡು, ತಬ್ಬಿಕೊಂಡು, ಮುತ್ತಿಟ್ಟು, "ಹತ್ತುವರುಷ ಕುದುರೆ ಬೆನ್ನುಮೇಲೆ ಇದ್ದವನಂಗೆ ಸವಾರಿ ಮಾಡಿದೆ" ಎಂದು ಮುಚ್ಚಟೆಮಾಡಿದನು.

ಮಲ್ಲಿಯು ಬಹು ಸಂತುಷ್ಟಳಾಗಿ "ನಾನು ಮಾಡೋಕೆಲಸದ ಲ್ಲೆಲ್ಲಾ ಹಿಂಗೇ ತಮ್ಮ ಕೈಲಿ ಸೈ ಅನ್ನಿಸಿಕೊಂತೀನಿ ನೋಡಿ ಬುದ್ಧಿ" ಎಂದು ಪ್ರಾರ್ಥನೆಯಂತೆ ನುಡಿದು ಮೇಲಕ್ಕೆದ್ದಳು. ಅಲ್ಲಿಂದ ಹೋಗಿ ಸುಂದರಮ್ಮಣ್ಣಿಯನ್ನು ಕಂಡು "ಬುದ್ಧಿ, ಈದಿನ ನನ್ನಸವಾರಿ ಹೆಂಗಿತ್ತು ? ನೋಡಿದಿರಾ ?" ಎಂದು ಕೇಳಿದಳು.

ಅವಳು ಅವಳನ್ನು ಬರಸೆಳೆದು ತಬ್ಬಿಕೊಂಡು "ನೀವು ಬುದ್ಧಿ ಅನ್ನಬಾರದು : ಅಕ್ಕಯ್ಯಾ ಅನ್ನಬೇಕು ಮಲ್ಲಮ್ಮಣ್ಣಿ" ಎಂದಳು.

"ಉಂಟಾ ! ತಾವು ಬುದ್ಧಿಯೇ, ನಾನು ಮಲ್ಲಿಯೇ ! ಅದಿರಲಿ

ಬುದ್ಧಿ ನಾನು ಕುದುರೇಮೇಲೆ ಕುಂತಿದ್ದುದು ತಮಗೆ ಒಪ್ಪಿತಾ? ಚೆನ್ನಾಗಿತ್ತೆ ಅದು ಹೇಳಿ ಮೊದಲು."

"ಏನು ಪೇಳಲವ್ವಾ! ಬುದ್ಧಿಯೋರಿಗೆ ನಂಗಿಂತ ನೀನೇ ಸರಿ ಅನ್ನಿಸತಿತ್ತು. ಇಬ್ಬರೂ ಸಬಗಸ್ತುನಲ್ಲಿ ಬರುತಿರೋ ಅಂಗಿತ್ತು."

ಮಲ್ಲೀಗೆ ಬಹು ಸಂತೋಷವಾಗಿ, ನಾಚಿಕೆಯಾಗಿ, ಪರವಶವಾದಂತಾಯಿತು. ಹಾಗೆಯೇ ಸುಂದರಮ್ಮಣ್ಣಿಯ ತೆಕ್ಕೆಯಲ್ಲಿ ಅವಳ ಎದೆಯ ಮೇಲೆ ಹಾಗೇ ಒಂದು ಗಳಿಗೆ ಒರಗಿದ್ದಳು.

"ಏಳಿ. ಬಟ್ಟೆಬಿಚ್ಚಿ, ಒಂದು ಸೀರೆ ಉಟ್ಕೊಂಡು ಹೆಣ್ಣಾಗಿ ಬನ್ನಿ. ಯಾರಾದರೂ ಬಂದು ಇದೇನು ಯಾವ ಗಂಡ್ನೋ ತಬ್ಬಿಕೊಂಡವ್ಳೆ ಅಂದುಕೊಂಡಾರು."

ಕೆಂಪಿ ಬಾಗಿಲು ಕೊನೆ ಓರೆಮಾಡಿ ಬಗ್ಗಿ ನೋಡಿದಳು. "ಯಾರು? ಕೆಂಪಮ್ಮಣ್ಣೀನ? ಬನ್ನಿ ಒಳಗೆ. ನಿಮ್ಮ ಮಗಳು ಮಗನಾಗವ್ಳೆ. ನೋಡಿ ಈ ಬೈರೂಪಾನ."

ಕೆಂಪಿ ಒಳಕ್ಕೆ ಬರುತ್ತಲೂ ಮಲ್ಲಿಯು ಓಡಿ ಹೋಗಿ ಅವಳನ್ನು ತಬ್ಬಿಕೊಂಡಳು: "ಅವ್ವಾ! ನಾನು ಕುದುರೆ ಮೇಲೆ ಕುಂತಿದ್ದುದು ನೋಡಿದೆಯಾ? ಹೆಂಗಿತ್ತವ್ವಾ?" ಎಂದು ಬೆಸಗೊಂಡಳು.

ಕೆಂಪಿ ಕಣ್ಣಿನಲ್ಲಿ ಕಾವೇರಮ್ಮ ತುಂಬಿದ್ದಳು: ಮಗಳ ತಲೆಯನ್ನು ನೇವರಿಸುತ್ತಾ ನುಡಿದಳು: "ಅವ್ವಾ! ಮಾದೇವಿ ವನವಾಸ ಓದಂಗೆ ಏನೋ ನಮ್ಮನೆಗೆ ಬಂದು ಎರಡು ದಿವಸ ಇದ್ದೆ. ಈಗ ತುರುಬಿನಲ್ಲಿರೋ ಹೂವಂಗಿದ್ದೀಯೆ. ನೀನು ಕುದುರೆಮೇಲೆ ಕುಂತಿದ್ದರೆ, ನಿಮ್ಮ ಹಕೀಂಗಿಂತ ಚೆನ್ನಾಗಿತ್ತು: ಮುದ್ದಾಗಿತ್ತು: ಗಂಭೀರವಾಗಿತ್ತು." ಎಂದು ಏನೇನೋ ಹೇಳಿದಳು. ಮಗಳು ಸ್ವಸಂತೋಷದಿಂದ ತಾಯಿಯ ತಲೆಯನ್ನು ಹಿಡಿದು ತನ್ನ ಕಡೆಗೆ ಎಳೆದುಕೊಂಡು ಅವಳ ಎರಡು ಕೆನ್ನೆಗೂ ಮುತ್ತುಕೊಟ್ಟು "ನಿನ್ನ ಮಲ್ಲಿ ನಿನಗೆ ಚೆನ್ನಾಗಿಲ್ಲದ್ದು ಯಾವಾಗ?" ಎಂದು ಹೊರಟಳು.

ಕೆಂಪಿ ಅವಳನ್ನು ಕೈಹಿಡಿದು ನಿಲ್ಲಿಸಿಕೊಂಡು ರಾಣಿಯ ಕಡೆಗೆ ತಿರುಗಿ "ಬುದ್ಧಿ, ಆನಂದಮ್ಮನವರು ಕಾದವರೆ." ಎಂದು ಏನೋ

ಸಂಕೋಚದಿಂದ ಹೇಳಿದಳು. ರಾಣಿಯು "ಮಲ್ಲಮ್ಮಣ್ಣಿ ನೋಡಿ ದಿರಾ ನಾವು ಮಾಡಿದ ಕೆಲಸ? ಅವರು ಕಾದವರಂತೆ? ಅಯ್ಯೋ ಪಾಪ! ಬನ್ನಿ, ಹೋಗಿ ಕಳಸಿಬರೋವ" ಎಂದು ಹೊರಟಳು. ಅವಳ ಅಪ್ಪಣೆಯಂತೆ ಕೆಂಪಿಯು ಫಲತಾಂಬೂಲ ತರಲು ಹೋದಳು.

ರಾಣಿಯೂ ಮಲ್ಲಿಯೂ ಈಚೆ ಬಂದರು. ಆನಂದಮ್ಮನ ಕಣ್ಣು ರಾಣಿಯನ್ನು ಕಂಡರೂ ಮಲ್ಲಿಯಮೇಲೆ ನಿಂತಿತು. ಏಕೋ ಅವ ಳನ್ನು ಕಂಡು ತಬ್ಬಿಕೊಳ್ಳಬೇಕು ಎನ್ನಿಸಿತು. ಆದರೆ, ಹೇಗೆ? ಆ ಭಾವವನ್ನು ಸಂವರಣ ಮಾಡಿಕೊಂಡು, "ಇನ್ನು ನಮಗೆ ಅಪ್ಪಣೆ ಯಾಗಬಹುದಲ್ಲ? ತಾವು ಆಯಾಸ ಪಟ್ಟಿದ್ದೀರಿ" ಎಂದಳು.

ರಾಣಿಯು ಹೇಳಿದಳು: "ನಿಜ ತಾಯಿ, ನನಗೇನೋ ಹೋಗಿ ಬಂದುದು ಆಯಾಸ ಆಗಿತ್ತು. ಆದರೆ ನಮ್ಮ ಮಲ್ಲಮ್ಮಣ್ಣಿ ನೋಡಿ, ಗಂಡಿಗಿಂತ ಗಂಡಾಗಿರೋದಾ? ಇವರನ್ನು ಕಂಡು ನಮ್ಮ ಆಯಾಸ ವೆಲ್ಲ ಮಾಯವಾಗಿ ಹೋಯಿತು. ನಮ್ಮ ಮಲ್ಲಮ್ಮಣ್ಣಿ ಸವಾರಿ ಹೆಂಗೆ ಮಾಡ್ತಾರೆ ನೋಡಿದಿರಾ?"

"ಮೊದಲಿಂದ ಅಭ್ಯಾಸವಾಗಿದೆಯೇನೋ?"

"ಎಲ್ಲಿ ಬಂತು ತಾಯಿ. ಇನ್ನೂ ಅವರು ಕುದುರೆ ಹತ್ತಿ ಸರಿ ಯಾಗಿ ಒಂದು ವರ್ಷ ಕೂಡಾ ಇಲ್ಲ."

ಮಲ್ಲಿಯು ಪ್ರತಿಭಟಿಸಿದಳು: "ಯಾಕೆ ಬುದ್ಧಿ, ಆ ಸಣ್ಣ ಕುದುರೆ ಮೇಲೆ ಸವಾರಿ ಮಾಡುತ್ತಿರಲಿಲ್ಲವಾ?"

"ಅಂಯ್! ಅದುಬುಡಿ. ನೀವು ಕೂತುಕೊಂಡರೂ ಕಾಲು ನೆಲದಮೇಲೆ ಎಳೆಯೋದು. ಅದಕ್ಕೂ ನಮ್ಮ ರಾಣಿಗೂ ಎಲ್ಲಿಂದೆಲ್ಲಿಗೆ? ಅದು ತುಂಬೇಗಿಡ; ಇದು ತೆಂಗಿನಮರ. ಅದಿರಲಿ, ತಾಯಿ, ನಮ್ಮ ಮಲ್ಲಮ್ಮಣ್ಣಿ ವೀಣೆ ಬಾರಿಸುತ್ತಾರೆ, ನೀವು ಕೇಳಬೇಕು. ನಾಳೆ ನಾವು ಇದ್ದರೆ ಹೇಳಿಕಳಿಸುತೀವಿ. ತಪ್ಪದೆ ಬನ್ನಿ, ತಾಯಿ."

ಆನಂದಮ್ಮನಿಗೆ ಮಲ್ಲಿಯನ್ನು ಮುಟ್ಟಬೇಕು ಎನ್ನುವಾಸೆ ತಡೆಯ ಲಾರದಷ್ಟು ಆಯಿತು: ಬಾಯಿಬಿಟ್ಟು ಕೇಳಿಯೂ ಕೇಳಿದಳು:

"ನಾನು ಇವರನ್ನು ಮುಟ್ಟಬಹುದೆ?"

ರಾಣಿಯು ಬೇಡವೆಂದಿದ್ದರೆ ಆನಂದಮ್ಮನು ಏನಾಗಿ ಹೋಗುತ್ತಿದ್ದಳೋ ?

ರಾಣಿಯು "ಅದಕ್ಕೇನು ತಾಯಿ? ತಾವು ಮುಟ್ಟಬೇಕು. ತಲೆ ಸವರಬೇಕು: ಅರಶಿನ ಕುಂಕುಮ ಇಟ್ಟುಕೊಂಡು ಮುತ್ತೈದೆಯಾಗಿ ಬಾಳು ಅಂತ ಹರಸಬೇಕು." ಎಂದಳು. ಮಾತು ಮನಸ್ಸು ತುಂಬಿ ಬಂದಂತೆ ಗಾಂಭೀರ್ಯ ಪೂರ್ಣವಾಗಿತ್ತು.

ಮಲ್ಲಿಯು ಹೋಗಿ ಆನಂದಮ್ಮನಬಳಿ ನಿಂತಳು. ಪಾದ ಮುಟ್ಟಬೇಕು ಎನ್ನಿಸಿತು. ಮುಟ್ಟಲಿಲ್ಲ. ತಲೆ ಬಗ್ಗಿ ವಿನಯವಾಗಿ ನಿಂತಳು.

ಆನಂದಮ್ಮನು ಏನೋ ವಿಶೇಷ ಸಂಭ್ರಮದಿಂದ ಮುನ್ನುಗ್ಗುತ್ತ ಆಶೆಯನ್ನು ಹಾಗೆಯೇ ಹಿಡಿದುಕೊಂಡಂತೆ, ತಡೆದಂತೆ, ಮಾಡಿಕೊಂಡು, ಆ ಮಲ್ಲಿಯ ಎರಡು ಕೈಗಳನ್ನೂ ಹಿಡಿದುಕೊಂಡು, "ಸಾವಿರ ವರ್ಷ ಚೆನ್ನಾಗಿ ಬಾಳು ಮಗಳೇ! ಓದಿ ವಿದ್ಯಾವತಿಯಾಗಿ ವಿವೇಕವಾಗಿ, ಸುಖವಾಗಿ, ಮುತ್ತೈದೆಯಾಗಿ ಬಾಳು." ಎಂದು ತಲೆಯಮೇಲೆ ಕೈಯಿಟ್ಟು ಬೆನ್ನು ಸವರಿ ಮಗ್ಗುಲಲ್ಲಿ ಕುಳ್ಳಿರಿಸಿಕೊಂಡಳು.

ಮಲ್ಲಿಗೂ ಆಕೆಯ ಮಗ್ಗಲು ತಾಯಿಮಡಿಲಂತೆ ಹಿತವಾಗಿತ್ತು. ಆನಂದಮ್ಮನ ಹರಕೆಯ ಮಾತು ಮೈಗೊಂಡು ಮಲ್ಲಿಯ ಮೈಮೇಲೆ ಆಡಿದಂತಾಗಿ ಅವಳಿಗೆ ಮೈ ಜುಮ್ಮೆಂದಿತು.

ಆನಂದಮ್ಮನಿಗಂತೂ ಅಮೃತಾಭಿಷೇಕವಾದ ಹಾಗೆ ಆಗಿ ಒಂದು ಗಳಿಗೆ ಮೈ ಪರವಶವಾಗಿ ಹೋಗಿತ್ತು.

ಕೆಂಪಿಯು ಫಲತಾಂಬೂಲವನ್ನು ತಂದಳು. ರಾಣಿಯು ಆನಂದಮ್ಮನಿಗೆ ಕುಂಕುಮವಿಟ್ಟು ತಾಂಬೂಲಕೊಟ್ಟು ಬೀಳ್ಕೊಟ್ಟಳು.

ಮಧ್ಯಾಹ್ನ ಮೂರುಗಂಟೆ. ಮಲ್ಲಣ್ಣನು ನಾಯಕನ ಅಪ್ಪಣೆಯಂತೆ ಶಂಭುರಾಮಯ್ಯನನ್ನು ಕರೆತಂದನು. ನಾಯಕನು ಅವನ ಮೊಕದಮೇಲಿದ್ದ ಸಂತೋಷವನ್ನು ಕಂಡು ಸಂತುಷ್ಟನಾಗಿ "ಅಯ್ಯನವರು ಏನೋ ಬಹಳ ಸಂತೋಷವಾಗಿರೋ ಹಂಗದೆ" ಅಂದನು.

ಶಂಭುರಾಮಯ್ಯನು ಕೈಮುಗಿದು, "ಹೌದು, ನಾಯಕರು

ಹೇಳಿದ್ದು ಬಹಳ ಸರಿ. ಈದಿನ ಶುಭ ಸಮಾಚಾರ ಬಂದಿದೆ. ಬ್ರಿಟಿಷ್ ಸರ್ಕಾರದವರು ಬಾಲಗಂಗಾಧರ ತಿಲಕರನ್ನು ಸೆರೆಯಿಂದ ಬಿಟ್ಟಿದ್ದಾರೆ" ಎಂದನು.

೨೨

ದಿವಾನರು ಬರುವರೆಂಬ ಸುದ್ದಿ ಮುಜ್ಜಿಗೇಹಳ್ಳಿಗೆ ಹೊಸಜೀವ ತಂದಿದೆ. ಸುತ್ತಮುತ್ತಿನವರೆಲ್ಲ ರೇಶಿಮೆ ಕಸುಬಿನವರು. ಅವರೆಲ್ಲ ಉತ್ತಮವಾದ ರೇಶಿಮೆ ಮಾಡುವುದರಿಂದ ಹಿಡಿದು ರೇಶಿಮೆ ತೆಗೆದು ತೋಡಿ ಲಡಿ ಮಾಡುವವರೆಗೂ ಎಲ್ಲ ಕೆಲಸಗಳನ್ನೂ ಅವರಿಗೆ ತೋರಿಸಲು ಸಿದ್ಧರಾಗಿದ್ದಾರೆ. ಅವರಿಗೆ ತೋರಿಸಬೇಕೆಂದಿರುವ ತೋಟತುಡಿಕೆಗಳೆಲ್ಲ ಝಳ ಝಳ ಇರಬೇಕೆಂದು ಆಗಿದೆ. ಆ ಊರಿನಲ್ಲಿ ಕುಲಿಮೆಯ ಸುಬ್ಬಾಚಾರಿ ಕೂಡ ಶುಭ್ರಾಚಾರಿ ಆಗಿ ತಿದಿಗೆ ಎಣ್ಣೆ ಸವರಿ, ಕೋಲಿಗೆ ಬಣ್ಣ ಬೊಳೆದು, ಕುಲಿಮೆಯ ಬೂದಿ ತೆಗೆದು ವಿಭೂತಿಕಟ್ಟಿ ಗಂಧ ಹಾಕಿಕೊಂಡು ಬರುತ್ತಿದ್ದಾನೆ. ಮರಗೆಲಸದ ಮೂಗೂರಪ್ಪ ಒಂದು ಸೊಗಸಾದ ಮಂದಾಸನ, ಒಂದು ಮಣೆ ಮಾಡಿದ್ದಾನೆ. ಅವನಾಶೆ "ಅವೆರಡೂ ದಿವಾನರಿಗೆ ಒಪ್ಪಿಸಿದರೆ, ಅವರಿಗೆ ದಿನಾ ದೇವರಪೂಜೆ ಮಾಡಬೇಕು ಅನ್ನಿಸಬೇಕು" ಎಂದು.

ಅಷ್ಟೇ ಅಲ್ಲ. ಹೊಲಗೇರಿ ಕೂಡ ಉತ್ತಮರ ಕೇರಿಯ ಹಾಗಿದೆ. ತುರುಕರ ಕೇರಿಯಿಂದ ಹತ್ತುಭಂಡಿ ಗೊಬ್ಬರ ಹೋಗಿ ಗೊಬ್ಬರದ ಗುಂಡಿಗೆ ಬಿದ್ದಿದೆ.

ತೋಟಗಳಿಗೆ ದಿನದಿನ ವೈಬವರು ಸುರಿಯುತ್ತಿದೆ. ಅಂತೂ ಊರು ಹೊಸ ಉಡೆ ಉಡಬೇಕೆಂದು ಎಣ್ಣೆ ಮಜ್ಜನಮಾಡಿದ ಹೆಣ್ಣಿನಂತಾಗಿದೆ.

ಊರಿನಲ್ಲಿ ಎಲ್ಲರಿಗೂ ಉತ್ಸಾಹ. ಎಲ್ಲರಿಗೂ ಸಂಭ್ರಮ.

ಆದಿನಕ್ಕೆಂದು ಹೊಸಬಟ್ಟೆಯಿಲ್ಲದವರು ಇದ್ದಷ್ಟೇ ಒಂದು ಜೊತೆ ಬಟ್ಟೆ, ಉಡೋಕೆ ತೊಡೋಕೆ, ಚೆನ್ನಾಗಿ ಗರಿಮುರಿ ಮಾಡಿಟ್ಟಿದ್ದಾರೆ. ಅಗಸರ ವೀರಣ್ಣನಿಗೆ ರಟ್ಟೆನೋವು: ಅವನ ಕತ್ತೆಗೆ ಬೆನ್ನುನೋವು.

ನಾಯಕ ಇದೇ ಸಮಯ ನಡೆದುಹೋಗಲು ಎಂದು ಒಂದು ಸಾವಿರರೂಪಾಯಿ ಖರ್ಚುಮಾಡಿ, ಊರನಡುವಿನ ರಾಜಮಾರ್ಗಗಳಿಗೆಲ್ಲ ಮತ್ತೆ ಜಲ್ಲಿ ಕಾಮಗಾರಿ ಮಾಡಿಸಿ, ಮಗ್ಗುಲಿನ ಚರಂಡಿ ತೆಗೆಸಿ, ಸೊಗಸು ಮಾಡಿಟ್ಟಿದ್ದಾನೆ.

ಹೆಣ್ಣು ಗಂಡಾದಿಯಾಗಿ ಊರಿಗೆ ಊರೇ ಸಂಭ್ರಮ ಪಡುತ್ತಿದೆ. ಆದರೆ ಒಬ್ಬನಿಗೆ ಮಾತ್ರ ಮಹಾಸಂಕಟ. ಉದರವ್ಯಾಧಿ ಮೂಲವ್ಯಾಧಿ ಯೆಂಬರು ಬೇನೆಪಟ್ಟಂತೆ ಮುಲಕುತ್ತಾ ಇದ್ದಾನೆ. ಅವನು ಪಟೇಲ ಮಾದೇಗೌಡ.

ಮಾದೇಗೌಡನು ನಾಯಕನಿಗೆ ಬಾದರಾಯಣ ಸಂಬಂಧದಲ್ಲಿ ಇದ್ದವನು. ಹಿರಿಯನಾಯಕನ ದಯೆಯಿಂದ ಹತ್ತಿರದ ಬಂಧು ವಾಗಿದ್ದ. ಈ ನಾಯಕನ ಸೋದರತ್ತೆ ಒಂದು ಹೆಣ್ಣುಮಗು ಹೆತ್ತು ತೀರಿಕೊಂಡಿದ್ದಳು. ಆಮಗು ನಾಯಕನ ಮನೆಯಲ್ಲಿಯೇ ಬೆಳೆಯಿತು. ಅದನ್ನು ಹಿರಿಯನಾಯಕರು ಮಾದೇಗೌಡನಿಗೆ ಕೊಡಬೇಕೆಂದರು. ಈ ನಾಯಕನಿಗೆ ಅದು ಇಷ್ಟವಿಲ್ಲ. "ಮಾದೇಗೌಡನ ಬುದ್ಧಿ ಕಳ್ಳನ ಕಡ್ಡಿಯಹಾಗೆ ಹರಿಯೋ ನೀರಿಗೆ ಎದುರು ಹೋಗೋ ಜಾತಿ ಮನೆಗೆ ಸೇರಿಸಿಕೊಂಡು ಒದ್ದಾಡೋಕಿಂತ ದೂರಇಟ್ಟು ಸುಖವಾಗಿರೋದು ಒಳ್ಳೇದು" ಎಂದಿದ್ದ. ಆದರೆ ಹಿರಿಯನಾಯಕನ ಮನಸ್ಸು ತನ್ನ ಔದಾರ್ಯದಲ್ಲಿ ಬಡವ ಬದುಕಲಿ ಎಂಬ ಭಾವನೆಯಿಂದ ಮಗನ ಮಾತನ್ನೂ ಗಮನಿಸದೆ ಮುಂದೆ ಹೋಗಿತ್ತು.

ನಾಯಕನು ರಾವ್ ಬಹದ್ದೂರು ಆದಮೇಲೆ ಡಿ. ಸಿ. ಯವರು "ಏನ್ರೀ, ನೀವ್ ಪಟೇಲರಾಗಿರೋದೇನ್ರೀ? ಒಬ್ಬ ಶೇಕದಾರ, ತಾಲ್ಲೋಕು ಗುಮಾಸ್ತೆ, ಕೊನೆಗೆ ಅಮಲ್ದಾರ್ರ ಆಳು, ಇನ್ನೂ ಕೊನೆಗೆ ಹೋದರೆ ಅಮಲ್ದಾರ್ರ ಕುದುರೆಕೂಡ" ನಿಮ್ಮನ್ನು ಕಂಡು ಹುಲ್ಲು ಹುರುಳಿ ಬಂತೋ ಅಂತ ಹು ಹು ಹು ಹು ಅನ್ನೋತರಾದಲ್ಲಿ

ಕೋದೆ? ದೇವರು ಕೊಟ್ಟಿದ್ದಾನೆ. ಸಾಕು. ಅದನ್ನು ಯಾರಿಗಾದರೂ ಕೊಟ್ಟುಬಿಡಿ" ಎಂದರು. ಪಟೇಲಿ ವಂಶಪಾರಂಪರ್ಯವಾಗಿ ಬಂದಿರುವ ಹಕ್ಕು. ಅದನ್ನು ಬಿಡುವುದೇ ಎಂದು ನಾಯಕ ಯೋಚಿಸಿ, ಇರಲಿ, ಎಂದು, ಇಪ್ಪತ್ತೈದು ವರುಷ ಮಾದೇಗೌಡರು ನೋಡಿಕೊಳ್ಳಲಿ ಎಂದು ಡಿ. ಸಿ. ಯವರ ಅಪ್ಪಣೆ ಪಡೆದು ಅವನಿಗೆ ವಹಿಸಿಕೊಟ್ಟಿದ್ದ. ಅವನಿಗೂ ಒಂದು ಒಳಆಸೆ ಇತ್ತು; ಅದರಿಂದ ಮಾದೇಗೌಡ ತೃಪ್ತನಾಗಿ ತನ್ನ ಮೇಲಿನ ದ್ವೇಷವನ್ನು ಬಿಟ್ಟು ಹಿತನಾದಾನೇನೋ ಎಂದು. ಆದರೆ ಮುಳ್ಳು ಮುಳ್ಳೇ, ಹೂವು ಹೂವೇ ಎಂಬಂತಿತ್ತು ಗೌಡನ ಮನಸ್ಸು.

ಅವನು ಯೋಚಿಸಿ ನೋಡಿದ: "ಎರಡು ಎಕರೆ ತೋಟ ಈಗ ಹೊಡೆದು ಬಿಡಬೇಕು. ಇದೇಸಮಯ" ಎನ್ನಿಸಿತು. ಅವನೂ ತನಗೆ ಬೇಕಾದ ಒಂದು ಪಟಾಲಂ ಕಟ್ಟಿದ್ದ. ನಾಯಕನಿಗಿಂತ ತಾನು ಹತ್ತು ವರುಷ ಚಿಕ್ಕವ. ಎಂದಿದ್ದರೂ ನಾಯಕ ಸಾಯಬೇಕು. ಅವನಿಗೆ ಮಕ್ಕಳಿಲ್ಲ. ತನ್ನ ಮಕ್ಕಳಲ್ಲಿ ಒಬ್ಬನನ್ನು ದತ್ತುಮಾಡಿಕೊಳ್ಳಲೇಬೇಕು. ಆಗ ಅವನ ಆಸ್ತಿಯೆಲ್ಲ ತನಗೇ ಬರಬೇಕು. ಎಷ್ಟೇ ಆಗಲಿ ಹೆಣ್ಣು ಸಂತತಿ ಎಂದು ಏನೇನೋ ಕನಸು ಕಾಣುತ್ತಿದ್ದವನಿಗೆ ಮಲ್ಲಿ ಬಂದಿ ಹಾಕಿಸಿಕೊಂಡು ಜನಾನಾ ಸೇರಿದಾಗ ಹೊಟ್ಟೆಯಲ್ಲಿ ಸುಣ್ಣ ಸುರಿದಂತಾಗಿತ್ತು. ಅಂದಿನಿಂದ ನಾಯಕನ ಮೇಲೆ ಅವನಿಗೆ ಉರಿಯಲ್ಲ: ವಿಷ ಕಾರುವಂತಾಗಿತ್ತು. "ಹಾಗೆ ಸಣ್ಣಹುಡುಗಿ ಬೇಕಾಗಿದ್ದರೆ ನನ್ನ ಮಗಳು ಮಾದೀನೆ ಕೊಡುವೆ" ಎಂದು ತನ್ನ ಪಟಾಲಂನಲ್ಲಿ ಆಗಾಗ ನುಡಿದೂಇದ್ದ. ಅಂತೂ ಇರಲಿ ಎಂದು ಮೀಸೆ ಹುರಿಮಾಡುತ್ತಿದ್ದವನಿಗೆ ದಿವಾನರು ಬರುವ ಸಂದರ್ಭ ನಾಯಕನಿಗೆ ಅವಮಾನ ಮಾಡುವ ಅವಕಾಶವನ್ನು ಕೊಟ್ಟಿದೆ ಎಂಬ ದುರ್ಭಾವನೆಯನ್ನು ತಂದಿತ್ತು.

ಕೆಂಪಿ ಮಲ್ಲಣ್ಣ ಇಬ್ಬರೂ ಮೈಸೂರಿನಿಂದ ಬಂದಿದ್ದರು. ಅವರ ಜೊತೆಯಲ್ಲಿ ಅವರ ಬಲವಂತದಿಂದ ಆನಂದನ್ನೂ ಶಂಭುರಾಮಯ್ಯನೂ ಬಂದಿದ್ದರು. ಸುತ್ತಮುತ್ತಲಿಂದ ಜನ ಜಾತ್ರೆಗೆ ಬಂದ ಹಾಗೆ ಬಂದಿದ್ದಾರೆ.

ನಾಯಕನು ಮೈಸೂರಿನಿಂದ ದಿವಾನರನ್ನು ಕರೆತಂದಿದ್ದಾನೆ. ಊರಬಾಗಿಲಲ್ಲಿ ಬಾಜಾಬಜಂತ್ರಿ ಪೂರ್ಣಕಲಶ ಎಲ್ಲ ಮರ್ಯಾದೆಗಳನ್ನೂ ತೆಗೆದುಕೊಂಡು ಬಂದು ಊರಿನವರೆಲ್ಲ ಕಾಣಿಸಿಕೊಂಡರು. ನಾಯಕನು ಅಲ್ಲಿ ಇದು ಅರಮನೆಯ ಮರ್ಯಾದೆಯೆಂದು ಒಂದು ದಿಂಡಿನ ಹಾರಹಾಕಿ, ಪಟೇಲರಿಂದ ಒಂದು, ಶಾನುಭೋಗರಿಂದ ಒಂದು, ಊರಿನ ಒಗ್ಗಟ್ಟಿನಪರವಾಗಿ ಪುರೋಹಿತರಿಂದ ಒಂದು, ಮಿಕ್ಕವರ ಪರವಾಗಿ ಹಕೀಂಸಾಬಿಯಿಂದ ಒಂದು, ಹಾರಗಳನ್ನು ಹಾಕಿಸಿದನು. ದಿವಾನರ ಸವಾರಿಯು ಸಾರೋಟಿನಲ್ಲಿ ಕುಳಿತು ಊರ ಮೆರವಣಿಗೆ ಮಾಡಿಕೊಂಡು ಅರಮನೆಗೆ ಚಿತ್ತೈಸಿತು. ನಾಯಕನು ಸಾರೋಟಿನ ಮಗ್ಗುಲಲ್ಲಿ ಕುದುರೆಯಮೇಲೆ ಕುಳಿತು ಬಂದನು.

ಅರಮನೆಯ ಬಾಗಿಲಲ್ಲಿ ಒಂದು ಸೊಗಸಾದ ಹಸಿರುವಾಣಿ ಮಂಟಪ. ಆ ವೈಭವ ನೋಡುವುದಕ್ಕೆ ಎರಡು ಕಣ್ಣು ಸಾಲದು. ಮೈಸೂರಾಯರು ಬಂದಾಗ ಮಾರ್ಕೆಟ್ಟಿನ ಮುಂದೆ ಹಾಕುತ್ತಿದ್ದಂತಹ ಸೊಗಸಾದ ಮಂಟಪ. ದಿವಾನರಿಗೆ ಮತ್ತೆ ಹಾರಾ ತುರಾಯಿ ಅತ್ತರು ಪನ್ನೀರು ಫಲತಾಂಬೂಲ ನಜರಾಣಿ ಎಲ್ಲವನ್ನೂ ಒಪ್ಪಿಸಿದೆ. ನಜರಾಣಿ ಸೊಗಸಾದ ರೇಶಿಮೆ ವಲ್ಲಿ: ರೇಶಿಮೆಯ ಬೂಟಾ ಮಗುಟ: ಎಂಟೆಂಟು ಗಜದ ಮೂರು ಗುಲಾಬಿ, ನೀಲಿ, ಬಿಳಿಯ ಬಣ್ಣದ ರೇಶಿಮೆ ಥಾನ್‌ಗಳು: ಒಂದು ಉತ್ತಮವಾದ ದಪ್ಪ ಅವರೆಕಾಳಿನ ಗಾತ್ರದ ವಜ್ರದ ಅಂತರಾಳದ ಕಟ್ಟಡದ ಉಂಗುರ.

ದಿವಾನರು ಪರಮಸಂತುಷ್ಟರಾಗಿ ನಾಯಕರ ಕೈಹಿಡಿದು ಕುಲುಕಿ ತಮ್ಮ ಸಂತೋಷವನ್ನು ಸೂಚಿಸಿದರು. ಅಲ್ಲಿ ನೆರೆದಿದ್ದ ಜನ ಅದನ್ನು ಕಂಡು ಸಂತೋಷದಲ್ಲಿ ಬೆರೆತು ಹೋಯಿತು: "ಬುಡೋ! ನಮ್ಮ ನಾಯಕನ ಭಾಗ್ಯ ಅಂದರೆ ಇದಲ್ಲವಾ? ದೇಶಾನಾಳೋ ದಿವಾನರೇ ಇವನ ಮನೆ ಬಾಗಿಲಿಗೆ ಬಂದು ಕೈ ಹಿಡಿದು ಕುಲುಕಿಬಿಟ್ಟರು ಅಂದ್ರೆ ಇನ್ನು ಏನೇಳೋದು! ಆ ಅಪ್ಪನ ಪುಣ್ಯ ಇಂಥಾ ಮಗ ಹುಟ್ಟಿದ. ಸಾರ್ಥಕ ಆಯಿತು" ಎಂದು ಮುಕ್ತಕಂಠರಾಗಿ ಹೊಗಳಿದರು.

ಮಾದೇಗೌಡನಿಗೆ ಮಾತ್ರ "ಬೇಕಾದ್ದಾಗಲಿ : ಇವನಿಗೆ ಒಂದು ಕರೀಗೆರೆ ಎಳೀಲೇಬೇಕು" ಎನ್ನಿಸಿತು.

ದಿವಾನರು ಪಾದರಸ. ಬಂದು ಇನ್ನೂ ಅರ್ಧ ಗಂಟೆಯಿಲ್ಲ. "ನಾಯಕರೆ, ತಮ್ಮ ಅರಮನೆ ಇಂಗ್ಲೆಂಡಿನ ಕ್ಯಾಸಲ್‌ಗಳಂತೆ ಇದೆ. ಆಯಿತು. ತಮ್ಮ ಊರು ಹೇಗಿದೆ ? ಏನೇನು ನೋಡಬೇಕು? ತೋರಿಸಿ, ನೋಡೋಣ ನಡೆಯಿರಿ" ಎಂದರು : ತಮ್ಮ ರುಮಾಲು ತೆಗೆದು ಹ್ಯಾಟ್ ಹಾಕಿಕೊಂಡು ಊರುಗೋಲು ಹಿಡಿದು ಹೊರಟೇಬಿಟ್ಟರು. ನಾಯಕನು ತೆಗೆದುಕೊಂಡಿದ್ದ ಕೊಡೆಯನ್ನು ಬೇಡವೆಂದು "ತಾವೂ ಹ್ಯಾಟ್ ಹಾಕಿಕೊಂಡುಬಿಡಿ" ಎಂದರು. ನಾಯಕನೂ ಹ್ಯಾಟ್ ಹಾಕಿಕೊಂಡು ಹೊರಟನು.

ದಾರಿಯಲ್ಲಿ ಸಣ್ಣಗೆ ಹ್ಯಾಟಿನಮೇಲೆ ಒಂದು ಉಪನ್ಯಾಸ ಮಾಡಿದರು. "ನಮ್ಮ ದೇಶದಲ್ಲಿ ಬಿಸಿಲು ಬಹಳ. ಈ ಬಿಸಿಲಿನಲ್ಲಿ ಒಣಗ ಬೇಕಾಗಿಲ್ಲ. ಆಫ್ರಿಕಾ, ಅಮೆರಿಕಾ, ಮೊದಲಾದ ಕಡೆಗಳಲ್ಲೂ ಈ ಹ್ಯಾಟ್ ಬಹಳ. ನಮ್ಮ ರೈತರೆಲ್ಲ ಉಳೋವಾಗ ಹ್ಯಾಟ್ ಹಾಕ್ಕೊಂಡರೆ ಬಹಳ ಒಳ್ಳೆಯದು. ನಮ್ಮ ಶ್ರೀರಂಗಪಟ್ಟಣದ ಸಿದ್ದಲಿಂಗ ದೇವರು ನೋಡಿದ್ದೀರಾ? ಅವರು ಒಂದು ನಿಕ್ಕರ್, ಒಂದು ಬನಿಯರ್, ಒಂದು ಹ್ಯಾಟ್ ಹಾಕ್ಕೊಂಡು ನೆಲ ಉಳುತ್ತಾರೆ. ತೋಟದಲ್ಲಿ ಗೊಬ್ಬರ ಹೊತ್ತು, ಕಳೆಕಿತ್ತು, ತಾವೇ ಆಳಿಗಿಂತ ಚನ್ನಾಗಿ ದುಡಿಯುತ್ತಾರೆ. ನಮ್ಮ ರೈತಾಪಿಯೆಲ್ಲಾ ಅವರ ಹಾಗೆ ಆಗಬೇಕು. ಅಸೆಂಬ್ಲಿಯಲ್ಲಿ ಅವರ ಮಾತು ಕೇಳಿದ್ದೀರೇನು ? ಕಣ್ಣು ಮುಚ್ಚಿಕೊಂಡು ಹೇಳೋಕೆ ಷುರುಮಾಡಿದರೆ, ಒಂದು ಗಂಟೆ ಆಗಲಿ, ಜಗ್ಗೋದಿಲ್ಲ. ಹಾಗೆ, ರೈತ ನಮ್ಮ ದೇಶದ ಬೆನ್ನುಮೂಳೆ. ಅವನು ಗಟ್ಟಿಯಾಗಬೇಕು. ಅವನಿಗೆ ಈಗ ಮಾತು ಬರೋಲ್ಲ. ಅವನು ಮಾತು ಕಲಿಯಬೇಕು. ಜಪಾನಿನಿಂದ ಹಿಡಿದು ಆಸ್ಟ್ರೇಲಿಯ, ಕ್ಯಾಲಿಫೋರ್ನಿಯವರೆಗೆ ಎಲ್ಲೆಲ್ಲಿ ಏನೇನು ಸುಧಾರಣೆ ಆಗಿದೆ ಅದೆಲ್ಲ ಕಲಿಯಬೇಕು. ಮನೆ ಮನೆಯಲ್ಲೂ ನಮ್ಮ ನಾಯಕರ ಮನೆಯಲ್ಲಿರುವ ಹಾಗೆ ಸಂತೋಷ ಸೌಭಾಗ್ಯ ತುಂಬಬೇಕು." ಎಂದು ಸಂಭ್ರಮದಿಂದ

ಮುಂದೆ ಬರಬೇಕಾದ ಭವ್ಯಭವಿಷ್ಯತ್ತಿನ ವೈಭವಸಂಪನ್ನಚಿತ್ರವನ್ನು ವರ್ಣಿಸುತ್ತ ನಡೆದರು.

೨೩

ದಾರಿಯಲ್ಲಿ ಕುಲಿಮೆ ಸಿಕ್ಕಿತು. ಸುಬ್ಬಾಚಾರಿ ಬಂದು ಅಡ್ಡ ಬಿದ್ದು ಒಂದು ಹಾರಾ ತುರಾಯಿ ಒಪ್ಪಿಸಿದನು. ದಿವಾನರ ಸವಾರಿಯು ಅಲ್ಲಿ ನಿಂತಿತು. "ಏನು ಆಚಾರ್ರೇ, ದಿನಕ್ಕೆ ಎಷ್ಟು ಕಬ್ಬಿಣ ತಟ್ಟು ತ್ತೀರಿ? ನಿಮಗೆ ಎಷ್ಟು ಸಿಕ್ಕುತ್ತೆ? ತಿದಿಯುವವನಿಗೆ ಎಷ್ಟು ಕೊಡು ತ್ತೀರಿ? ಇಜ್ಜಲು ಎಲ್ಲಿಂದ ತರುತ್ತೀರಿ? ನಿಮಗೆ ಕಬ್ಬಿಣ ಎಲ್ಲಿಂದ ಸಪ್ಲೈ ಆಗುತ್ತೆ? ಒಂದು ಗುಳ ಮಾಡೋಕೆ ಎಷ್ಟು ಹೊತ್ತು ಕಾಯಿಸ ಬೇಕು? ಎಂದು ಪ್ರಶ್ನೆಗಳ ಸುರಿಮಳೆ ಹಾಕಿಬಿಟ್ಟರು. ಸುಬ್ಬಾಚಾರಿಗೆ ಬಾಯಿ ತೊದಲು ಬಂದುಬಿಟ್ಟಿತು. "ಮಹಾಸ್ವಾಮಿ! ಈ ತಿದಿ ನಮ್ಮ ತಾತ ಮಾಡಿಸಿದ್ದು ಬುದ್ಧಿ. ಆ ಚಮ್ಮಟಿಗೆ ನಮ್ಮ ಅಪ್ಪ ತಾನೇ ಮಾಡಿದ್ದು ಪಾದ." ಎಂದು ಏನೇನೋ ಹೇಳುವುದಕ್ಕೆ ಷುರುಮಾಡಿದ. ನಾಯಕನು "ಅಲ್ಲ ಕಣೋ, ಬುದ್ಧಿಯವರು ಕೇಳಿದ್ದಕ್ಕೆ ಹೇಳೋ!" ಎನ್ನಲು, ಅವನಿಗೆ ಇನ್ನೂ ಗಾಬರಿಯಾಗಿ ಹೋಗಿ "ಅದೆಲ್ಲಾ ನಮ್ಮ ಬುದ್ಧಿಯೋರು ಎಂಗೆ ಹೇಳಿದರೆ ಹಂಗೆ! ತಮ್ಮ ಪಾದ" ಎಂದುಬಿಟ್ಟ. ದಿವಾನರು "ನೋಡಿ ನಮ್ಮವರಿಗೆ ಇದೊಂದೂ ಗೊತ್ತಿಲ್ಲ. ಇದೆಲ್ಲಾ ಚಾರ್ಟ್ ಹಾಕಬೇಕು. ದಿನದಿನವೂ ರಿಕಾರ್ಡ್ ಬ್ರೇಕ್ ಮಾಡೋಕೆ ಪ್ರಯತ್ನ ಮಾಡಬೇಕು. ಇರಲಿ. ಏನಯ್ಯಾ ಆಚಾರ್ರೇ! ನೀವು ಕಬ್ಬಿಣ ಉಕ್ಕು ಮಾಡಿತ್ತೀರೋ" ಎಂದರು.

"ಮಾಡುತೀವಿ ಮಹಾಪಾದ!"

"ಎಷ್ಟು ಮಾಡುತೀರಿ!"

"ಆದಷ್ಟು ಮಹಾಪಾದ."

ನಾಯಕನು, ಆ ಉತ್ತರದಿಂದ ದಿವಾನರಿಗೆ ನಗು ಬಂದುದನ್ನು ನೋಡಿ, "ಮಹಾಸ್ವಾಮಿ, ಅವನು ಗಾಬರಿಯಾಗಿದ್ದಾನೆ. ಇವರ ಮನೆತನ ಕತ್ತಿ ಮಾಡುವುದರಲ್ಲಿ ಬಹು ಪ್ರಸಿದ್ಧವಾದುದು. ಆದರೆ, ಈಗ ಸರ್ಕಾರದ ರೂಲ್ಸು: ಮಾಡೋ ಹಾಗಿಲ್ಲ. ಈಗಲೂ ಹಳೇ ಕಾಲದ ಎರಡು ಕತ್ತಿ ಇವರ ಮನೆಯಲ್ಲಿ ಇದ್ದಾವೆ. ತಂದು ತೋರಿಸಯ್ಯಾ ?"

ಸುಬ್ಬಾಚಾರಿಯು ಹೆದರಿ ಜೊತೆಯಲ್ಲಿದ್ದ ಪೋಲೀಸ್ ಸೂಪರಿಂಟೆಂಡೆಂಟರ ಮೊಗ ನೋಡಿದನು. ದಿವಾನರು ನಕ್ಕು ಅವರ ಮೊಕ ನೋಡಿ, "ಹಿ ಈಸ್ ಅಫ್ರೈಡ್ ಆಫ್ ಯು ಐಸೆ, ಪರ್ಮಿಟ್ ಹಿಂ" ಎಂದರು. ಅವರ ಅಪ್ಪಣೆಯಾಯಿತು. ಸುಬ್ಬಾಚಾರಿಯು ಒಳಕ್ಕೆ ಹೋಗಿ ಹಿಂದಿನ ಕಾಲದ ಎರಡು ಕತ್ತಿಗಳನ್ನು ತಂದನು. ಅವುಗಳ ಪರೀಕ್ಷೆಯೂ ನಡೆಯಿತು. ಮೂರು ನಾಲ್ಕು ಅಂಗುಲ ಬೆಳೆದ ಹಲ್ಲು ಚಕ್ಕನೆ ಹಾರಿ ಹೋಯಿತು. ಅದನ್ನು ಕತ್ತರಿಸುವಾಗ ನೆಗೆದು ಕೂತು ಕತ್ತಿ ಬೀಸಿದ ಚಾತುರ್ಯ ದಿವಾನರ ಮನಸ್ಸಿಗೆ ಹಿಡಿಯಿತು.

ದಿವಾನರು ಕತ್ತಿಗಳನ್ನು ಪರೀಕ್ಷಿಸಿದರು: "ಇದು ಡಮಾಸ್ಕಸ್ ಸ್ಟೀಲ್. ನಾಯಕರೆ ಬಲ್ಲಿರಾ ? ನಮ್ಮ ದೇಶದಿಂದ ಇಂಗ್ಲೆಂಡಿಗೆ ಉಕ್ಕು ಹೋಗುತ್ತಿತ್ತು. ಈಗ ಕಬ್ಬಿಣದ ಮೊಳೆ, ಕೊನೆಗೆ ಸೂಜಿ ಕೂಡ ನಮಗೆ ಹೊರ ದೇಶದಿಂದ ಬರಬೇಕು. ಇದು ತಪ್ಪಬೇಕು. ನಮ್ಮ ಜನದಲ್ಲಿ ಸ್ವದೇಶೀ ಅವತಾರಬೇಕು. ಈಗ ಬಂಗಾಳದಲ್ಲಿ ಅಷ್ಟಿದೆ. ಮಹರಾಷ್ಟ್ರದಲ್ಲಿ ಹುಟ್ಟುತ್ತಿದೆ. ನಮ್ಮಲ್ಲಿ ಇನ್ನೂ ಆ ಕೂಗು ಅಲ್ಲಲ್ಲಿ ಕೇಳುತ್ತಿದೆ: ಅಷ್ಟೆ. ನೋಡಿ, ನಾನು ಪೂನಾದಲ್ಲಿ ಒಬ್ಬ ಪುಣ್ಯಾತ್ಮನ್ನ ಕಂಡಿದ್ದೆ. ಆತ ಸ್ವಂತ ದಾರ ತೆಗೆದು ಅದರಿಂದ ಬಟ್ಟೆ ಮಾಡಿಸಿ ಉಟ್ಟುಕೊಳ್ಳುತ್ತಿದ್ದ. ಅದು ಸ್ವದೇಶೀ ಭಾವನೆ! ಜೊತೆಗೆ ಸ್ವದೇಶೀ ಪರದೇಶಿಯ ದ್ವೇಷವಾಗದೆ, ಸ್ವದೇಶಿಯ ಪ್ರೇಮವಾಗಬೇಕು. ಇರಲಿ, ಈಗ ಈ ಉಕ್ಕು ಮಾಡುವ ತರ ಇವರಿಗೆ ಗೊತ್ತೋ ?"

"ಇಲ್ಲ ಸ್ವಾಮಿ, ಇಷ್ಟು ಸೊಗಸಾದ ಉಕ್ಕು ಇವರ ಅಪ್ಪನ ಕಾಲಕ್ಕೇ ಹೋಯಿತು. ಇವನು ಕೊಡೋಹಂಗೆ ಹದ ಯಾರೂ

ಕೊಡೋದಿಲ್ಲ. ಆದರೂ ಆನೀರು ಕುಡಿಸೋದು ಇವರ ಅಪ್ಪನಿಗೇ ಆಗಿ ಹೋಯಿತು."

"ನೋಡಿ, ಇಲ್ಲಿದೆ ನಮ್ಮ ಅವನತಿ, ನಾಯಕರೆ, ಎಲ್ಲಾ ಕಸ್ತೂರಿ ಕಟ್ಟಿದ ಬಟ್ಟೆಯಾಗಿದೆ. ಕಸ್ತೂರಿ ಹೋಗಿದೆ. ನಾವು ಕಸ್ತೂರಿ ತರ ಬೇಕು. ಆಗ ದೇಶೋದ್ಧಾರ. ಬಹುಶಃ ಎಲ್ಲಾ ನಾವು ಪರದೇಶದವ ರಿಂದಲೇ ಕಲಿಯಬೇಕೋ ಏನೋ? ಅದಕ್ಕೇ ನಾನು ಇಂಗ್ಲಿಷ್ ಕಲಿಯಿರಿ; ಇಂಗ್ಲಿಷ್ ಕಲಿಯಿರಿ ಎನ್ನುತ್ತಿರುವುದು. ಇಂಗ್ಲಿಷ್ ಕಲಿ ತವರಿಗೆ ಇರುವ ದೇಶಾಭಿಮಾನ ಇಂಗ್ಲಿಷ್ ಕಲಿಯದವರಿಗಿಲ್ಲ. ಆಯಿತು. ಕಬ್ಬಿಣ, ಎಲ್ಲಿಂದ ತರುತ್ತಾರೆ?"

"ಯಾವುದಾದರೂ ಹಳೆಯ ಕಬ್ಬಿಣ ಅಥವಾ ಮಳವಳ್ಳಿ ಕಡೆ ಯವರು ಆಗಾಗ ಒಂದಿಷ್ಟು ಕಬ್ಬಿಣ ತಂದು ಮಾರುತ್ತಾರೆ. ಆದರೆ ಅಷ್ಟು ಬರುವುದಿಲ್ಲ. ಅಲ್ಲೀದು ಒಳ್ಳೆಯ ನಾಡುಕಬ್ಬಿಣ."

"ನಮ್ಮಲ್ಲಿ, ಅದರಲ್ಲೂ ಬಾಬಾ ಬುಡ್ಡನ್‌ದಲ್ಲಿ, ಒಳ್ಳೆಯ ಕಬ್ಬಿಣದ ಅದುರು ಇದೆ. ಆದರೆ ನಾವು ಒಂದು ಮಣ, ಎರಡು ಮಣ, ಮಾಡಿ ಸಾಕು ಅನ್ನುವಕಾಲ ಹೋಯಿತು. ಅಮೇರಿಕದಲ್ಲಿ ಕಾರ್ನಿಗಿ ಹುಟ್ಟಿ ಕಬ್ಬಿಣ, ಕಬ್ಬಿಣ, ಎಂದು ಕೂಗಿಬಿಟ್ಟ. ಲೋಕವೆಲ್ಲ ಕಬ್ಬಿಣ ಆಗಿ ಹೋಗುತ್ತಿದೆ. ನಾವು ಒಂದು ಕಬ್ಬಿಣದ ಕಾರ್ಖಾನೆ ಮಾಡಬೇಕು. ಆದರೆ ಅದಕ್ಕೆ ಬ್ರಿಟಿಷ್ ಸರಕಾರ ಒಪ್ಪಬೇಕು. ಇರಲಿ."

"ಯಾಕೆ ಬುದ್ಧಿ, ಬ್ರಿಟಿಷ್ ಸರಕಾರ ಅಪ್ಪಣೆ ಕೊಡೋಕಿಲ್ವಾ ?" ನಾಯಕನು ಕೇಳಿದನು. ದಿವಾನರು ನಕ್ಕು ಹೇಳಿದರು :

"ಊರಿಗೊಬ್ಬ ರಾವ್ ಬಹದ್ದೂರ್ ಮಾಡಾರು. ಕಾರ್ಖಾನೆ ಮಾಡಗೊಡುವುದಿಲ್ಲ. ನಾಯಕರೇ! ಬ್ರಿಟಿಷರ ದೃಢಮುಷ್ಟಿ ನಮ್ಮ ಜನಕ್ಕೆ ಇನ್ನೂ ಗೊತ್ತಿಲ್ಲ. ಚಾಕುಬೇಕು ರಾಡ್ಜರ್ಸ್, ಕ್ಷೌರದಕತ್ತಿ ಬೇಕು ಹಾಲೋವೇಸ್, ಗರ್ಡರ್ ಬೇಕು ಮ್ಯಾಂಚೆಸ್ಟರ್, ಉಡೋಕೆ ಬಟ್ಟೆಬೇಕು ೧೭೦೨–ನಾವು ಬದುಕುವವರೇ ? ಬ್ರಿಟನ್ ಇಂಡಿಯವನ್ನು ಹಿಡಿದಿರೋದು ಪಗೋಡಮರ ಎಂದು. ಏನು ಮಾಡೋದು ? ಇದೆಲ್ಲ ಇರೋದು ಇಂಗ್ಲಿಷಿನಲ್ಲಿ. ನಿಮಗೆ ಅನೇಕರಿಗೆ ಇಂಗ್ಲಿಷ್ ತಿಳೀದು.

ಇಂಗ್ಲಿಷ್ ಓದಿದೋರೂ ಷೇಕ್ಸ್‌ಪಿಯರ್, ಮಿಲ್ಟನ್, ಷೆಲ್ಲಿ, ಟೆನ್ನಿಸನ್, ಎಂದು ಕೂರುವರೇ ಹೊರತು, ಈ ಎಕನಾಮಿಕ್ಸ್, ಅಂದರೆ ಹಣಕಾಸು ಈ ವಿಚಾರವೇ ನೋಡೋಲ್ಲ. ಹಣ, ಹಣ, ಹಣ, ದೇಶದಲ್ಲಿ ಪ್ರತಿಯೊಬ್ಬರೂ ಹಣವಂತರಾಗಬೇಕು. ಸರಕಾರಬೇಕು ಅಂದಾಗ ಹತ್ತು ಕೋಟಿ ಸಾಲ ದೇಶದಲ್ಲಿ ಹುಟ್ಟೋ ಹಾಗೆ ಆಗಬೇಕು. ಹಾಗೆ ಆಗಲು ಜನ ವಿದ್ಯಾವಂತರಾಗಬೇಕು. ಅದಕ್ಕೇ ನಾನು ಯೂನಿವರ್ಸಿಟಿ ಬೇಕು ಅನ್ನುವುದು. ನಾನು ದಿವಾನಗಿರಿ ಬಿಡುವುದರೊಳಗೆ ಒಂದು ಕನ್ನಂಬಾಡಿ, ಒಂದು ಯೂನಿವರ್ಸಿಟಿ, ಒಂದು ಕಬ್ಬಿಣದ ಕಾರ್ಖಾನೆ ಇಷ್ಟುಮಾಡಿ ತೀರುತ್ತೇನೆ ಎಂದು ಪಟ ಕಟ್ಟಿದ್ದೇನೆ. ಮಾಡಿತೀರುತ್ತೇನೆ. ಇರಲಿ. ಮುಂದೆ ಹೋಗೋಣ, ಥ್ಯಾಂಕ್ಸ್ ಆಚಾರ್‍ರೆ. ನೋಡಿ, ಉಕ್ಕು, ಉಕ್ಕು, ನಿಮ್ಮಪ್ಪನ ಹಾಗೆ ನೀವೂ ಉಕ್ಕುಮಾಡಿ."

ದಿವಾನರು ಮುಂದೆ ಹೊರಟರು. ದಾರಿಯಲ್ಲಿ ಒಂದು ಭಾರಿಯ ಆಲದ ಮರ ಸಿಕ್ಕಿತು. ದಿವಾನರು ಅದನ್ನು ನೋಡಿದರು. ನಾಯಕನು ಮುಂದೆಬಂದು ಅದರ ವಿಚಾರ ಹೇಳಿದನು: "ಬುದ್ಧಿ ಈಗ ಇದು ಸುಮಾರು ನೂರುವರ್ಷದ ಮರ. ನಮ್ಮ ಹಿರಿಯರು ನೆಟ್ಟಿದ್ದು. ನಮ್ಮತಂದೆ ನೋಡೋ ವ್ಯಾಳ್ಯಕ್ಕೆ ಇದು ಚೆನ್ನಾಗಿ ಬಿಳಲು ಬಿಟ್ಟಿತ್ತಂತೆ, ನೋಡಿ. ಅದರ ನೆತ್ತಿಮೇಲೆ ಯಾವಾಗಲೂ ಜೆಜ್ಜೇನು ಹತ್ತು ಹನ್ನೆರಡು ಗೂಡು ಕಟ್ಟೇ ಇರುತ್ತವೆ."

"ನೋಡಿ, ನಾಯಕರೆ, ಈ ಜೇನುಗೂಡು ತಾನಾಗಿ ಹುಳು ಕಟ್ಟಿದ್ದು. ಆ ದೇಶಗಳಲ್ಲಿ ಈ ಹುಳು ಸಾಕುತ್ತಾರೆ; ದೊಡ್ಡ ದೊಡ್ಡ ಪೆಟ್ಟಿಗೆಗಳಲ್ಲಿ ಅದನ್ನು ಕೂಡಿಟ್ಟು ಆಗಾಗ ಗೂಡಿನಿಂದ ಜೇನು ತೆಗೆಯುತ್ತಾರೆ. ಬ್ರೆಡ್ ಜೊತೇಲಿ, ಹಣ್ಣು ಜೊತೇಲಿ, ಹಾಲು ಜೊತೇಲಿ, ಜೇನುತುಪ್ಪ ತಿನ್ನುತ್ತಾರೆ. ನಮಗೆ ಸಕ್ಕರೆ ಬೆಲ್ಲ ಸಾಕಾದಷ್ಟು ಇಲ್ಲ: ಇನ್ನು ಜೇನು ಎಲ್ಲಿಂದ ಬರಬೇಕು? ಇಂಥಾದ್ದೊಂದು ಮರ ಊರ ಮಗ್ಗುಲಲ್ಲಿದ್ದರೆ ಅಲ್ಲಿ ಅದಕ್ಕೊಂದು ಕಟ್ಟೆ ಕಟ್ಟಿ ಅದರ ಕೆಳಗೆ ಹುಡುಗರು ಆಡುವ ಮೈದಾನ ಮಾಡುತ್ತಾರೆ."

"ನಮ್ಮಲ್ಲಿ ತಪ್ಪದೆ ಅಲ್ಲಿ ಎರಡ ಮಾಡ್ತಾರೆ?" ಯಾರೋ

ಗುಂಪಿನಿಂದ ಹೇಳಿಬಿಟ್ಟರು ದಿವಾನರೂ ನಕ್ಕು "ಅದನ್ನು ಸರಿಯಾಗಿ ಉಪಯೋಗಿಸಿದರೆ ಅದೂ ಒಳ್ಳೆ ಗೊಬ್ಬರ" ಎಂದು ಮುಂದೆ ಹೊರಟರು.

ದೊಡ್ಡ ಆಲದ ಮರದಿಂದ ಸುಮಾರು ಒಂದು ಫರ್ಲಾಂಗು ದೂರದಲ್ಲಿ ರೇಶಿಮೆಪಾಳ್ಯ. ಅಲ್ಲೆಲ್ಲಾ ತುರುಕರು. ಡಾರಿಯುದ್ದಕ್ಕೂ ಹಿಪ್ಪುನೇರಿಲೆತೋಟ. ಹಕೀಂ ಆ ಪಾಳ್ಯದ ಯಜಮಾನ. ಅರಮನೆಯಲ್ಲಿ ತಬೇಲಿ ಮೊಕ್ತೇಸರ್: ಮನೇಲಿ ರೇಶಿಮೆಗಾರ. ದಿವಾನರು ಪಾಳೆಯಕ್ಕೆ ಬರುತ್ತಿದ್ದ ಹಾಗೆಯೇ ಹಕೀಂ ಮುಂದೆಬಂದ: ಅವನ ಜೊತೆಯಲ್ಲಿ ಹತ್ತು ಹದಿನೈದು ಜನರು. ಹಕೀಂ ದೊಡ್ಡ ಹಾರತಂದು ದಿವಾನರ ಕೊರಳಿಗೆ ಹಾಕಿದನು. ನಾಯಕನ ಕೊರಳಿಗೂ ಒಂದು ದಿಂಡು ಹಾರಬಿತ್ತು. ಸೂಪರಿಂಟೆಂಡೆಂಟರಿಗೆ ಒಂದು, ಪಟೇಲ್ ಶಾನುಭೋಗರಿಗೆ ಒಂದೊಂದು ಹಾರಗಳು ಹಾಕಿದಮೇಲೆ ಹಕೀಂನು ಪಾಳೆಯುವನ್ನು ತೋರಿಸಿದನು. ಸುತ್ತಲೂ ಮನೆಗಳು. ಆದರ ನಡುವೆ ಸುಮಾರು ಒಂದು ಎಕರೆಯಷ್ಟು ವಿಸ್ತಾರವಾದ ಒಂದು ಬಯಲು. ಅಲ್ಲಿ ಚಂದ್ರಂಕಿಗಳು ಅಲ್ಲಲ್ಲಿ ತಡಕೆಗಳು. ಬಿಸಿಲು ಗಾಳಿ ಹೆಚ್ಚಾದಾಗ ಅವುಗಳ ಉಪಯೋಗ. ಅಲ್ಲಲ್ಲಿ ಎತ್ತರವಾದ ಗಿಡಗಳು. ಬಯಲಿನಸುತ್ತ ತಂತಿಬೇಲಿ.

ದಿವಾನರು ಒಂದೊಂದಾಗಿ ನೋಡಿಕೊಂಡು ಬಂದರು. ಅಲ್ಲಿಯೂ ಅವರ ಪ್ರಶ್ನೆಗಳ ಸುರಿಮಳೆ ಆರಂಭವಾಯಿತು: "ನೀವು ರೇಶಿಮೆ ಎಷ್ಟು ತಯಾರಿಸುತ್ತೀರಿ?"

"ಸುಮಾರು ಒಂದೊಂದು ಸಲಕ್ಕೆ ಎಂಟು ಹತ್ತುಮಣ ಆಗಬೋದು ಖಾವಂದ್"

"ಅದೆಲ್ಲಿಗೆ ಕಳುಹಿಸುತ್ತೀರಿ?"

"ನಮಗೆ ಅದೆಲ್ಲಾ ಗೊತ್ತಿಲ್ಲ ಖಾವಂದ್! ನಾವು ತಕೊಂಡು ಹೋಗಿ ಮೈಸೂರು ಬೆಂಗಳೂರು ವರ್ತಕರಿಗೆ ಮಾರಿಬಿಡುತ್ತೇವೆ. ಅವರು ಅದನ್ನು ತೊಳೆದು, ಬಣ್ಣಹಾಕಿಸಿ, ಬೊಂಬಾಯಿ ಕಡೆ ಕಳುಹಿಸುತಾರಂತೆ, ಖಾವಂದ್"

"ಪರದೇಶಕ್ಕೆ ಹೋಗುತ್ತದೆ. ಅಲ್ಲಿ ಅವರಿಗೆ ದಾರ ಎಷ್ಟು ದಪ್ಪ ಇರಬೇಕು? ಎಷ್ಟುದ್ದ ಇರಬೇಕು? ಯಾವಬಣ್ಣ ಬೇಕು? ಅದೆಲ್ಲ ತಿಳಿದಿದ್ದೀರಾ?"

"ಅದೇನೋ ನಮ್ಮದಾರ ದಪ್ಪ ಅಂತಾರೆ ಖಾವಂದ್, ಬಣ್ಣ ದಘೂತಿ ಅದೆಲ್ಲಾ ನಮಗೆ ಗೊತ್ತಿಲ್ಲ."

"ಈ ದಾರಕ್ಕಿಂತ ಸಣ್ಣದಾಗಿ ತೆಗೆಯುವುದಕ್ಕೆ ಆಗುವುದಿಲ್ಲವೋ?"

"ನಮ್ಮ ದಾದಾ ಇವ್ರಾರೆ ಖಾವಂದ್, ತಾವು ನೋಡಬೇಕೆಂದರೆ ತಮ್ಮ ಎದುರಿಗೇ ದಾರ ತೆಗೀತಾರೆ. ಅವರು ಎಡಗೈಯಲ್ಲಿ ಒಂದು ಉಗುರು ಬೆಳೆಸಿಕೊಂಡಿದ್ದಾರೆ. ಅದರಲ್ಲಿ ಸಣ್ಣ ತೂತು ಮಾಡಿಕೊಂಡಿದ್ದಾರೆ. ಅದರ ಕಣ್ಣಿಂದ ದಾರ ತೆಗೀತಾರೆ. ಅದು ಮರೀತುಪಟದ ಎಳೇಗಿಂತ ಸಣ್ಣಗೆ ಬರುತದೆ, ಖಾವಂದ್!"

"ನೋಡೋಣ."

ದಿವಾನರ ಮುಂದೆ ದಾದಾಪೀರ್ ಖಾನನು ಎಳೆ ತೆಗೆದನು. ಹಕೀಂ ಹೇಳಿದಂತೆಯೇ ಅದು ಬಲು ನವಿರಾಗಿತ್ತು.

"ಹೀಗೆ ಎಲ್ಲರೂ ತೆಗೆಯುವುದಕ್ಕಾಗುವುದಿಲ್ಲವೆ? ಖಾನ್ ಸಾಹೇಬರೆ?"

"ಖಾವಂದ್! ಒಬ್ಬರ ಕೈಯಲ್ಲಾದುದು ಇನ್ನೊಬ್ಬರ ಕೈಯಲ್ಲಾಗಬೇಕು. ಆದರೆ, ಅದೇನೋ ದುನಿಯಾ ನಂಗೆ ಗೊತ್ತಿಲ್ಲ. ಇವರೆಲ್ಲ ಭೇಷ್, ಭೇಷ್ ಅಂತಾರೆ. ಒಬ್ಬರೂ ಮಾಡೋದಿಲ್ಲ."

"ನಿಜ. ಈತ ಹೇಳಿದ್ದು ನಿಜ. ಬಾಯಲ್ಲಿ ಎಲ್ಲರೂ ಆಡುತ್ತಾರೆ. ಕೈಯಲ್ಲಿ ಯಾರೂ ಮಾಡುವುದಿಲ್ಲ. ಜರ್ಮನಿನಲ್ಲಿ ಹೀಗೇ ತೆಗೆಯುತ್ತಾರೆ. ಅವರು ಅದಕ್ಕೆ ಯಂತ್ರಮಾಡಿದ್ದಾರೆ. ಅದಕ್ಕೆ ಫಿಲೇಚರ್ಸ್ ಎಂದು ಹೆಸರು. ನಾವೂ ಅದನ್ನು ತರಿಸಬೇಕು. ಈಸಲ ಎಗ್ಜಿಬಿಷನ್‌ಗೆ ಬನ್ನಿ. ಅಲ್ಲಿ ನೋಡುವಿರಂತೆ. ನಾಯಕರೆ, ಈಸಲ ಈತನನ್ನು ಎಗ್ಜಿಬಿಷನ್‌ಗೆ ಕರೆದುಕೊಂಡು ಬನ್ನಿ. ಸೆಕ್ರೆಟರಿ, ಪ್ಲೀಸ್ ನೋಟ್ ಇಟ್. ಸೆಂಡ್ ಹಿಂ ಎನ್ ಇನ್‌ವಿಟೇಷನ್!"

ಹೀಗೆ ನೋಡಿದುದನ್ನೆಲ್ಲಾ ಕೂಲಂಕಷವಾಗಿ ವಿಚಾರಮಾಡುತ್ತಾ

ಸಲಹೆಗಳನ್ನು ಕೊಡುತ್ತ ದಿವಾನರು ಮಧ್ಯಾಹ್ನಕ್ಕೆ ಹಿಂತಿರುಗಿದರು. ದಾರಿಯಲ್ಲಿ ತನ್ನ ತೋಟದಲ್ಲಿ ಎಳನೀರುಕೊಟ್ಟು ಏನಾದರೂ ಹೇಳಿಕೊಳ್ಳಬೇಕೆಂದಿದ್ದ ಮಾದೇಗೌಡ. ಎಳನೀರೂ ಕೆಡವಿಸಿ ಕೊಚ್ಚಿಸಿ ಇಟ್ಟಿದ್ದ. ಏಕೋ ದಿಗಿಲಾಯಿತು. ಮನಸ್ಸು ಅಳುಕಿ ಹಿಂತೆಗೆಯಿತು. ಅದೇ ಭಾವದಲ್ಲಿಯೇ ಎಲ್ಲರ ಜೊತೆಯಲ್ಲೂ ತಾನೂ ಸುಮ್ಮನೆ ಬಂದು ಬಿಟ್ಟ.

೨೪

ಇಪ್ಪೊತ್ತು ದಿವಾನರಿಗೆ ನಾಯಕನ ಅರಮನೆಯಲ್ಲಿ ಔತಣ. ಊಟತೊಟ್ಟಿಯಲ್ಲಿ ಎಲೆಗಳನ್ನು ಹಾಕಿದೆ. ಊರಿನ ಪ್ರಮುಖರೆಲ್ಲ ಬಂದಿದ್ದಾರೆ. ದಿವಾನರಿಗೆ ಚಿನ್ನದ ಪರಿವಾಣ: ಅದರ ಸುತ್ತಲೂ ಅಂಗೈಯಗಲದ ಬೆಳ್ಳಿಯ ಆಲದೆಲೆಗಳು. ಅದರಸುತ್ತ ಹನ್ನೆರಡು ಬೆಳ್ಳಿಯ ಬಟ್ಟಲು. ಕುಳಿತುಕೊಳ್ಳುವುದಕ್ಕೆ ಮೃದುವಾದ ಕೃಷ್ಣಾಜಿನ ದಿಂದ ಮಾಡಿರುವ ಮೆತ್ತೆ: ಒರಗಿಕೊಳ್ಳುವುದಕ್ಕೂ ಅಂತಹುದೇ ಮೆತ್ತೆ. ದೂರದಲ್ಲಿರುವ ಪದಾರ್ಥಗಳನ್ನು ತೆಗೆದುಕೊಳ್ಳಲು ಒಂದು ಬೆಳ್ಳಿಯ ಸೌಟು. ನಾಯಕನಿಗೂ ಹಾಗೆಯೇ ಎಡೆ.

ಹನ್ನೆರಡೂವರೆಗೆ ಸರಿಯಾಗಿ ಊಟವು ಆರಂಭವಾಯಿತು. ಮಲ್ಲಣ್ಣ ಶಂಭುರಾಮಯ್ಯ ಇಬ್ಬರೂ ನಾಯಕನ ಎಡಗಡೆ ಕುಳಿತಿದ್ದರು. ರಜಾಕ್ ಸಾಹೇಬರು ಶಂಭುರಾಮಯ್ಯನನ್ನು ಗುರ್ತುಹಿಡಿದು, ಇವನೇ ಎಂದಮೇಲೆ, ನಾಯಕನಿಗೆ ಅವರ ವಿಚಾರದಲ್ಲಿ ಗೌರವ ಅಗೌರವಗಳೆರಡೂ ತಲೆದೋರಿದ್ದುವು. ಆದರೆ ಮೊದಲನೆಯದಕ್ಕೆ ಪ್ರಾಧಾನ್ಯ ಕೊಟ್ಟು ಎರಡನೆಯದನ್ನು ತುಳಿಯುವುದು ಆತನ ಸ್ವಭಾವ.

ಆ ಊರಿನವರು ನಾಯಕನ ಎದುರಿಗೇ ಮಾತನಾಡುವವರಲ್ಲ: ಇನ್ನು ದಿವಾನರು ಬಂದಿರುವಾಗ ಕೇಳಬೇಕೆ? ಇನ್ನು ಮಾತನಾಡುವ

ವರು ಯಾರು? ಸಹಜವಾಗಿ ಶುಂಭುರಾಮಯ್ಯನೇ ಮಾತನಾಡ ಬೇಕಾಗಿಬಂತು: ಆಮಾತು ಈಮಾತು ಆಡುತ್ತ ವಿವೇಕಾನಂದರು, ಆನ್ನಿಬೆಸೆಂಟರು, ತಿಲಕರು, ಗೋಖಲೆ ಮೊದಲಾದವರ ಮಾತು ಬಂತು.

"ನೀವು ವಿವೇಕಾನಂದರ ಮಾತು ಹೇಳುತ್ತೀರಿ, ಅವರು ಅಮೇರಿಕಕ್ಕೆ ಹೋಗದೆ ಇದ್ದರೆ, ಅವರಮಾತು ಕೇಳುವವರು ಯಾರು ಇರುತ್ತಿದ್ದರು? ಆನ್ನಿಬೆಸೆಂಟರು ಯುರೋಪಿಯನ್‌ರು ಎಂದು ನಮ್ಮವರು ಅವರ ಮಾತಿಗೆ ಅಷ್ಟು ಗೌರವ ಕೊಡುವುದು: ತಿಲಕರು ಮಹಾ ವಿದ್ವಾಂಸರು. ದೇಶದೇಶದಲ್ಲೆಲ್ಲಾ ಪ್ರಸಿದ್ಧರಾದವರು. ಎಲ್ಲಾ ಸರಿ. ಆದರೂ ಮುಷ್ಟಿಕಟ್ಟಿ ಮೇಲೆಬೀಳುವುದಕ್ಕೆ ಸಿದ್ಧರಾದವರು. ಗೋಖಲೆಯವರು ಅವರ ಪರಮಮಿತ್ರರಾಗಿದ್ದವರು. ಅವರೇ ತಿಲಕರ ಮಾತಿಗೆ ಒಪ್ಪದೆ ಸರ್ವೆಂಟ್ಸ್ ಆಫ್ ಇಂಡಿಯ ಸೊಸೈಟಿ ಮಾಡಿಕೊಂಡು ಮುಂದೆ ಬರುವ ಯುದ್ಧಕ್ಕೆ ಸಿಪಾಯಿಗಳನ್ನು ಸಿದ್ಧಮಾಡುತ್ತಿದ್ದಾರೆ. ಎಲ್ಲದಕ್ಕಿಂತ ಹೆಚ್ಚಾಗಿ ನಮ್ಮಲ್ಲಿ ನಾಲ್ಕು ಜನರಿದ್ದ ಕಡೆ ಹತ್ತು ಅಭಿಪ್ರಾಯ. ಯಾರಿಗೂ ಇದೇ ಸರಿ ಎನ್ನುವ ಖಚಿತವಾದ ಅಭಿಪ್ರಾಯ ವಿಲ್ಲ. ಬ್ರಿಟಿಷರನ್ನು ನೂಕಿಬಿಡೋಣ. ಅವರ ಬದಲು ಜರ್ಮನಿ ಬಂದರೆ? ಅವರನ್ನು ತಡೆದೇವೆ? ನಮ್ಮ ಕೈಲಾಗುವುದೇ? ಅಲ್ಲದೆ, ಯೂರೋಪಿನ ರಾಷ್ಟ್ರಗಳಲ್ಲೆಲ್ಲಾ ಬುದ್ಧಿವಂತರೂ ಧರ್ಮಿಷ್ಠರೂ ಇವರೇ! ಇನ್ನು ಯಾರು ಇಂಡಿಯ ಹಿಡಿದುಕೊಂಡರೂ ಇಂಡಿಯ ಇದಕ್ಕಿಂತಲೂ ಕಡೆಯಾಗುತ್ತಿತ್ತು. ಅಲ್ಲದೆ, ಇಂಡಿಯದಲ್ಲಿ ಆಯುಧ ಗಳಿಲ್ಲ: ಇರುವ ಆಯುಧಗಳನ್ನೂ ಉಪಯೋಗಿಸಬಲ್ಲವರಿಲ್ಲ: ಅದ ರಿಂದ ಇಂಡಿಯ ಬಂಧಮುಕ್ತವಾಗುವುದು ಸಧ್ಯದಲ್ಲಿ ಸಾಧ್ಯವಿಲ್ಲ. ಇನ್ನು ಏನೋ ಒಂದು ಹೊಸ ಉಪಾಯ, ಹೊಸ ಸನ್ನಿವೇಶ, ಬಂದರೆ ಏನಾಗುವುದೋ ಅದು ಹೇಳಲಾಗುವುದಿಲ್ಲ.

"ಈಗ ಏನೋ ಯೂರೋಪಿನಲ್ಲಿ ಯುದ್ಧವಾಗುವ ಸೂಚನೆ ಗಳಿವೆ: ಜರ್ಮನಿಗೆ ರಾಷ್ಟ್ರದಾಹ ಹೆಚ್ಚಿದೆ: ಬ್ರಿಟನ್ನಿನ ಮೇಲೆ ಅಸೂಯೆ ಹೆಚ್ಚಿದೆ. ಹಾಗೆ ಯುದ್ಧ ಬಂದರೆ, ಆಗ ಬ್ರಿಟನ್ ತಪ್ಪದೆ

ಸಾಮ್ರಾಜ್ಯದ ಸೇನೆಯನ್ನು ಉಪಯೋಗಿಸುವುದು. ಆಗ ಇಷ್ಟವಿರಲಿ, ಇಲ್ಲದಿರಲಿ, ಇಂಡಿಯದ ಸೇನೆಯನ್ನು ಉಪಯೋಗಿಸಬೇಕು. ಆಗ ಈ ಮಜಲ್ ಲೋಡರ್ಸ್ ಕೊಟ್ಟು ಯುದ್ಧಕ್ಕೆ ಕಳುಹಿಸುವುದು ಆಗದ ಮಾತು. ಅಂಥಾ ಸಂದರ್ಭ ಬಂದರೆ ಇಂಡಿಯರ್ಗೆ ಸೈನ್ಯದಲ್ಲಿ ಹೆಚ್ಚು ಅಧಿಕಾರಗಳೂ ಇಂಡಿಯರ್ಗರಿಗೆ ಸಿಕ್ಕಬಹುದು: ಸೈನಿಕರಿಗೆ ಆಯುಧಗಳನ್ನು ಉಪಯೋಗಿಸುವುದನ್ನು ಕಲಿಸಬಹುದು. ಆದರೆ ಅದೆಲ್ಲಾ ವಿಶೇಷ ಸಂದರ್ಭ. ಅಲ್ಲದೆ ನೂರಕ್ಕೆ ಸುಮಾರು ೪-೫ ಮಾತ್ರ ಓದು ಬಲ್ಲವರು. ಇವರಲ್ಲಿ ಐಕಮತ್ಯ ಬಂದು, ಇವರು ಸೇರಿ, ನೋಡಿಕೊಳ್ಳೋಣ."

ಊಟಕ್ಕೆ ಒಂದು ಗಂಟೆ ಎಂದು ನಿಗದಿಯಾಗಿತ್ತು. ಆಗಂಟೆ ಹೊಡೆಯುತ್ತಲೂ ದಿವಾನರು ಎದ್ದುಬಿಟ್ಟರು. ಅವರು ಏಳುವ ವೇಳೆಗೆ ಅಲ್ಲಿಯೇ ಸುಖೋಷ್ಣವಾದ ನೀರು ಸಿದ್ಧವಾಗಿತ್ತು.

ದಿವಾನರು ಸಂತೋಷದಿಂದ "ಏನು ನಾಯಕರೆ, ಅರಮನೆ ಅನ್ನೋ ಹೆಸರಿಗೆ ತಕ್ಕಂತೆ ಖಾಸ್ ಆರೋಗಣೆ ಮಾಡಿಸಿಬಿಟ್ಟರಿ ?"

"ಎಲ್ಲಾ ಹಿರೀಕರ ಪುಣ್ಯ ಬುದ್ಧಿ"

"ನೀವು ಹೇಳಿದ್ದು ಬಹಳಸರಿ. ಇಂಡಿಯ ಬದುಕಿರೋದು ಹಿಂದಿನ ಹಿರೀಕರ ಪುಣ್ಯದಿಂದ. ಅದನ್ನು ಉಳಿಸಿ ರೂಢಿಸಿಕೊಳ್ಳಲು ನಾವು ಪ್ರಯತ್ನಪಡಬೇಕು. ಅಲ್ಲವೇ ?"

"ಸತ್ಯ ಬುದ್ಧಿ, ತಾವು ಹೇಳೋದು ಬಹಳ ಸರಿ.",

ದಿವಾನರು ವಿಶ್ರಾಂತಿಗೆ ತೆರಳಿದರು. ಬಂದಿದ್ದವರೆಲ್ಲರೂ ತಾಂಬೂಲಗಳನ್ನು ತೆಗೆದುಕೊಂಡು ಹೊರಟರು. ದಿವಾನರ ಸೆಕ್ರೆಟರಿಗಳು ಬಂದು, "ಮೂರೂವರೆಗೆ ಪ್ರೋಗ್ರಾಂ, ನೆನಪಿರಲಿ. ಈಗ ಒಂದೂವರೆ" ಎಂದರು. ನಾಯಕನು 'ಸರಿ' ಎಂದನು.

ನಾಯಕನು ಅಡಕೆಲೆ ಹಾಕಿಕೊಂಡು ಒಚ್ಚ ಮಗ್ಗುಲಾಗಿ ಕಣ್ಮುಚ್ಚುವುದರೊಳಗಾಗಿ ಮೂರುಗಂಟೆ ಹೊಡೆಯಿತು. ಎದ್ದು ಕೈಕಾಲು ತೊಳೆದುಕೊಂಡು ದಿರಸು ಹಾಕಿಕೊಂಡು ಬರುವ ವೇಳೆಗೆ ಮೂರೂ ಇಪ್ಪತ್ತೈದು. ಆ ವೇಳೆಗಾಗಲೇ ದಿವಾನರ ಕೋಣೆಯಲ್ಲಿ

ಸದ್ದಾಗುತ್ತಿದೆ. ಅವರು ಸಿದ್ಧವಾಗಿದ್ದಾರೆ.

ಮೊದಲೇ ಗೊತ್ತಿದ್ದಂತೆ ಹರಿಜನರ ಪಾಳ್ಯಕ್ಕೆ ಹೋದರು. ದಿವಾನರು ಹೋಗುವಾಗ ದಾರಿಯಲ್ಲಿಯೇ ಕೇಳಿದರು : "ನಾಯಕರೇ, ತಾವು ಇವರಿಗೆ ಏನೇನು ಮಾಡಿದ್ದೀರಿ ?"

"ಇತರರು ಐದುರೂಪಾಯಿ ಸಂಬಳ ಕೊಡುವ ಕಡೆ, ನಾನು ಎಂಟುರೂಪಾಯಿ ಕೊಡುತ್ತೇನೆ. ಅವರಿಗೆಲ್ಲ ಮನೆಗಳು ಕೊಟ್ಟಿದ್ದೇವೆ. ಹಬ್ಬ ಹುಣ್ಣಿಮೆ ಅಂದರೆ ಅದಕ್ಕಾಗಿ ಬೇರೆ ತಸ್ತೀಕು ಕೊಡುತ್ತೇವೆ. ಅವರಿಗೆ ಮಾನ್ಯಗಳು ಇವೆ."

"ಆಯಿತು, ಅವರಿಗೆ ವಿದ್ಯೆಕಲಿಸುವ ಏರ್ಪಾಡು ಮಾಡಿದ್ದೀರಾ ?"

"ಅದೇನೂ ಬೇಕಿದ್ದಂತೆ ತೋರಲಿಲ್ಲ ಬುದ್ಧಿ. ಅವರೂ ಕೇಳಲಿಲ್ಲ. ನಮಗೂ ಹೊಳೀಲಿಲ್ಲ."

"ಅವರಿಗೆ ಏನಾದರೂ ವಿದ್ಯೆಗೆ ಒಂದು ದಾರೀಮಾಡಿ."

"ನೋಡೋಣ, ಬುದ್ಧಿ. ಉತ್ತಮರು, ಅವರು ಬಂದರೆ ಸ್ಕೂಲಿಗೆ ಬರುವುದಿಲ್ಲ. ಇನ್ನು ಅವರಿಗೇ ಬೇರೇ ಸ್ಕೂಲು ಮಾಡಬೇಕು."

"ಅವರಿಗೆ ಕುಡಿಯೋ ನೀರಿನ ಬಾವಿ ಇದೆಯೋ ?"

"ಒಂದು ಕೊಟ್ಟಿದೆ ಬುದ್ಧಿ."

ಪಾಳಿಯ ಬಂತು : ದಿವಾನರು ಕುದುರೆಯ ಮೇಲೇ ಎಲ್ಲವನ್ನೂ ಸುತ್ತಿಕೊಂಡು ಬಂದರು. ಅಲ್ಲಿ ಮತ್ತೆ ಪ್ರಶ್ನೆಗಳ ಸುರಿಮಳೆ.

"ಏನಯ್ಯಾ, ನಿಮಗೇನೇನಾಗಬೇಕಯ್ಯ ?"

"ಅಂಗಂದ್ರೆ ಏನನ್ನೋವಾ ಪಾದ. ಈ ತನಕ ಏನೋ ಖಾವಂದರು ನಮ್ಮ ಕಾಪಾಡಿಕೊಂಡು ಬಂದವ್ರೆ."

"ನಿಮಗೆ ಓದುಗೀದು ಬೇಡವೇನಯ್ಯ ?"

"ನಮಗ್ಯಾಕಾ ಬುದ್ಧಿ. ನಾವೇನು ಸರಕಾರದ ಚಾಕರಿಮಾಡಬೇಕಾ ? ಈಗಿರೋಅಂಗೆ ನಾವು ಸುಖವಾಗಿದ್ದರೆ ಸಾಕು."

"ಮೈಸೂರಿನಲ್ಲಿ ವೀಳ್ಯದೆಲೆ ತೋಟದವರು ಇರೋ ಹಾಗೆ ನೀವು ಶುಚಿಯಾಗಿರಬಾರದೇನಯ್ಯ ? ಅವರ ಹಾಗೆ ನೀವೂ ಮಹಡೀ

ಮನೆ ಕಟ್ಟಿಕೊಂಡು ಚೆನ್ನಾಗಿ ಬಟ್ಟೆಬರೆ ಹಾಕ್ಕೊಂಡು ಇರಬಾರ
ದೇನಯ್ಯ ?”

“ಬುದ್ಧಿ, ಅವರು ಪಹರಿನೋರು. ಪುಣ್ಯಮಾಡವ್ರೆ. ನಿಜ
ವಾಗಿ ನುಡಿಬೇಕೊಂದ್ರೆ, ಬುದ್ಧಿ, ಸುತ್ತಮುತ್ತಲೂ ಇರೋರಲ್ಲಿ ನಾವೇ
ಪುಣ್ಯವಂತರುಳ ಬುದ್ಧಿ. ಮಿಕ್ಕೂರುಗಳಲ್ಲಿ ಕುಡಿಯೋಕೆ ನೀರಿಲ್ಲ:
ಇರೋಕೆ ಮನೇ ಇಲ್ಲ. ತಿನ್ನೋಕೇನೋ ಬಿಡಿ, ನಿಮ್ಮಪಾದ, ಗೌಡ
ಗಳ ಮನೇಲಿರೋರು ಒದ್ದಾಡೋಕಿಲ್ಲ. ತಮ್ಮ ಪಾಡಿಗೆ ತಾವು
ಇರೋರಿಗೆ ಮಾತ್ರ, ಬುದ್ಧಿ, ಸುಖಇಲ್ಲ.”

“ಏಕೆ ?”

“ಇರೋ ಭೂಮಿಯೆಲ್ಲ ಗೌಡಗಳ ಕೈಲದೆ ಬುದ್ಧಿ. ನಿಮ
ಗಿಂತ ನಾವೇನು ಕಮ್ಮಿ ಅಂತ ಸೆಟೆತುಕೊಂಡರೆ, ಅವರೇನಾದರೂ
ಇವರ ಮನೆ ಬಾಗಿಲಿಗೆ ಬಂದು ಬಾಪ್ಪ ಅನ್ನಬೇಕಾ ?”

“ಹಾಗಾದರೆ ಭೂಮಿ ಕೊಟ್ಟರೆ ಸಾಕೋ ?”

“ನಿಮ್ಮ ಪಾದ, ಭೂಮಿಕೊಟ್ಟರೆ ಸಾಕಾ ಬುದ್ಧಿ. ಉಳಾಕೆ
ಎತ್ತು ನೇಗಿಲು ಬೇಡವಾ ? ಇರಾಕೆ ಮನೆ ಬಾಗಿಲು ಬೇಡವಾ ?
ಬಿತ್ತಿದ ಕಾಳಿನ ಬೆಳೆ ಬರೋತಂಕಾ ಹೊಟ್ಟೆಗೆ ಬೇಡವಾ ? ಇದೆಲ್ಲ
ಕೇಳಿದರೆ, ಈ ಹೊಲೆಸೂಳೇಮುಕ್ಕಳು ಉಡಿದಾರ ಲಂಗೋಟಿ
ಮೊದಲು ಎಲ್ಲಾ ಕೇಳ್ತಾರಲ್ಲ ಅಂತ ತಾವು ನೊಂದರೆ ನಾವು ಬದು
ಕೇವಾ ಬುದ್ಧಿ ?”

“ಆಯಿತಯ್ಯ, ನೀವು ಕುಡಿಯೋದು ಬಿಡತೀರೇನಯ್ಯ ?”

“ಬುದ್ಧಿ, ತಾವು ಉತ್ತಮರು, ನೀವು ನಿಮ್ಮ ಜೋಡಿನಂಗೆ
ಏಳು ಅಂದ್ರೆ ನಿಜವಾಗಿ ಏಳಿಬುದ್ತೀನಿ ಬುದ್ಧಿ.”

“ಹೇಳು ಧೈರ್ಯವಾಗಿ ಹೇಳು.”

“ನೋಡಿ ಬುದ್ಧಿ, ಹಗಲೆಲ್ಲ ಈ ದೊಡ್ಡ ದೊಡ್ಡೋರ್ನೆಲ್ಲ ನೋಡಿ,
ಇವರ ಪುಣ್ಯ ನಮಗಿಲ್ಲವಲ್ಲಾ ಅಂತ ಮರುಗಿರ್ತದೆ, ಬುದ್ಧಿ, ಮನಸು.
ಸಂಜೆ ಆಗುತ್ತಲೂ ಕುಡಿದುಬಿಟ್ಟರೆ, ಮೈಮೇಲೆ ಗ್ಯಾನ ತಪ್ಪೋ
ಯ್ತದೆ. ಏನೋ ಒಳ್ಳೇದೊ ಕೆಟ್ಟೋ ಕೂಗಿಕೊಳ್ತಾ ಅಷ್ಟೋತ್ತು

ಒದ್ದಾಡುತ್ತಿದ್ದು ಬಿಡ್ಕೊಂತೀವಿ, ಇದು ತಪ್ಪಿಸುಬುಟ್ರೇ ಈ ಚಿಂತಿಗರಿಗೂ ನಮುಗೂ ಏನಾ ಎತ್ಯಾಸ ಬುದ್ದಿ."

"ಚಿಂತಿಗರು ಅಂದರೆ ಯಾರಯ್ಯ ?"

"ಏನೋ ಬಾಯಲ್ಲಿ ಬಂದುಬುಡುತು. ತಪ್ಪಾಯಿತು, ಆಮಾತು ಬುಡಬೇಕು ಪಾದ."

"ಇರಲಿ, ಹೇಳು, ಚಿಂತೆಯಿಲ್ಲ."

"ಅಂಗಾದರೆ, ಏಳ್ತೀನಿ ಪಾದ, ಕಾಪಾಡಬೇಕು. ಚಿಂತಿಗರು ಅಂದರೆ ಉತ್ತಮರು, ಬುದ್ದಿ, ಬಾಯಲ್ಲಿ ಏದಾಂತ ಏಳ್ತಾರೆ. ದೇವರು ಅಂತಾರೆ, ದೇವರಪೂಜೆ ಅಂತಾರೆ. ಸಂಜೆ ಆದರೆ ಬಾಗಿಲು ಜಡಾಯಿಸಿ ಅಗಣಿ ಆಕ್ತಾರೆ ನಿಮ್ಮಪಾದ. ಅದ್ಯಾಕಾ ಅಂದರೆ, ಅವರಿಗೆ ದಿಗಿಲು, ಏನು ಬತ್ತದೋ ಏನು ಮಾಡ್ತದೋ, ಯಾರು ಬಂದಾರೋ, ಏನು ಒತ್ಕೊಂಡು ಓದಾರೋ ಅಂತ. ನಾವು ಪೂಜೇನೂ ಕಾಣೋ ಏನೂ ಕಾಣೋ, ಸಂಜೆಯಾದರೆ, ಶಿವಾಅಂದ, ಶಿವಕೊಟ್ಟಿದ್ದು ಉಂಡಾ, ಉರುಳಿದ ಅಂದರೆ ಚಿಂತೆ ಅನ್ನೋದೇ ಇಲ್ದೆ ಬೆಳಗಾಗೋತಂಕ ತೊಲೆ ತುಂಡೇ ? ಅದಕೇ ನಾವು ಉತ್ತಮರ ಚಿಂತಿಗರು ಅನ್ನೋದು ಬುದ್ದಿ"

"ಕುಡಿತ ತಪ್ಪಿಸಿದರೆ ನಿಮುಗೊಳ್ಳೆಯದಲ್ಲವೇನಯ್ಯಾ ?"

"ಕುಡಿಯೋಕೆ ಎಂಡ ಸಿಕ್ಕದಿದ್ದರೆ ಕುಡಿಯೋ ಬುದ್ದಿ ಹೋದೀತಾ ಬುದ್ದಿ. ಕುಡಿಯೋಕೆ ನೀವು ಕೊಡೋಕಿಲ್ಲ ಅಂದರೆ ನಿಮಗೆ ಬರೋ ದುಡ್ಡು ಓಯ್ತು. ಕುಡಿಯೋನು ಬುಡೋಕಿಲ್ಲ ಬುದ್ದಿ. ಅಲ್ಲದೆ ನೋಡಿ, ನಿಮ್ಮ ಪಾದ, ನಮ್ಮ ಗುರುಗೋಳು ಬಂದಿದ್ದರು. ಅವರು 'ಎಲಾ ! ನಮ್ಮಪಾದ ಮುಟ್ಟಿ ಆಣೆಮಾಡಿ. ನೀವೆಲ್ಲ ಉತ್ತಮರಾಗೋಕಾಲ ಬಂದಿದೆ. ಕುಡಿಯೋದು, ಮಡ್ಡಿಮಾಂಸ ತಿನ್ನೋದು ಬಿಡಬೇಕು' ಅಂದರು. ನಾವು ಅವರ ಮಾತು ಅಂತ ಬುಟ್ಬುಬುಟ್ವಿ. ಒಂದು ತಿಂಗಳ ತನಕ ಈ ಪಾಳೆಯದಲ್ಲಿ ಯಾರೂ ಕಡೀಲಿಲ್ಲ ; ಕುಡೀಲಿಲ್ಲ. ಏನಾಯ್ತು ಗೊತ್ರಾ ಬುದ್ದಿ, ಎಂಗುಸರು ನೀರು ಎಳೀನಾರ್ರು ! ಗಂಡುಸು ಗುದ್ದಲಿ ಹೊಡೆದರೆ ಹಿಡೀಮಣ್ಣು. ಆಗ ಓಗಿ ಗುರುಗಳ

ಪಾದ ಮುಟ್ಟಿ, ಶಿವಪಾದಪ್ಪ, ನಮ್ಮಗತಿ ಇಂಗಾಗದೆ ಅಂತ ಅತ್ತು ಕೊಂಡೋ. ಆಗ ಅವರು, ಅದೇ ಕಸುಬು ಮಾಡಕೋಬೇಡಿ. ಕಂಡಂಗೆ ಕಾಣದಂಗೆ ಮಾಡಿಕೊಳ್ಳಿ ಅಂದರು."

" ಈಗ "

" ಈಗ ಶನಿವಾರ, ಸೋಮಾರ, ಗುರುವಾರ, ಆ ತಂಟೆ ಇಲ್ಲಾ ಬುದ್ದಿ ! ವಿಕ್ಕದಿನ ಇದ್ದರೆ ಏನೋ ನಿಮ್ಮಪಾದ. ತಾವು ದೇಶಾನ್ನೆಲ್ಲ ಆಳೋರು. ಏನೋ ನಾ ಬೋ ಮಾತಾಡಬುಟ್ಟೆ. ಕಾಪಾಡಬೇಕು. ನಿಮ್ಮಪಾದ."

" ಆಯಿತು ಕೊನೆಯದಾಗಿ ಇನ್ನೊಂದು ಮಾತು ಹೇಳಯ್ಯ. ನಿಮ್ಮಲ್ಲಿ ಯಾರನ್ನಾದರೂ ಓದಿಸಿ ಅವರಿಗೆ ಅಧಿಕಾರ ಕೊಟ್ರೆ ನಿಮಗೆ ಅನುಕೂಲವೇನಯ್ಯಾ ?"

" ನೋಡಿ ಬುದ್ದಿ ಕೆಟ್ಟದ್ದು ಬಂದರೆ ಕುಲಕ್ಕೇ ಬರ್‍ತದೆ. ಒಳ್ಳೇದು ಬಂದರೆ, ಬಂದವ್ನಗೇ ಒರ್ತುರ್ ಇನ್ಯಾರಿಗೂ ಇಲ್ಲ, ಬುದ್ದಿ. ಈಗ ಮೈಸೂರಲ್ಲಿ ಹೊಲಗೇರಿಯೋರು ಚೆನ್ನಾಗಿ ಬದುಕತವ್ರೆ. ಬಾಳತವ್ರೆ. ನಾವು ನೆಂಟರೂ ಅಂತ ಓದರೆ ಏನೋ ನೋಡ್ತಾರೆ. ಆದರೂ ಒಳಾಒಳಗೆ ಎಂಗದೆ ಬುದ್ದಿ. ಅವರೇನೋ ಉತ್ತಮರಂಗೇ ಆಡ್ತಾರೆ. ನಿಮ್ಮಪಾದ."

" ಹಾಗಾದರೆ ಏನು ಮಾಡಬೇಕು ?"

" ಮಾಡೋದೇನು ನಿಮ್ಮ ಪಾದ, ತಲೆ ಕಡಿದು ಕಾಲುಮಾಡಿ, ಕಾಲುಕಡಿದು ತಲೆ ಮಾಡೋನು ಇನ್ನೂ ಉಟ್ಟಿಲ್ಲ. ಮುಂದೇನೋ ನಾವು ಕಾಣೋ. ಆದರೂ ನಮ್ಮ ಗುರುಗೋಳ ಮಾತು ಸುಳ್ಳಾಗೋ ಕಿಲ್ಲ. ನಮುಗೂ ಒಳ್ಳೆದೆಸೆ ಬಂದಾತಂತೆ; ಎಂಗೆ ಬರ್ತದೋ ಅದು ಮಾತ್ರ ಕಾಣದು."

ದಿವಾನರು ಖಿನ್ನಮನಸ್ಕರಾಗಿ ಹಿಂತಿರುಗಿದರು. " ಆಫ್ರಿಕಾದಲ್ಲಿ ಇಂಡಿಯರ್ನರನ್ನು ಕಂಡರೆ ಬೀದಿನಾಯಿಗಿಂತ ಕಡೆ. ಅಮೇರಿಕಾದಲ್ಲಿ ನೀಗ್ರೋಗಳು. ಯೂರೋಪಿನಲ್ಲಿ ಏಷಿಯಾಟಿಕ್ಸ್. ಇಂಡಿಯಾದಲ್ಲಿ ಹೊಲೆಯರು. ಎಲ್ಲೋ ಏನೋತಪ್ಪಿದೆ, ಅದು ಸರಿಯಾಗಬೇಕು.

ಇವರಿಗಿನ್ನೂ ತಮ್ಮನ್ನು ಕಡೆಗಾಣುತ್ತಿದ್ದಾರೆಂಬ ಭಾವನೆ ಬಂದಿಲ್ಲ. ಅದು ಬರುವುದರೊಳಗಾಗಿ ಇವರಿಗೆ ಈ ದುಃಸ್ಥಿತಿ ತಪ್ಪಬೇಕು. ಇಲ್ಲವಾದರೆ, ಅಪಾಯ, ಅಪಾಯ," ಎಂದುಕೊಂಡು ಹೊರಟು ಬಂದರು.

ಎಲ್ಲರಿಗೂ ಅವರ ಇಳಿಮೊಕ ಕಾಣಿಸಿತು ಅವರ ಮಾತು ಕೇಳಿದರೂ ಅರ್ಥವಾಗಲಿಲ್ಲ, ಆ ಬಳಗದಿಂದ ಭಾರತಕ್ಕೆ ಅನರ್ಥವಾದೀತು ಎಂಬ ಯೋಚನೆಯೇ ಯಾರ ಮನಸ್ಸಿಗೂ ಬರಲಿಲ್ಲ. ಅರ್ಥಕ್ಕಾಗಿ ಪೂರಾ, ಕಾಮಕ್ಕಾಗಿ ಅಷ್ಟಷ್ಟು ತಾವು ಉಪಯೋಗಿಸಿಕೊಳ್ಳುವ ಈಗುಂಪು ಧರ್ಮದ ಹೆಸರಿನಲ್ಲಿ ಏಕೆ ಕನಿಷ್ಠವಾಗಿ ಗರ್ಭದಾಸರಂತೆ ಇರಬೇಕು ಎಂಬುದನ್ನು ಯಾರೂ ಯೋಚಿಸಲಿಲ್ಲ.

ಅಲ್ಲಲ್ಲಿ ಒಂದೊಂದು ಕಲ್ಯಾಣಗುಣಕ್ಕಾಗಿ ಒಬ್ಬೊಬ್ಬನಿಗೆ, ವಿಶೇಷ ಮರ್ಯಾದೆಯು ಸಲ್ಲುತ್ತಿತ್ತು ನಿಜ. ಆದರದು ವೈಯಕ್ತಿಕವಾಗಿ ನಿಲ್ಲುತ್ತಿತ್ತು. ಅದು ಕುಲಕ್ಕೆಲ್ಲ ವ್ಯಾಪಿಸಿ ಎಲ್ಲರನ್ನೂ ಮೇಲಕ್ಕೆತ್ತುತ್ತಿರಲಿಲ್ಲ.

ಕೀಳು ಕುಲದವನೇ ಮತಾಂತರವಾಗಿ ಬಂದರೆ, ಮಾದನು ಮಾರ್ದ, ಮಾರ್ಥ, ಆಗಿ ಬಂದರೆ ಎಗ್ಗಿಲ್ಲದೆ ವರ್ತಿಸುವ ಜನ, ಮೂಲರೂಪದಲ್ಲಿ ಯಾಕೋ ಗೌರವಿಸುತ್ತಿರಲಿಲ್ಲ. ಬಹುಶಃ ಈ ಪ್ರಶ್ನೆ ಜಾಪಾಳದಂತೋ? ಶುದ್ಧವಾದ ಜಾಪಾಳವು ರೋಗಹಾರಿಯಾಗಿ ಉಪಕಾರಿಯಾದರೆ, ಅಶುದ್ಧವಾದ ಜಾಪಾಳವು ಪ್ರಾಣಾಪಹಾರಿಯಾಗಿ ಅಪಕಾರಿಯಾಗುವುದಂತೆ. ಇದೂ ಹಾಗೇನೇನು? ಹಾಗಾದರೆ ಶುದ್ಧಿ ಬೇಕು ಎನ್ನುವುದು ಯಾರಿಗೆ? ದೇಹಕ್ಕೋ ಮನಸ್ಸಿಗೋ ಬುದ್ಧಿಗೋ? ಅಥವಾ ಮೂರಕ್ಕೂ ನೋ? ಅಲ್ಲದೆ ಶುದ್ಧಿಯಾಯಿತು ಇಲ್ಲ ಎಂದು ಹೇಳಬಲ್ಲವರಾರು? ಆ ಶುದ್ಧಿಯಾದರೂ ಎಂಥದು?

ಈ ತಲೆನೋವಿನ ವಿಚಾರಕ್ಕೆ ಯಾರೂ ಕೈ ಹಾಕಿರಲಿಲ್ಲ. ಆದರೂ ಕೆಲವರು ಮಹನೀಯರು ಈ ವಿಚಾರವನ್ನು ಮನಸ್ಸಿಗೆ ತಂದುಕೊಂಡು ಪರಿಹಾರವೆಂದು ತಮಗೆ ತೋರಿದುದನ್ನು ಮಾಡುವುದಕ್ಕೆ ಆರಂಭಿಸಿದ್ದರು. ಜನ ಮಾತ್ರ ಆಗ ಅವರನ್ನು ಜಾತಿಭ್ರಷ್ಟರೆಂದೇ ಕರೆಯಿತು, ಬಯ್ಯಿತು, ಬಹಿಷ್ಕರಿಸಿತು.

## ೨೫

ಸುಮಾರು ಏಳೂವರೆಯಾಗಿರಬಹುದು. ಶಂಭುರಾಮಯ್ಯ ಬಂದು ಮಲ್ಲಣ್ಣನನ್ನು ಕೂಗಿದ : " ಏನರೀ, ಅಣ್ಣಾವರೆ, ಇನ್ನೂ ಶಿವ ಪೂಜೆ ಮುಗೀಲಿಲ್ಲವೇನು ? ಎಂಟು ಗಂಟೆಗೆ ರಾಯರ ಮನೆಯಲ್ಲಿ ಇರಬೇಕು. ಮರೆತು ಬಿಟ್ಟರೇನು ?"

" ನೀವು ಗುಂಡು ಹಾರುತ್ತಲೂ ಏಳೋರು ? ನಾವು ಕೋಳೀ ಕೂಗೋ ವೇಳೆಗೆ ಏಳೋರು ? ಯಾರು ಮೊದಲೋ ನೀವೇ ನೋಡಿ ಕೊಳ್ಳಿ."

" ಕೋಳೀ ಊರಲ್ಲಿ ಬಿಟ್ಟು ಬಂದಿದೀರಿ. ಗುಂಡು ಕೆರೆ ಹತ್ತಿರ ಬೆಟ್ಟದ ಕಡೆಗೆ ಹೊಡೀತಾರೆ. ಅದರಿಂದ ನಿಮಗೆ ಎಚ್ಚರವಾಯಿತೋ ಇಲ್ಲವೋ ಅಂತಿದ್ದೆ."

" ನೋಡಿ ಅಯ್ಯನವರೆ, ನಾ ಹುಟ್ಟಿದಲಾಗಾಯ್ತು ಕಾಫೀ ಕುಡಿದಿದ್ದೋನೆ ಅಲ್ಲ. ಈಗ ನಿಮಗಿಂತ ಜೋರಾಗಿ ಹೋಗದೆ. ಕಾಫಿ ಇಲ್ಲದಿದ್ದರೆ ತಲೆನೋವು ಬರತದಲ್ರೀ !"

" ಹಾಂ, ಬಂದರೋ ದಾರೀಗೆ. ಆಗ ನಮ್ಮವರು ಆ ಮಾತು ಅಂದರೆ, ಏನು ಹೇಳಲೋ ಅಂತಿದ್ದಿರಿ, ಕೇಳಿದಿರಾ ಕೆಂಪಮ್ಮ ? ನಿಮ್ಮ ಯಜಮಾನರ ಮಾತಾ ?"

" ಅದು ಅವರ ಸ್ವಂತಮಾತಲ್ಲ."

" ಇನ್ಯಾರದು ?"

" ಸೋಮಿಯವರದೇ ?"

" ನಂದೇನೆ ?"

" ಹೌದು. ಗುರುಕಾಣಿಕೆ."

" ಯಾಕೋ ಇಬ್ಬರೂ ಮಾತನಾಡಿಕೊಂಡ ಹಂಗದೆ ಕಣಪ್ಪ. ಇನ್ನು ನಾನು ಬದುಕೋ ಹಾಗಿಲ್ಲ."

ಮಲ್ಲಣ್ಣನು ಒಂದು ಲೋಟಾದಲ್ಲಿ ಕಾಫಿ ತರುತ್ತಾ " ಏನು

ಕಾಫಿ ಇಲ್ಲದೇನೇ ?" ಎಂದ.

ಶಂಭುರಾಮಯ್ಯನು ಕಾಫಿ ಈಸಿಕೊಂಡು ಕುಡಿಯುತ್ತಾ ಹೇಳಿದ "ಇನ್ನು ನಾವೊಂದು ಎಮ್ಮೆ ಇಡಬೇಕಪ್ಪಾ ! ಈ ಕಾಫಿ ಇಷ್ಟು ರುಚಿಯಾಗಿರಬೇಕಾದರೆ, ಬೇರೆ ದಾರೀನೇ ಇಲ್ಲ."

"ಅಥವಾ ಎಮ್ಮೆ ಇರೋರ ಮನೆಗೆ ಹೊತ್ತಾರೆ ಬರಬೇಕಪ್ಪಾ !"

"ಒಬ್ಬನೇ ಆಗಿದ್ದರೆ ಹಂಗೇ ಮಾಡ್ತಿದ್ದೆ."

"ಒಬ್ಬರೇ ಅಂದುಕೊಂಡು ಇಬ್ಬರೂ ಒಟ್ಟಿಗೇ ಬಂದರಾಯಿತು."

ಒಳಗಿನಿಂದ ಇನ್ನೊಬ್ಬರು ಮಾತು ಸೇರಿಸಿದರು : "ಇಲ್ಲದಿದ್ದರೆ ನಮ್ಮನೇ ಕರೆದರೂ ಆಯಿತು."

"ಎಮ್ಮೆ ಸಮೇತ ಬರೋದಾದರೆ ನಾವೇಕೆ ಬೇಡ ಅಂದೇವು ? ನೋಡಿರಿ, ಎಂಟುಗಂಟೆ ಆಗುತಾ ಬಂತು ಜೀಗ ಹೋಗದಿದ್ದರೆ ತಿಂಡೀಗೆ ಚಕ್ಕರ್, ನೋಡಿ."

"ನಮಗೆ ತಿಂಡಿಗೇನು ದೇವರು ಕಡಿಮೆ ಮಾಡಿಲ್ಲ. ಆದರೆ, ಆ ಮಾತು ನಮಗೆ ಬಹಳ ಮುಖ್ಯ. ಅದು ತಾನೇ ನಮಗೆ ಬೇಕಾದ್ದು."

"ನಿಜ. ಆದರೆ ನೋಡಿ, ಮೊನ್ನೆ ಆದ ಹಾಗೆ ಆದರೆ, ನಂಗೆ ಸೈಸೋಲ್ಲಪ್ಪ. ಆನಿಬಸೆಂಟರು ಎಷ್ಟು ಕೆಲಸ ಮಾಡಿದ್ದಾರೆ. ಹಿಂದೂ ಯೂನಿವರ್ಸಿಟಿ ಕಟ್ಟಿದವರು. ಅವರನ್ನು ಇವರು ಯಾರ್‍ರೀ ಬಯ್ಯೋಕೆ ?"

"ಅಯ್ಯನೋರೆ, ಪೆಚ್ಚುತಿಂದಿರಿ, ಅವರಿಗೂ ಮಹದೇವಶಾಸ್ತ್ರಿಗಳ ಪಾರ್ಟಿಗೂ ಆಗೋದಿಲ್ಲ. ಇವರು ನೆರೆಯೋಕೆ ಮುಂಚೆ ಮದುವೆಯೋರು, ಅವರು ನೆರೆದಮೇಲೆ ಮದುವೆಯೋರು. ಇಬ್ಬರಿಗೂ ನಡುವೆ ಇಟ್ಟ ಬೆಂಕಿ ಆರೋಕಿಲ್ಲ. ಅದಕ್ಕಾಗಿ ಶಾಸ್ತ್ರಿಗಳು ಆನಿಬೆಸೆಂಟರ ಪಾರ್ಟಿ ಅಂತ ಅವರ್ನ ಬೈಯ್ತಾರೆ."

"ನಿಮ್ಮ ಸಮಾಧಾನ ನಮಗಿಲ್ಲ. ವಿವೇಕಾನಂದರ್ನ, ಆನಿಬೆಸೆಂಟರ್ನ, ತಿಲಕರ್ನ, ದಯಾನಂದರ್ನ ಬಯ್ದರೆ ನನಗೆ ಸೈಸೋಲ್ಲ."

"ಅಲ್ಲರೀ, ಹತ್ತು ಜನ ಸೇರಿದ ಕಡೆ ತಲೆಗೆ ತಟ್ಟಾಗಿ ಮಾತು

ಬಂದೇ ಬರ್‍ತದೆ. ನಾವು ಅದಕೆಲ್ಲಾ ತಲೆ ಕೆಡಿಸಿಕೊಳ್ಳೋದೆ ?"

" ನನಗೆ ಇನ್ನೊಂದು ಯೋಚನೆ ಬರ್‍ತದೆ ಅಣ್ಣಾವರೆ ? ಹೆಂಗಿದ್ದರೂ ನಿಮ್ಮ ಬಂಗಲಿ ಖಾಲೀ ಆಗಿರ್‍ತದೆ. ಹಜಾರದಲ್ಲಿ ನಾವೇ ಯಾಕೆ ಒಂದು ಸಂಘ ಮಾಡಬಾರದು ? ನೀವು ನಿಮ್ಮ ಖಾವಂದ್‌ರಿಗೆ ಬರೀತೀರಾ ?"

" ಈಗ ನಮ್ಮ ಖಾವಂದ್‌ರಿಗೆ ನಿಮ್ಮ ಮೇಲೆ ಬಹಳ ಮೋಹ. ಕಾಗದ ಬರೆದಾಗೆಲ್ಲಾ ನಿಮ್ಮ ಮಾತು ಇಲ್ಲದೆಇಲ್ಲ. ನೀವು ಬರೀರಿ, ಜೋತೇಲೇ ಹುಂ ಅಂತಾರೆ "

" ಆಗಲಿ. ಏಳಿಮತ್ತೆ ?"

" ಏನಂತೆ, ಗಾಡಿ ಅದೆ, ಕೋಟೆಗೆ ಹತ್ತು ನಿಮಿಷದಲ್ಲಿ ಹೋಗಬಹುದು."

" ನಿಜ, ಹಾಗಂತ ಹೊತ್ತಾಗೇ ಹೊರಡಬೇಕಾ ?"

" ಸರಿ !"

ಇಬ್ಬರೂ ಹೊರಟರು.

" ನಿಮ್ಮ ಕುದುರೆ ಬಹಳ ಚೆನ್ನಾಗಿ ಹೋಗ್ತದಲ್ಲಾ !"

" ಇದರ ಮೇಲೆ ನಮ್ಮ ಮಲ್ಲಮ್ಮಣ್ಣೀಗೆ ಬಹಳ ಖಾಯಿಷ್ ಸೋಮಿ. ಇದು ಮೊನ್ನೆ ಅವಳೀ ತಾಯೀಗೆ ಕೊಟ್ಟದ್ದು. ಈಗಾಡೀ ಸಮೇತ."

" ಕೊಟ್ಟದ್ದು ತಾಯೀಗೆ. ಉಪಯೋಗಿಸೋರು ನೀವು,"

" ಲೋಕವೇ ಹಿಂಗೆ."

"ಆಯಿತು. ಇವೊತ್ತು ಮಾತು ಯಾವ ಕಡೇಗೆ ಹೋಗ್ತದೋ?"

" ನೀವು ಭದ್ರವಾಗಿದ್ದುಬುಡಿ–ನನ್ನ ಮಾತು ಕೇಳಿ. ನಾವು ಅಲ್ಲಿ ಕಾಸುಕೊಟ್ಟು ಎಲ್ಲರ ಜುಟ್ಟು ಇಡಿಕೊಳ್ಳೋ ಹಂಗಿಲ್ಲ. ನಾವು ಹೋಗೋದು ಇನ್ನೊಬ್ಬರ ಮನೇಗೆ. ಇವೊತ್ತು ಸುಮ್ಮನಿದ್ದು ಬಿಡಿ. ನೀವು ಹೇಳೋದು ಸರಿ. ನಾವೇ ಒಂದು ಸಂಗ ಮಾಡಿಕೊಳ್ಳೋವಾ."

" ಅದೇ ಸರಿ. ಹಾಗೇ ಮಾಡಬೇಕು."

ಇಬ್ಬರೂ ಕೋಟೆಗೆ ಬಂದರು. ಅಲ್ಲಿ ಪುಟ್ಟರಾಜೇ ಅರಸಿನವರ

ಮಹಡಿಯ ಮೇಲೆ ಸಭೆ ಸೇರಿದೆ. ಅರಸಿನವರು ಶ್ರೀಮಂತರು. ಅವರಿಗೆ ಸುಮಾರು ಐವತ್ತಕ್ಕೆ ಮೀರಿದ ವಯಸ್ಸು. ಅವರಿಗೆ ಯೋಗ, ವೇದಾಂತ, ಸಾಹಿತ್ಯ, ಇವುಗಳ ಮೇಲೆ ಬಹಳ ಮಮತೆ. ಅರಮನೆಯ ವಿದ್ವಾಂಸರನ್ನೆಲ್ಲಾ ಅಲ್ಲಿಗೆ ಕರೆಸಿಕೊಳ್ಳುವರು. ಹಿಂದೆ ಅಳಿಯ ಲಿಂಗ ರಾಜೇ ಅರಸಿನವರ ಮನೆಯಲ್ಲಿ ನಡೆಯುತ್ತಿದ್ದಂತೆ ಗೋಷ್ಠಿ ನಡೆಸ ಬೇಕು ಎಂದು ಅವರ ಇಷ್ಟ. ಆದರೆ, ಅದು ಆನೆ, ಇದು ಆಡು ಎನ್ನುವ ಮಟ್ಟಿಗೇ ಇತ್ತು ಎರಡನ್ನೂ ನೋಡಿದವರ ಇಷ್ಟ. ಅಂತೂ ಶಾಸ್ತ್ರಗಳ ವಿಷಯಗಳ ಜೊತೆಗೆ ಲೋಕಾಚಾರವೆಲ್ಲ ವಿಮರ್ಶೆಗೆ ಬರುವ ಪಾರ್ಲಿ ಮೆಂಟ್ ಆಗಿತ್ತು ಆ ಸಭೆ. ಆ ದಿನ ಅರಸರ ಸಮಕ್ಷಮದಲ್ಲಿ ಮಹ ದೇವಶಾಸ್ತ್ರಿಗಳೂ ವೆಂಕಟಕೃಷ್ಣಯ್ಯನವರೂ ವಿದ್ವಾಂಸರನ್ನು ಎದುರಿ ಸಿದರು. ಬಾಲ್ಯ ವಿವಾಹವೇ? ಋತುಮತೀ ವಿವಾಹವೇ? ಎಂದು ವಾದವು ನಡೆಯಿತು. ಧರ್ಮಶಾಸ್ತ್ರಗಳನ್ನು ವಿದ್ವಾಂಸರು ಎತ್ತಿ ತೋರಿಸಿದರು. ಮಹದೇವಶಾಸ್ತ್ರಿಗಳು ಸಾಮಾನ್ಯರೆ? ಓರಿಯಂಟಲ್ ಲೈಬ್ರರಿಯಲ್ಲಿ ಕ್ಯೂರೇಟರ್ ಆಗಿದ್ದವರು. ಸ್ವತಃ ವಿದ್ವಾಂಸರು. ಅವರು ನಗುನಗುತ್ತಾ ಕೇಳಿದರು: "ಧರ್ಮ ಎನ್ನುವುದು ಅಲ್ಲಿಷ್ಟು ಇಲ್ಲಿಷ್ಟು ಆಚರಿಸುವ ವಿಷಯವೋ? ಅಥವಾ ಸಾಕಲ್ಯವಾಗಿ ಎಂದರೆ ಈ ಕೊನೆಯಿಂದ ಈ ಕೊನೆಯವರೆಗೂ ಆಚರಿಸಬೇಕಾದುದೋ?" ಸ್ನೇಹದಿಂದ ಕೇಳಿದ ಪ್ರಶ್ನೆಗೆ ವಿದ್ವಾಂಸರೂ ಸರಸವಾಗಿಯೇ ಉತ್ತರ ಕೊಡುತ್ತ "ನಿಜ ತಾವು ಹೇಳುವುದು. ಧರ್ಮ ಎನ್ನುವುದು ಸಾಕಲ್ಯ ವಾಗಿ ಆಚರಿಸಬೇಕಾದ ವಿಚಾರ ಅನ್ನಿ" ಎಂದರು.

ಶಾಸ್ತ್ರಿಗಳು ಕೈಮುಗಿದುಕೊಂಡು ಹೇಳಿದರು: "ತಾವೆಲ್ಲ ಮಹನೀಯರು. ಬುದ್ಧಿಯವರು ಎಷ್ಟೇ ಆಗಲಿ ರಾಜವಂಶದವರು. ನಾವೆಲ್ಲ ಲೋಕ ಕ್ಷೇಮಕ್ಕಾಗಿ ಮಾತನಾಡೋಣ. ಅಗ್ನಿ, ಗಾಯತ್ರಿ, ಎರಡೂ ಮೂರು ವೇಳೆ ತಪ್ಪಿದರೆ ಹೋಯಿತು ಎಂದು ಶಾಸ್ತ್ರಗಳೇ ಹೇಳುತ್ತಿವೆ. ಎರಡನ್ನೂ ತಲೆತಲಾಂತರದಿಂದ ಬಿಟ್ಟವರ ವಿಷಯ ವನು ಹೇಳುತ್ತೀರಿ? ಅವೇ ಸನಾತನ ಧರ್ಮದ ಮೂಲಸ್ತಂಭಗಳು. ಅವಿಲ್ಲದ ಮೇಲೆ ನಾವು ಮಾಡುವುದೇನು? ಅದಕ್ಕಾಗಿಯೇ ದಯಾ

ನಂದರು, ಆರ್ಯಸಮಾಜ ಮಾಡಿ ಎಲ್ಲರಿಗೂ ವೇದಾಧಿಕಾರ ಎಂದರು. ಈಗ ತಾವು ಬ್ರಾಹ್ಮಣರಿಗೆ ವಿನಾ ಇನ್ನು ಯಾರಿಗೂ ಇಲ್ಲ ಎನ್ನುತ್ತೀರಿ. ನಾಳೆ ನಾವು ಬ್ರಾಹ್ಮಣರು ಹೇಗೆ ಬೇಕಾದರೂ ಮಾಡಿಕೊಳ್ಳಲಿ. ಬ್ರಾಹ್ಮಣೇತರರಿಗೆಲ್ಲ ಋತುಮತೀ ವಿವಾಹವೇ ಆಗಬೇಕು ಎಂದು ಲಾ ಮಾಡಿದರೆ, ಆಗೇನು ಮಾಡುತ್ತೀರಿ. ನೀವು ಬ್ರಾಹ್ಮಣರು ಇರುವುದು ಶೇ. ೪ರಷ್ಟು. ಉಳಿದ ೯೬ಕ್ಕೆ ಮಾಡುವ ಲಾ ನೀವು ಅನುಸರಿಸುವುದೇ ? ನಿಮಗಾಗಿ ಮಾಡಿದ ಲಾ ಅವರು ಅನುಸರಿಸುವುದೇ ತಾವೇ ಹೇಳಿ."

"ನೋಡಿ ಶಾಸ್ತ್ರಿಗಳೇ, ಧರ್ಮ ಸಂಖ್ಯಾಬಲದಿಂದ ಗೊತ್ತು ಮಾಡುವುದಲ್ಲ. ಬ್ರಾಹ್ಮವಿವಾಹ ಬೇಕು ಎನ್ನುವವರು 'ಪ್ರಾಗೃತೋ: ಕನ್ಯಾದಾತವ್ಯಾ' ಎಂಬ ಆರ್ಯೋಕ್ತಿಯಂತೇ ನಡೆಯಬೇಕು. ಇದು ನಮ್ಮ ತೃಪ್ತಿಗಾಗಿ ನಾವು ಮಾಡಿದ್ದಲ್ಲವಲ್ಲ !"

"ಸ್ವಾಮಿ, ತಾವು ಹೇಳಿದ ವಚನ ಗೌತಮಧರ್ಮ ಸೂತ್ರದ್ದು. ತಾವು ಕೋಪಮಾಡಿಕೊಳ್ಳಬೇಡಿ. ಹೇಳುವ ಮಂತ್ರದ ಅರ್ಥ ಪುರೋಹಿತರಿಗೂ ತಿಳಿಯದ ಕಾಲವಾಗಿದೆ. ಕೊಬರಿ ಬಿಟ್ಟು ಚಿಪ್ಪು ಹಿಡಿದ ಹಾಗೆ ಅರ್ಥ ಬಿಟ್ಟು ಶಬ್ದ ಹಿಡಿದರೆ ಫಲವೇನು ?"

"ಸ್ವಾಮಿ, ನಮ್ಮ ಶಾಸ್ತ್ರ ಶ್ರದ್ಧಾವಂತರಿಗೆ ಮಾತ್ರ ಅರ್ಥವಾಗುವುದು. ಮಾಡಿ ನೋಡಬೇಕಾದ ವಿಚಾರ ಆಡಿ ಮುಗಿಸುವುದು ಹೇಗೆ ?"

ವೆಂಕಟಕೃಷ್ಣಯ್ಯನವರು ಶಾಸ್ತ್ರಿಗಳನ್ನು ತಡೆದು ಒಂದು ಮಾತು ಕೇಳಿದರು : "ದೇವರು, ನಾವು ಭ್ರಷ್ಟರು. ನಮ್ಮನ್ನು ಬಿಡಿ. ನಾವು ಬ್ರಾಹ್ಮವಿವಾಹದ ದಂಪತಿಗಳಲ್ಲಿ ಹುಟ್ಟಿದೆವೋ ? ಗಂಧರ್ವ ವಿವಾಹವಾದವರಲ್ಲೇ ಹುಟ್ಟಿದೆವೋ ? ಈಗ ತಾವು ಹೇಳಿ. ಬ್ರಾಹ್ಮ ವಿವಾಹದ ಧರ್ಮಸಂತಾನ ತಾನೇ ತಾವು. ತಮ್ಮ ಶ್ರದ್ಧೆಯ ವಿಚಾರದಲ್ಲಿ ನಮಗೂ ಸಂದೇಹವಿಲ್ಲ : ತಮಗೂ ಇಲ್ಲ. ತಾವು ಏನು ಅರ್ಥಮಾಡಿಕೊಂಡಿದ್ದೀರಿ. ಹೇಳಿ. 'ವರ್ಣಾನಾಂ ಬ್ರಾಹ್ಮಣೋ ಗುರುಃ' ಎನ್ನುತ್ತೀರಿ. ಇದೋ ನಾವೂ ಹೇಳುತ್ತೇವೆ. ಅರ್ಜುನನ ಮಾತೇನು

ಶಾಸ್ತ್ರಗಳೇ ?"

"ಶಿಷ್ಯಸ್ತೇಽಹಂ ಶಾಧಿಮಾಂ ಪ್ರಪನ್ನಂ"

"ಇಗೋ ನಾವು ಎದ್ದು ನಿಮಗೆ ಸಾಷ್ಟಾಂಗ ಹಾಕುತ್ತೇವೆ. ತಮ್ಮ ಅಪ್ಪಣೆಯಾದರೆ ಮಡಿಯಲ್ಲಿ ದರ್ಭೆ ಕಲಶ ಹಿಡಿದುಕೊಂಡು ತಾವು ಹೇಳಿದ ಹೊತ್ತಿಗೆ ತಮ್ಮ ಮನೆಗೆ ಬರುತ್ತೇವೆ. ನಮಗೆ ಬ್ರಾಹ್ಮ ವಿವಾಹ ಏಕೆಬೇಕು ? ಗಾಂಧರ್ವ ವಿವಾಹ ಏಕೆ ಬೇಡ ? ಹೇಳಿಕೊಡು ತ್ತೀರಾ ? ಈಗ ನೋಡಿ ಗಾಂಧರ್ವ ವಿವಾಹ ಒಪ್ಪಿಕೊಂಡು ಅದರಂತೆ ನಡೆಯುವ ಯೂರೋಪಿರ್ಯರು ಬೂಡ್ಸುಕಾಲನ್ನು ನಮ್ಮ ತಲೆಯ ಮೇಲೆ ಇಟ್ಟು ತುಳಿದು ಆಳುತ್ತಿದ್ದಾರೆ. ಬ್ರಾಹ್ಮ ವಿವಾಹದ ಧರ್ಮ ಸಂತಾನಗಳು ಯುರೋಪಿರ್ಯರಿಗೆ ನಾವು ದಾಸರು ಅನ್ನುವುದು ತಿಳಿದೇ ಇದೇ ಸ್ವರ್ಗ, ಬ್ರಿಟಿಷರು ಧರ್ಮದೇವತೆಯ ಅಪರಾವತಾರ ಎನ್ನುತ್ತೇವೆ. ಈಗ ಹೇಳಿ, ಯಾವುದು ಸರಿ ?"

ವಿದ್ವಾಂಸರು ಅಪ್ರತಿಭರಾದರು.

ಅರಸಿನವರು ನಡುವೆ ಬಾಯಿ ಹಾಕದಿದ್ದರೆ ಚೆನ್ನಿಲ್ಲ ಎಂದು ಮಾತನಾಡಿದರು : "ವೆಂಕಟಕೃಷ್ಣಯ್ಯನವರೆ, ನಿಮ್ಮ ಬಾಯಿಗೆ ಮಾಧವರಾಯರಂತಹ ಸಿಂಹ ಅಂಜಿಬಿಟ್ಟಿತು. ಇನ್ನು ನಮ್ಮ ವಿದ್ವಾಂ ಸರ ಮಾತೇನು ? ಹಾಗಾದರೆ ತಮ್ಮ ಮಾತೇನು ?"

"ನಮ್ಮ ಮಾತು ಏನೂ ಇಲ್ಲ ಬುದ್ಧಿ. ಇದು ಹೀಗೆ ಬಿಟ್ಟರೆ, ಇಂಡಿಯ ಧ್ವಂಸವಾಗಿ ಹೋಗುತ್ತೆ. ಇದೇ ನಮ್ಮ ವಿದ್ವಾಂಸರನ್ನೆಲ್ಲಾ 'ಆ ಕ್ರಿಶ್ಚಿಯರ್ಯರು ನಿಮ್ಮ ಶಾಸ್ತ್ರಗಳಿಗೆಲ್ಲ ಕಾಮನಹಬ್ಬ ಮಾಡುತ್ತಿ ದ್ದಾರೆ. ಅವರನ್ನು ಎದುರಿಸಿ ಎರಡು ಮಾತನಾಡುವವರಿಲ್ಲ ಬನ್ನಿ ರಯ್ಯ' ಎಂದರೆ ಒಬ್ಬರೂ ಮುಂದೆ ಬರುವುದಿಲ್ಲ. ಅವರನ್ನು ಎದುರಿಸಿ ನಾವು ಸಾಧ್ವಿಯಲ್ಲಿ ಬರದದ್ದೇ ಬರಗದ್ದು. ಆ ಕ್ರಿಶ್ಚಿಯರ್ಯರು ನೋಡಿ, ಅವರ ಶ್ರದ್ಧೆ ನೋಡಿ, ನನ್ಮನರ ಬಾಯಿ ಬಡುಕತನ ನೋಡಿ. ಒಬ್ಬ ಕ್ರಿಶ್ಚಿಯರ್ಯ ತಾನು ಕ್ರಿಸ್ತನ ಸಂದೇಶವನ್ನು ತಂದು ಲೋಕೋದ್ಧಾರ ಮಾಡುವ ದೇವದೂತನೆಂದುಕೊಳ್ಳುತ್ತಾನೆ. ಮಹಮ್ಮದೀಯ ಖೊರ್ರಾ ಓದಿರಲಿ, ಬಿಡಲಿ, ಕಾಫರನನ್ನು ತುಳಿದರೆ ಜನ್ನತ್ ಬರುತ್ತೆ

ಎಂದುಕೊಳ್ಳುತ್ತಾನೆ. ಒಬ್ಬರ ರಾಜ್ಯವಾಯಿತು : ಇನ್ನೊಬ್ಬರ ರಾಜ್ಯ ಒಡೆಯುತ್ತಿದೆ. ನಮ್ಮ ಸಂಸ್ಕೃತದ ಉತ್ತಮ ಗ್ರಂಥಗಳಲ್ಲಿ. ಅಷ್ಟೇನು, ವೇದಗಳಲ್ಲಿ ಇನ್ನೊಬ್ಬರಿಗೆ ಅಧಿಕಾರ ಇಲ್ಲ ಎಂದೆವು. ಗೋಮಾಂಸ ಭಕ್ಷಕನಾಗಿ ಮದ್ಯಪಾನ ಧುರಂಧರನಾದ ಮಾಕ್ಸ್‌ಮುಲ್ಲರ್, ತಪಸ್ಸು ಮಾಡಿ, ನಮ್ಮ ನೂರು ಜನರ ಕೈಲಿ ಆಗದ ಕೆಲಸವನ್ನು ಅವನು ಸಾಧಿಸಿ ವೇದಗಳನ್ನು ಪ್ರಿಂಟ್ ಮಾಡಿಸಿದ. ನಮ್ಮವರೆಲ್ಲರೂ ಅವನು ಮೋಕ್ಷ ಮೂಲರ ಭಟ್ಟಾಚಾರ್ಯ ಎಂದು ತಮ್ಮ ಪಾಂಡಿತ್ಯ ಮರೆದರು. ಅರಸಿನವರೇ, ಯಾವ ದೇಶದಲ್ಲಿ ವಿದ್ವಾಂಸರು ಆತ್ಮಗೌರವ, ಆತ್ಮ ಶ್ರದ್ಧೆಗಳನ್ನು ಬಿಟ್ಟು ಗ್ರಾಮೊಫೋನ್ ಆಗುತ್ತಾರೆಯೋ ಅಲ್ಲಿ ಶಾರದೆಗೆ ನಡೆಯುವುದು ಪೂಜೆಯಲ್ಲ : ಅಪಮಾನ. ಅದು ಅಭಿವೃದ್ಧಿಯ ಗುರುತಲ್ಲ : ಸಮಾಧಿಗೆ ಹೋಗುತ್ತಿರುವ ನಡಿಗೆ. ನಮ್ಮವರಿಗೆ ಇದು ಎಂದಿಗೆ ಅರ್ಥವಾಗುವುದೋ ಅಪ್ಪೊತ್ತು ಮುಕ್ತಿ. ಬಿಡಿ."

ಅರಸಿನವರಿಗೆ ವೆಂಕಟಕೃಷ್ಣಯ್ಯನವರ ಉತ್ಸಾಹ ನೋಡಿ, ಅಭಿಮಾನನೋಡಿ, ಅವರು ವರ್ಣಿಸಿದ ಪತನದ ಕಡೆ ನೋಡಿ, ಮನಸ್ಸು ಭಕ್ತ ಮೊಸರು ಕಲಿಸಿದಂತಾಯಿತು. ವಿದ್ವಾಂಸರು ಚಿತ್ರಾರ್ಪಣಂತಾಗಿದ್ದರು. ಶಂಭುರಾಮಯ್ಯ ಮಲ್ಲಣ್ಣ ಇಬ್ಬರೂ ಅದನ್ನು ಕೇಳಿ ಪರವಶರಾಗಿ ಹೋಗಿದ್ದರು.

"ಇದಕ್ಕೇನು ಔಷಧಿ ಯಜಮಾನರೇ ?"

"ನೋಡಿ ದೇವರು, ರಾಮಕೃಷ್ಣ ಪರಮಹಂಸರು ಹುಟ್ಟಿದರು. ಆ ಮನುಷ್ಯ ನಿರಕ್ಷರಕುಕ್ಷಿ, 'ಅ' ಎಡಗಡೆಯಿಂದ ಬರೆಯಬೇಕೋ ಬಲಗಡೆಯಿಂದ ಬರೆಯಬೇಕೋ ತಿಳಿಯದವನು. ಆದರೆ ಅದೇನೋ ಕಾಳೀಮಾಯಿಯೆಂದರೆ ಸಾಕು ಮೈಮರೆತು ಹೋಗುತ್ತಿತ್ತು. ಆ ಪುಣ್ಯಾತ್ಮ ಏನೋ ತಪಸ್ಸು, ಏನೋನಿಷ್ಠೆ, ಏನೋ ಮಣ್ಣುಮಾಡಿ ಸತ್ತು ಸುಣ್ಣವಾಗಿ ನರೇಂದ್ರನಮೇಲೆ ಪ್ರಭಾವ ಬೀರಿದ. ಕಲಕತ್ತಾ ಯೂನಿವರ್ಸಿಟಿಯಲ್ಲಿ ಮೊದಲನೆಯವನಾಗಿ ಬಂದ ತೇಜಸ್ವಿ ಬಾಲಕ, ಮಹರ್ಷಿ ದೇವಂದ್ರನಾಥ ಟಾಗೋರರವರನ್ನು ದೇವರನ್ನು ಕಂಡಿದ್ದೀಯಾ ಎಂದು ಕೇಳಿದ ಧೀರ ತರುಣ, ಪರಮಹಂಸರ ಮಾತಿಗೆ

ಮುಗ್ಗರಿಸಿದ. ಅವರ ಶಿಷ್ಯನಾದ. ದೇಶದೇಶಾಂತರಗಳಲ್ಲಿ ಅವರ ಕೀರ್ತಿಯನ್ನಲ್ಲ: ನಮ್ಮ ವೇದಾಂತದ ಪ್ರತಿಷ್ಠೆ ಗೌರವಗಳನ್ನು ಕಾಪಾಡಿದ. ಇದೆಲ್ಲ ಗಂಗಾತೀರದ ಕೊನೆಯಲ್ಲಿ. ಇತ್ತ ಗಂಗಾ ಸಿಂಧೂಗಳ ನಡುವೆ ಇನ್ನೊಬ್ಬ ಪುಣ್ಯಾತ್ಮ ಪುಟ್ಟಿದ. ಅವನು ಹೇಳುವುದು ನಿಜವೋ ಸುಳ್ಳೋ ಅಂತೂ ಈ ಜಗತ್ತಿಗೆ ಸವಾಲ್ ಹಾಕಿದ: ವೇದಗಳಲ್ಲಿ ಇಲ್ಲದ್ದು ಇನ್ನೆಲ್ಲೂಇಲ್ಲ ಎಂದ. ಖುರಾನ್ ಬೈಬಲ್‌ಗಳನ್ನು ವಿಮರ್ಶೆಮಾಡಿ ಪೂರ್ವಾಪರ ವಿರೋಧಗಳನ್ನು ತೋರಿಸಿ ಶುದ್ಧಲಘು ಗ್ರಂಥಗಳು ಎಂದುಬಿಟ್ಟ. ಆ ಪುಣ್ಯಾತ್ಮ, ಆ ಮಹಾಪುರುಷ ಆ ದಯಾನಂದ, ಖುರ್ರಾ ಹುಟ್ಟಿದಲಾಗಾಯಿತು ನಡೆಯದಿದ್ದ ಭಾರೀ ಕೆಲಸಮಾಡಿಬಿಟ್ಟ. ಆತನಹಾಗೆ ಎಲ್ಲವನ್ನೂ ತರ್ಕದ ಕೊಡಲಿ ಪೆಟ್ಟು ಹಾಕಿ ಸೀಳಿ ಎಸೆಯುವ ಕೆಲಸವೂ ಬೇಕು. ವಿವೇಕಾನಂದನಹಾಗೆ ನಮ್ಮ ಶಾಸ್ತ್ರ ಸಿದ್ಧಾಂತಗಳನ್ನು ಬುಡದಿಂದ ನೆತ್ತಿಯವರೆಗೆ ಸರಿ ಎನ್ನಿಸುವ ಶ್ರದ್ಧಾಮಾರ್ಗವಾದರೂ ಬೇಕು. ಎರಡೂ ಇಲ್ಲದೆ, ತೆಲುಗರು ಹೇಳುವ ಹಾಗೆ 'ಪೆಟ್ಟಾಕಾದು ಪೋತೂಕಾದು' ಅನ್ನುವ ಶಾಲು ಜೋಡಿ ವಿದ್ವಾಂಸರಿಂದ ನಮಗೆ ಆಗಬೇಕಾದುದೇನು ? ಆಗುವುದೇನು ? ಇಲ್ಲ ಅನ್ನದೆ ಗಣೇಶನ ಹಬ್ಬದಲ್ಲಿ ಇವರು ವಾಕ್ಯಾರ್ಥ ಮಾಡಿದರೆ ಕಿವಿಯಾರೆ ಕೇಳಬಹುದು–ಸಂಸ್ಕೃತದಲ್ಲಿ ಅವರು ಹೇಳುವುದು ನಮಗೆ ಅರ್ಥವಾಗುವುದಿಲ್ಲ: ನಮ್ಮ ಅಜ್ಞಾನ ಬಿಟ್ಟು ಕೊಡಲಾರದೆ, ನಾವು ಆಹಾ ಆಹಾ ಎನ್ನುವುದು. ಇದೆಲ್ಲ, ನಮ್ಮ ಗೋಕುಲಾಷ್ಟಮಿಯ ದನದ ಮೆರವಣಿಗೆ ಹಾಗೆ, ಅದು ಉತ್ತಮೋತ್ತಮ ಗೋಧನದ ಪ್ರದರ್ಶನ ಅನ್ನುವುದನ್ನು ಮರೆತು, ಕಾಮುಕರ ಸಂತೆ ಮಾಡಿದ್ದೇವಲ್ಲ ಹಾಗೆ. ಹೀಗಾದರೆ ಉಳಿಯುವುದು ಹೇಗೆ ?"

ನಡುವೆ ಒಬ್ಬರು ಬಾಯಿಹಾಕಿದರು: "ಅಲ್ಲಾ ಸ್ವಾಮಿ, ವಿದ್ವಾಂಸರಿಗೆ ಈಗ ಗೌರವ ಎಲ್ಲಿದೆ ? ಅವರ ಮಾತು ಕೇಳುವವರು ಯಾರು ?"

ವೆಂಕಟಕೃಷ್ಣಯ್ಯನವರು ಅಂಗಾರವಾಗಿ ಹೋದರು: "ತೆಂಗಿನ ಮರ ಹುಟ್ಟುವಾಗಲೇ ದಶಿ ಬಂದಹಾಗೆ ಬರುತ್ತದೆ. ಬಳ್ಳಿ ಹುಟ್ಟು

ವಾಗಲೇ ನೆಲದ ಮೇಲೆ ಬಿದ್ದಿರುತ್ತದೆ. ನಿಮಗೆ ಗೌರವ ಕೊಡ ಬೇಕೋ? ನೀವು ತಲೇಮೇಲೆ ಹೊಡೆದು ತಕೋಬೇಕೋ? ಆನೆ ಬೀದೀಲಿ ಹೋಗುವಾಗ ನೀವಾಗಿ ದಾರಿಬಿಟ್ಟು ಅತ್ತಕಡೆ ಸರಿಯೋ ಹಾಗೆ ಆಗಬೇಕು. ಆಗತ್ತೆ ಆಗತ್ತೆ! ನಾವೆಲ್ಲ ಅಳುತಿರುವ ಅಳು ವ್ಯರ್ಥವಾಗುವುದಿಲ್ಲ. ಒಬ್ಬ ವಿವೇಕಾನಂದ ಬಂದು ನಮ್ಮ ವೇದಾಂತದ ಗೌರವ ಪ್ರತಿಷ್ಠೆ ಕಾಪಾಡಿದ ಹಾಗೆ, ಮತ್ತೊಬ್ಬ ಮಹಾತ್ಮ ಬರುತ್ತಾನೆ, ಭಾರತಲಕ್ಷ್ಮಿಯ ಹೊಟ್ಟೆ ಬಂಜೆಯಾಗಿಲ್ಲ."

ಅವರ ಗದರುವಿಕೆಯನ್ನು ಆರ್ಭಟವನ್ನು ಕೇಳಿ ಎಲ್ಲರೂ ಹೆದರಿ ಬಿಟ್ಟಿದ್ದರು. ಆವೊತ್ತು ಮಲ್ಲಣ್ಣನಿಗೆ ಇವರ ಹಿಂದೆ ತಿರುಗಿಕೊಂಡಿದ್ದರೆ ಅನ್ನಿಸಿತು. ಶಂಭುರಾಮಯ್ಯನು "ಇವರು ಈ ಕೊಂಪೆ, ಹಳ್ಳೀಗೆ ಹಳ್ಳಿಯಲ್ಲ: ದಿಳ್ಳೀಗೆ ದಿಳ್ಳಿಯಲ್ಲ. ಈ ದೊಡ್ಡ ಹಳ್ಳಿಯಲ್ಲಿ ಒದ್ದಾಡೋ ಬದಲು ಮದರಾಸು ಬೊಂಬಾಯಿಗಳಲ್ಲಿ ಇದ್ದಿದ್ದರೆ." ಎಂದು ನೊಂದು ಕೊಂಡನು.

ಸಭೆಗೆ ಸಭೆಯೇ ಕೊಂಚ ಹೊತ್ತು ಮೌನವಾಗಿತ್ತು. ಎಲ್ಲರೂ ಭರತಖಂಡದ ದುರದೃಷ್ಟದ ಭಾರದಿಂದ ನೊಂದು ಕಂದಿದವರಂತೆ, ಮೂಕರಾಗಿ ಕೂತುಕೊಂಡಿದ್ದರು. ಮಹದೇವ ಶಾಸ್ತ್ರಿಗಳು ಪದ್ಮಾಸನ ದಲ್ಲಿ ತೊಡೆಯಮೇಲೆ ಊರಿದ್ದ ಕೈಯಲ್ಲಿ ತಲೆಯನ್ನು ಇಟ್ಟುಕೊಂಡು ಗಂಭೀರವಾಗಿ ಕುಳಿತಿದ್ದರು.

ವೆಂಕಟಕೃಷ್ಣಯ್ಯನವರು ಗೋಡೆಯನ್ನು ಒರಗಿಕೊಂಡಿದ್ದರು. ಒಂದು ಮಂಡಿ ನಿಂತಿತ್ತು. ಅದರ ಮೇಲೆ ಕೈಚಾಚಿಕೊಂಡು ಅವರ ಹೃದಯದಲ್ಲಿದ್ದ ಸಂಕಟದ ಮೂಟೆಯನ್ನು ಹೊರಸಾಗಿಸುವ ಛಾಟಾ ಮಾರ್ಗದಂತೆ ನಿಂತಿದೆ. ಕಣ್ಣು ಮುಚ್ಚಿದ್ದರೂ ನೀರು ತೊಟ್ಟು ತೊಟ್ಟಾಗಿ, ಮಳೆಯಲ್ಲಿ ಇಳಿಯುವ ಸೂರು ನೀರಿನಂತೆ, ಇಳಿಯು ತ್ತಿದೆ.

ಅದನ್ನು ನೋಡಿ ಎಲ್ಲರೂ, ಪೆಚ್ಚಾಗಿದ್ದಾರೆ. ಒಬ್ಬರೊಬ್ಬರೂ ಆದನ್ನು ನೋಡುತ್ತಿದ್ದಾರೆ. ಒಬ್ಬರ ಮೊಕ ಒಬ್ಬರು ನೋಡುತ್ತಿ ದ್ದಾರೆ. ಅಷ್ಟರಲ್ಲಿ ಯಾರೋ ಸರಸರ ಅಂತ ಹತ್ತಿ ಬಂದರು—ಮಹಡಿ

ಯು ಮೆಟ್ಟಲಿನ ಮೇಲೆ ಆದ ಸದ್ದು ನೋಡಿ ಎಲ್ಲರ ದೃಷ್ಟಿಯೂ ಅತ್ತ ತಿರುಗಿತು.

೨೬

ಬಂದವನು ನರಸಿಂಹಯ್ಯ–ತಾತಯ್ಯನವರನ್ನು ಕಂಡಕೂಡಲೇ ನೇರವಾಗಿ ಹೋಗಿ ಅವರಕಾಲಿಗೆ ನಮಸ್ಕಾರ ಮಾಡಿದನು. ಕಣ್ಮುಚ್ಚಿ ಕೂತಿದ್ದ ಅವರು ಕಣ್ಣು ಬಿಟ್ಟು ನೋಡಿ “ ಯಾರು ನರಸಿಂಹಯ್ಯನೇ ?” ಎಂದರು. ಆ ಕಣ್ಣಿನಲ್ಲಿಯೇ ಅವರ ಅಭಿಮಾನ ಕನ್ನಡಿಸಿದಂತೆ ಕಾಣುತ್ತಿತ್ತು. ಮುಖದ ಮೇಲೆ ವಿಶ್ವಾಸದ ಅರಳು ಅರಳಿ ಗಂಭೀರ ತೆಯ ಮಾಯವಾಗಿ ಪ್ರಸನ್ನತೆಯು ಮೂಡಿ, ಮುದಿಮೊಕವು ಭಾವ ಸುಂದರವಾಯಿತು.

“ ಏನೋ ತುಂಟ ? ನೀನೇನೋ ವಿವೇಕಾನಂದರ ಪುಸ್ತಕ ಓದಿ ಬಹು ಸ್ವಾರಸ್ಯವಾಗಿ ಕನ್ನಡಕ್ಕೆ ಹೇಳುತ್ತೀಯಂತೆ. ಕೇಳೋಣ ಅಂತ ಮಹದೇವ ಶಾಸ್ತ್ರಿಗಳನ್ನೂ ಕರೆಕೊಂಡು ಬಂದರೆ, ನೀನೇ ಚಕ್ಕರ್. ನರಸಿಂಹಯ್ಯನು ತಲೆ ತಗ್ಗಿಸಿಕೊಂಡಿದ್ದನು. ತಾತಯ್ಯನವರು ಮುಂದು ವರಿಸಿದರು :

“ ನೋಡು, ನೀನು ಲೇಟ್ ಆಗಿ ಬಂದದ್ದು ಎಷ್ಟು ರಂಪ ವಾಯಿತುಗೊತ್ತಾ. ಈ ಮಹಾವಿದ್ವಾಂಸರಿಗೂ ನನಗೂ ಹಣಾಹಣಿ ಯಾಗಿಹೋಯಿತು ಬಲ್ಲೆಯಾ ? ಇವರಿಗೆಲ್ಲಾ ಈ ಮುದುಕನಿಗೆ ಕಪಾಳಕ್ಕೆ ಹಾಕಿ ಹಲ್ಲು ಉದುರಿಸಿ ಬಿಡಬೇಕು ಅನ್ನೋಷ್ಟು ಕೋಪ ಬಂದಿದೆ.”

“ ಅದಕ್ಕೋಸ್ಕರಲೇ ಏನೋ ಹಲ್ಲೇ ಇಲ್ಲಾ !”

“ ಹೀಗೆ ತಲೆ ಹರಟೆ ಮಾಡಿದಾಗ ಯಾರೋ ಉದುರಿಸಿ ಬಿಟ್ಟರು. ಇನ್ನೊಬ್ಬರಿಗೆ ಕೋಪ ಬಂದರೆ ಉದುರಿಸೋಕೆ ಇರಲಿ ಅಂತ ಕಳ್ಳ

ಹಲ್ಲು ಕಟ್ಟಿಸಿಕೊಂಡಿದ್ದೇನಪ್ಪ !"

"ನೋಡಿ, ಅರಸಿನೋರೆ, ಇಂಥವರನ್ನು ತ್ರೈನಾತಿ ಕೊಟ್ಟು ಫಕೀರ ಸಾಬರ ಗರಡಿ ವಸ್ತಾದರ ಹಾಗೆ ಮಾಡಿ ಅಖಾಡಕ್ಕೆ ಬಿಡ ಬೇಕು. ನಾನು ಹೇಳಿದೆನಲ್ಲ ವಿವೇಕಾನಂದರು ದಯಾನಂದರು ಇವರ ಮಾರ್ಗ ಹಿಡಿದಲ್ಲದೆ ಇಂಡಿಯಾ ಬದುಕೋದಿಲ್ಲ ಅಂತ. ಅವರಿಬ್ಬ ರನ್ನೂ ಒಂದಚ್ಚಿಗೆ ಹಾಕಿ ತೆಗೆದ ಹಾಗೆ ಇರೋನು ನಮ್ಮ ನರಸಿಂಹಯ್ಯ? ತಮ್ಮ ಕೈಲಾದರೆ ಮಹಾರಾಜರಿಗೆ ಹೇಳಿ. ಇವನಿಗೆ ನಮ್ಮದು ಈಚಿನದು ಎರಡೂ ವೇದಾಂತ ಪೂರ್ಣವಾಗಿ ಓದಿಸಿ ಅಂತ ಹೇಳಿ. ಶೃಂಗೇರಿಯವರ ಹತ್ತಿರ ಉಪದೇಶ ಕೊಡಿಸಲಿ. ಆಗ ನೋಡೋ ರಂತೆ, ಇವನು ತಿಲಕ್, ಗೋಖಲೆ ಅನಿಬೆಸೆಂಟರಿಗಿಂತ ಭಾರಿಯಾಗ ದಿದ್ದರೆ ಕೇಳಿ. ಆದರೆ,—"

"ಹೇಳಿಬಿಡಿ, ಅದನ್ನೂ ಕೇಳೋಣ."

"ಆಗಲಿ. ಹೇಳೋದು ಹೇಳಿಬಿಡೋಣ, ಎಕ್ಕದ ಬೀಜ ಗಾಳಿ ಯಲ್ಲಿ ಹಾರಿ ಹೋಗಿ ಎಲ್ಲಿಯೋ ಬಿದ್ದು ಗಿಡವಾಗುವ ಹಾಗೆ ನಮ್ಮ ಭಾವನೆಗಳೂ ಎಲ್ಲಿಯಾದರೂ ಹೋಗಿ ನೆಲಸಿ ಫಲವನ್ನು ಕಾಯಲಿ."

"ಇಂಡಿಯನ್ ಪಾಲಿಟಿಕ್ಸ್‌ನಲ್ಲಿ ಇನ್ನೊಂದು ಆನಂದಮಠದ ಘಟ್ಟ ಬಂದಿದೆ. ಮನೆ ಬಾಗಿಲು ಹೆಂಡತಿ ಮಕ್ಕಳು ಯಾವುದೂ ಇಲ್ಲದೆ, ದೇಶ ದೇಶ ಎಂದು ಬಡಿದುಕೊಳ್ಳುವ ಯೋಗೀಶ್ವರ ಬರಬೇಕು. ಆಗ ನಮಗೆ ಮುಕ್ತಿ."

"ಆಯಿತು, ಯಜಮಾನರೆ, ನಾವು ಆಡುವ ಉಸಿರು ಕೂಡ ಅಳೆದು ಪರೀಕ್ಷೆ ಮಾಡಿಕೊಡುತ್ತಿರುವ ಈ ಬ್ರಿಟಿಷರ ಕಪಿಮುಷ್ಟಿಯಿಂದ ನಮಗೆ ಮೋಕ್ಷವೂ ಉಂಟೆ ?"

"ಉಂಟಯ್ಯ, ನರಸಿಂಹಯ್ಯ ಉಂಟು. ವೇದಾಂತದಲ್ಲಿ ಮಿಕ್ಕದ್ದು ಯಾವುದೂ ನನಗೆ ತಿಳಿಯದು. ಆದರೂ ಹುಟ್ಟಿದ್ದೆಲ್ಲಾ ಸಾಯಬೇಕು ಅನ್ನುವ ತತ್ವ ಮಾತ್ರ ಮಾನ್ಯ – ಅದರಿಂದ, ರೋಮನ್ ಎಂಪೈರ್ ಹೋಯಿತು, ಛಾರ್ಲಮೇನ್ಸ್ ಎಂಪೈರ್ ಹೋಯಿತು. ಮೊಗಲ್ ಎಂಪೈರ್ ಹೋಯಿತು. ಹಾಗೆಯೇ ಬ್ರಿಟಿಷ್ ಎಂಪೈರ್

ಕೂಡ ಹೋಗಬೇಕು: ಹೋಗುತ್ತೆ. ಆದರೆ, ಬ್ರಿಟಿಷ್ ಎಂಪೈರ್ ಹೋಗಿ ಇಂಡಿಯ ಸ್ವತಂತ್ರವಾಗುತ್ತದೆಯೋ, ಇಂಡಿಯಾ ಹೋಗಿ ಬ್ರಿಟಿಷ್ ಎಂಪೈರ್ ಹೋಗುತ್ತದೆಯೋ ಅದನ್ನು ಮಾತ್ರ ಹೇಳಲಾರೆ. ಹುಂ. ಇರಲಿ, ನಮ್ಮ ಹರಟೆ. ಇನ್ನೂ ಹತ್ತೂವರೆಗಂಟೆ. ಒಂದು ಅರ್ಧ ಗಂಟೆ ತಮ್ಮ ಉಪನ್ಯಾಸವಾಗಲಿ ಕೇಳೋಣ."

ಅರಸಿನವರ ಕಡೆ ನರಸಿಂಹಯ್ಯ ನೋಡಿದನು: ಅವರು ಎಲ್ಲರ ಕಡೆಯೂ ನೋಡಿದರು. ಎಲ್ಲರೂ ಆಗಬಹುದೆಂದು ತಲೆಯನ್ನು ತೂಗಿದರು. ನರಸಿಂಹಯ್ಯನು ಪ್ರವಚನವನ್ನು ಆರಂಭಿಸಿದನು. ವಿವೇಕಾನಂದರ ಉಪನ್ಯಾಸಗಳಲ್ಲಿ ಒಂದನ್ನು ತೆಗೆದುಕೊಂಡು ಅವನು ಅದನ್ನು ಕನ್ನಡದಲ್ಲಿ ಹೇಳಿದನು. ತಾತಯ್ಯನವರೂ ಶಾಸ್ತ್ರಿಗಳೂ ಅವನ ವಾಚೋವೈಖರಿಯನ್ನು ಕಂಡು ಆನಂದಪಟ್ಟರು. ಇಂಗ್ಲೀಷಿನಲ್ಲಿ ಒಮ್ಮೆ ಓದುತ್ತಾನೆ. ಆ ವಾಕ್ಯದಲ್ಲಿರುವ ಅರ್ಥವನ್ನೆಲ್ಲ ಹೃದಯದಲ್ಲಿ ತುಂಬಿಟ್ಟುಕೊಂಡು ಆ ಭಾವವನ್ನೇ ಸೂಚಿಸುವ ಸರಳ ವಾಕ್ಯಗಳಿಂದ ಅದನ್ನು ತಾನು ಅನುಭವಿಸಿ ಸಭಿಕರ ಹೃದಯಕ್ಕೆ ತಗುಲುವಂತೆ ವಿವರಿಸುತ್ತಾನೆ. ಅವರು ಹೌದು ಹೌದು ಎಂದು ಹಲ್ವಾ ತಿಂದು ರಸವನ್ನು ಅನುಭವಿಸಿದವರಂತೆ ತಲೆತೂಗುತ್ತಾರೆ.

ನರಸಿಂಹಯ್ಯನ ಪ್ರವಚನ ಸುಮಾರು ಒಂದು ಗಂಟೆ ನಡೆಯಿತು. ಎಲ್ಲರೂ ಸಂತೋಷ ಪಟ್ಟರು. ಎಲ್ಲರ ಸಂತೋಷವೂ ಒಂದು ತೂಕ. ತಾತಯ್ಯನವರದೇ ಒಂದು ತೂಕ ಎನ್ನಿಸಿತು. ಶಾಸ್ತ್ರಿಗಳು "ನಿಜ ವೆಂಕಟಕೃಷ್ಣಯ್ಯನವರೇ, ನೀವು ಹೇಳಿದಾಗ ನಾನೂ ಹೀಗೂ ಉಂಟೆ ಎಂದುಕೊಂಡೆ. ಆದರೆ ಈಗ ನೀವು ಹೇಳಿದ್ದೆಲ್ಲ ಅಕ್ಷರಶಃ ನಿಜ ಎನ್ನಿಸುತ್ತೆ. ಪಂಡಿತರನ್ನೂ ಕರೆದುಕೊಂಡು ಬಂದು ತೋರಿಸಿ. ಈಗಲೇ ಬೇಕಾದರೂ ಈತನನ್ನು ನಮ್ಮ ಲೈಬ್ರರಿಯಲ್ಲಿ ಪಂಡಿತನನ್ನಾಗಿ ತೆಗೆದುಕೊಳ್ಳಬಹುದು. ಏನಯ್ಯ, ನಿನ್ನ ವಯಸ್ಸೆಷ್ಟು?"

"ನನಗೆ ಹದಿನಾರು ತುಂಬಿತು."

"ನಿಮ್ಮಪ್ಪನಿಗೆ ನೀನು ಒಬ್ಬನೇ ಮಗ ಅಲ್ಲವೇ ನರಸಿಂಹಯ್ಯ?"

"ಹೌದು ಸಾರ್."

" ನೋಡಿ, ಇವರಪ್ಪನಿಗೆ ಇನ್ನೊಬ್ಬ ಮಗ ಇದ್ದಿದ್ದರೆ, ನೀನು ಸಂನ್ಯಾಸಿಯಾಗಿ ಹೋಗೋ ಎನ್ನುತ್ತಿದ್ದೆ. ಇವನು ಸಂನ್ಯಾಸಿಯಾಗ ಬೇಕು. ಒಂದು ಕಡೆ ಅನುಷ್ಠಾನದಿಂದ, ದೃಢವಿಶ್ವಾಸದಿಂದ ಹಿಂದೂ ಆಗಿ, ಇನ್ನೊಂದು ಕಡೆ ಬ್ರಿಟಿಷ್ ಸಿಂಹದ ಕೇಸರ ಕೀಳುವ ಧೀರನಾಗ ಬೇಕು. ಏನು ಮಾಡಲಿ. ನನಗೆ ವಯಸ್ಸಾಗಿ ಹೋಯಿತು, ನೋಡಿ. ಅರಸಿನವರೆ, ಇವನು ಸಂನ್ಯಾಸಿಯಾದರೆ, ವಿವೇಕಾನಂದ : ಗೃಹಸ್ಥನಾ ದರೆ ತಿಲಕ್ "

ಅರಸಿನವರು ತಲೆದೂಗುತ್ತಾ ಹೇಳಿದರು :

" ಆಗಲೇ ನೀವು ಹೇಳಿದಿರಿ : ಮಹಾರಾಜರಿಗೆ ಹೇಳಿ ಅಂತ, ಈ ನರಸಿಂಹಯ್ಯ ಅರಣ್ಯದ ಸಿಂಹವಾಗುವ ಜಾತಿ : ಸರ್ಕಸ್ಸಿನ ಸಿಂಹ ವಲ್ಲ."

ನರಸಿಂಹಯ್ಯ ನಕ್ಕು ಹೇಳಿದ : " ಸಾರ್, ವರ್ಷ ವರ್ಷ ನೂರಾರುಜನ ನನ್ನಂತಹ ಹುಡುಗರು ತಮ್ಮ ಕೈಕೆಳಗೆ ತಯಾರಾಗಿ ಹೋಗುತ್ತಾರೆ. ಆದ್ದರಿಂದ ನನ್ನ ಹೃದಯದಲ್ಲಿ ಇರುವುದನ್ನು ಹೆದರಿ ಹೆದರಿ ತಮ್ಮ ಮುಂದೆ ಹೇಳುತ್ತೇನೆ. ನಾನು ಸಂನ್ಯಾಸಿಯಾಗ ಬೇಕೆಂದೇ ಇದ್ದೇನೆ, ತಾವು ಹೇಳಿದಂತೆ ತಿಲಕರು, ವಿವೇಕಾನಂದರೇ ನನ್ನ ಜೀವನದ ಗುರಿ. ಈಗ ಮೆಟ್ರಿಕ್ಯುಲೇಷರ್ಷ ಆಗುತ್ತಲೂ ಸಂಸ್ಕೃತ ದಲ್ಲಿ ವಿದ್ವತ್ಪರೀಕ್ಷೆ ಮಾಡಿಕೊಂಡು ಆಮೇಲೆ ಪೂನಾ, ಕಲ್ಕತ್ತಾಗಳಿಗೆ ಹೋಗಬೇಕು ಎಂದಿದ್ದೇನೆ. ಅಲ್ಲದೆ, ನಮ್ಮ ತಂದೆಯ ಆಸ್ತಿಯನ್ನು ತಂಗಿಯರಿಗೆ ಬಿಟ್ಟು, ಸ್ವಂತ ಪರಿಶ್ರಮದಿಂದ ಬದುಕಬೇಕೆಂದು ನನ್ನ ಆಸೆ."

ತಾತಯ್ಯನವರು ನಕ್ಕು ಹೇಳಿದರು :

" ನರಸಿಂಹಯ್ಯ, ಜೀವನ ಎಂದರೆ ಏನು ಎಂದುಕೊಂಡಿದ್ದೀಯೆ ? ಇಟ್ ಈಸ್ ಎ ಲೆಬ್ರಿಂತ್ ವಿತ್ ಸರ್‌ಪ್ರೈಸ್ ಅಟ್ ಎವ್ವೆರಿ ಸ್ಟೆಪ್. ಇದೊಂದು ಚಕ್ರಭೀಮನಕೋಟೆ. ಹೆಜ್ಜೆ ಹೆಜ್ಜೆಗೂ ವಿಸ್ಮಯ. ಅದ ರಿಂದ, ಗುರಿಯೊಂದು ಭದ್ರವಾಗಿಟ್ಟುಕೊ. ತೃಪ್ತಿತಪ್ಪದಿರಲಿ, ಬಂದ ದ್ದೆಲ್ಲಾ ಬರಲಿ, ಗೋವಿಂದನ ದಯೆಯಿರಲಿ ಎಂದು ಹೊರಡು. ಗೆಲುವು

ನಿನ್ನನ್ನು ಹುಡುಕಿಕೊಂಡು ಬರುತ್ತೆ. ನೋಡಿ, ಅರಸಿನವರೆ, ನಿಮ್ಮ ಮಾತಿನಲ್ಲಿ ಅರಣ್ಯದ ಸಿಂಹವಾಗುವ ನರಸಿಂಹಯ್ಯನಿಗೆ, ಮಜ್ಜಿಗೇಹಳ್ಳಿ ರಾವ್‌ಬಹದ್ದೂರನಂಥ ದಾನಶೂರನ ಒತ್ತಾಸೆ ಸಿಕ್ಕಿದರೆ ಏನಾದೀತು ಗೊತ್ತೇ ?"

"ಅನೇಕ ಸಮಯ ಇಂಗ್ಲಿಷಿನ ಗಾದೆ ಹೇಳುವ ಹಾಗೆ, 'ಒಂದು ಮೊಳೆಯಿಲ್ಲದೆ ಲಾಳ ಬಿತ್ತು. ಲಾಳವಿಲ್ಲದೆ ಕಾಲು ಕುಂಟಿತು, ಕಾಲು ಕುಂಟಿ ಕುದುರೆ ಕೆಟ್ಟಿತು.' ಅನ್ನುವ ಹಾಗೆ ಆಗುವುದು ತಪ್ಪುತ್ತೆ. ಅಂಥಾವರ ಆಶ್ರಯ ಬೇಕಾಗಿಲ್ಲ. ಈ ಜಾತಿ ಆಶ್ರಯಿಸುವುದೂ ಇಲ್ಲ : ಸ್ನೇಹ ಇದ್ದರೆ, ದೀಪಕ್ಕೆ ಸ್ನೇಹ ಇದ್ದ ಹಾಗೆ ಆಗುತ್ತೆ : ಉರಿದು ದೀಪಕ್ಕೆ ಆಗಬೇಕಾದ್ದೇನೂ ಇಲ್ಲ : ಆದರೆ ದೀಪ ಉರೀದಿದ್ದರೆ ಇದ್ದವರಿಗೆಲ್ಲಾ ಕತ್ತಲೆ."

ಶಂಭುರಾಮಯ್ಯನು "ತಾವು ಹೇಳಿದೋರ ಹತ್ತಿರ ಸಂಬಂಧಿಗಳು ಇಲ್ಲೇ ಇದ್ದಾರೆ ಬುದ್ಧಿ" ಎಂದೇ ಬಿಟ್ಟ.

ತಾತಯ್ಯನವರು ಮಲ್ಲಣ್ಣನ ಪೂರ್ವೋತ್ತರ ವಿಚಾರಿಸಿ, "ಇಂಥಾವರ ಸ್ನೇಹ ಸಂಪಾದಿಸಿಕೊಳ್ಳಿ. ನಿಮಗೊಂದು ಚಿನ್ನದಗಣಿ ಸಿಕ್ಕಿದ ಹಾಗಾಗುತ್ತೆ ಎಂದು ನಾನು ಹೇಳಿದೇ ಅಂತ ಹೇಳಿ. ಅವರು ಈಸಲ ಬಂದಾಗ ನನ್ನ ಅವರೇ ಬಂದು ನೋಡಿದರೂ ಸರಿ. ಬಾ ಅಂದರೆ ನಾನೇ ಬರುತ್ತೇನೆ ಅಂತಲೂ ಹೇಳಿ." ಎಂದರು.

ಮಲ್ಲಣ್ಣನಿಗೆ ತಾತಯ್ಯನವರಂತಹ ಮಹಾಪುರುಷರು ತನ್ನೊಡನೆ ಮಾತನಾಡಿದರಲ್ಲ ಎಂದು ಪರಮ ಸಂತೋಷವಾಗಿ ಹೋಯಿತು.

ಮಲ್ಲಣ್ಣನು ಮನೆಗೆ ಹೋಗುವ ವೇಳೆಗೆ ಹನ್ನೆರಡು ಗಂಟೆಯಾಗಿ ಹೋಗಿತ್ತು. ಮಜ್ಜಿಗೇ ಹಳ್ಳಿಯಿಂದ ಸುದ್ದಿ ಬಂದಿತ್ತು: "ಮಲ್ಲಮ್ಮಣ್ಣಿ ಮೈನೆರೆದಿದ್ದಾರೆ. ಈ ಕೂಡಲೇ ಇಬ್ಬರೂ ಬರಬೇಕು. ಆನಂದಮ್ಮನವರು ಶಂಭುರಾಮಯ್ಯನವರನ್ನೂ ಕರೆದು ತರಬೇಕು" ಎಂದು ರಾಣಿ ಸುಂದರಮ್ಮಣ್ಣಿಯವರು ಕೆಂಪಮ್ಮಣ್ಣಿಯವರಿಗೆ ಬರೆದಿದ್ದರು.

ಮಲ್ಲಣ್ಣನು ಸುದ್ದಿಯನ್ನು ಕೇಳಿ "ಮತ್ತೆ ಇನ್ನೂ ಗಂಟೇ ಕಟ್ಟಿಲ್ಲವಲ್ಲಾ ಕೆಂಪಮ್ಮಣ್ಣಿಯವರು ?" ಎಂದನು. ಮಾತಿನಲ್ಲಿ ಕೊಂಕು

ತಾನೇ ತಾನಾಗಿತ್ತು.

ಕೆಂಪಿಯೂ ಅದೇ ಕೊಂಕು ಸೇರಿಸಿ ಹೇಳಿದಳು: "ಮಲ್ಲ ಬುದ್ಧಿಯವರ ಸವಾರಿ ಬರಲಿ ಅಂತ ಕಾದಿದ್ದರು."

"ಹಂಗಂದರೆ ಊಟಾನೂ ಅಲ್ಲೇನೋ ?"

"ಹುಜೂರ್ ಅಪ್ಪಣೆ ಆದಂಗೆ."

"ನಾವು ಬರೋಕಿಲ್ಲ. ನಮಗೆ ಬಹಳ ಕೆಲಸಾ ಅದೆ."

"ಅಬ್ಬಾ ! ಅದೇನೋ ನಾಕಾಣದ ಕೆಲಸ."

"ಬಲು ಭಾರಿ ಕೆಲಸ."

"ಅದೇನೂ ಅಂತಲಾದರೂ ಹೇಳಬಾರದಾ ಮೂದೇವಿ !"

"ಹಂಗೆ ಬಾ ದಾರಿಗೆ. ಅಲ್ಲಾ ಕಣ್ಲೇ ! ಕೇಳಿಲ್ಲವಾ ? ಮಾದೇವನೇ ಮಾಯಿ ಕೈಹಿಡಿದು ಮೂದೇವಿಯಾದ ಮೇಲೆ, ನಿನ್ನಂತಾ ಹೆಣ್ಣು ದೈಯ ಹಿಡಿದಿರೋ ನಾನು ಮೂದೇವಿಯಲ್ಲದೆ ಇನ್ನೇನಾದೇನು ?"

"ಏ ! ನನ್ನೇ ದೈಯ ಮಾಡಬುಟ್ಟರಲ್ಲಾ, ನೋಡಿದಿರಾ ? ಅದೇನಾ ಕೆಲಸ ಏಳಿ ಅಂದ್ರೆ."

ಹೊಟ್ಟೆ ಪೂಜೆಯ ಮಾಡಬೇಕಮ್ಮೀ ॥ ಅಮ್ಮೀ॥<br>
ತಟ್ಟೆ ಮುಂದೆ ಕೂತುಕೊಂಡು,<br>
ರೊಟ್ಟಿ ಎದುರು ಇಟ್ಟುಕೊಂಡು,<br>
ಚಟ್ನಿ ತುಪ್ಪ ಹಾಕಿಕೊಂಡು,<br>
ಪಟ್ಟಾಗಿ ಹೊಡೆಯುತ್ತಾ ॥

"ಅಂಯ್ ! ನಿಮ್ಮ ಸರಸ ಏನೇಳೀವೋ ! ನಾನು ನಿಜವಾಗಿ ಏನೋ ಕೆಲಸ ಕಟ್ಟಿಕೊಂಡು ಬಂದವ್ರೆ ಅಂತಿನ್ನಿ. ಆಗ ಕಾಲಲ್ಲಿ ತಿರುಗತಾ ಇದ್ದಾಗ ಮೊಕಾ ಕಂದೀ ಹಸಿವು ಗೊತ್ತಾಯ್ತಿತ್ತು. ಈಗ ಗಾಡೀಲಿ ತಿರುಗೋವಾಗ ತಿಳೀನಿಲ್ಲ. ಏಳಿ. ಆಮೇಲೆ ಮಾತಾಗಲಿ. ಅಯ್ಯನೋರಿಗೆ ಯಾವಾಗ ಹೇಳುತೀರಿ"?

ಹೊಟ್ಟೆಯನ್ನು ತೋರಿಸಿ ಅದನ್ನು ತಟ್ಟುತ್ತಾ "ಮೊದಲು ಇದು. ಆ ಮೇಲೆ ಅದು" ಎಂದನು.

" ಅಂಗೇ ಆಗಲೇಳಿ. ಏಳಿ ಮತ್ತೆ ?"

ನೀರು ಸಿದ್ಧವಾಗಿತ್ತು.

" ಅಲ್ಲ ಕಣ್ರಿ, ಅಮ್ಮಣ್ಣಿಯವಗೇ, ಮೈ ಬೆವರು ಆರಬೇಕೋ ಬೇಡವೋ ? ಬೆವರಿರೋವಾಗ ಗಾಳಿಗೆ ಮೈ ಬಿಟ್ಟರೆ, ಸೀತಾ ಗೀತಾ ಆದರೋ ?"

" ಸೀತಾ ಆದರೆ ರಾಮನ್ನ ಕರೆತರೋದು."

" ಹೌದು ಹೌದು, ಸೀತೇನ ರಾಮನ್ನ ಕೂಡಿಸೋಕೆ ತಾವು ಹೊರಟಿರೋದು."

" ಆಂಯ್ ! ಮೂದೇವಿ ಎಲ್ಲಿಂದೆಲ್ಲಿಗೋ ಹಾರುತದೆ. ಏಳು ಊಟಕ್ಕೆ !"

" ಬರೋ ವರ್ಷ ಮೊಮ್ಮಗನ್ನ ಎತ್ತುಕೊಂಡು, ಎರಡು ಸಲ ಮೂದೇವಿ ಮೂದೇವಿ ಅನ್ನು ಅವನು ನನ್ನ ಮೂದೇವೀ ಅಂತಲೇ ಕರೀಲಿ. ಆಯಿತು. ಯಾವಾಗ ಮೈಸೆರೆದದ್ದು ? ಎಲ್ಲಾ ಚೆನ್ನಾಗದಾ ? ಹೆಂಗೆ ಅಂತೀನಿ."

" ಕಾಗದಾನೇ ಕೊಟ್ಟನಲ್ಲಾ !"

" ಓದೋ ಕಷ್ಟಯಾಕೇ ? ಬಾಯಲ್ಲಿ ಹೇಳೋರಿರುವಾಗ ?"

" ನಾನೂ ಕೇಳ್ದೆ. ಎಲ್ಲಾ ಚೆನ್ನಾಗದೆಯಂತೆ."

" ಪ್ರಯಾಣ ಯಾವಾಗ ?"

" ಸಂಜೆಗೆ."

ಹೀಗೇ ವಿನೋದವಾಗಿ ಮಾತನಾಡಿಕೊಂಡು ಊಟಮಾಡುತ್ತಿರುವಾಗಲೇ ಅಯ್ಯನವರು ಬಂದರು. " ಅಣ್ಣಾವರೆ ! ಅಣ್ಣಾವರೆ ! ಯುದ್ಧ ಷುರುವಾಯ್ತಂತೆ."

ಮಲ್ಲಣ್ಣ ಗಾಬರಿಯಾಗಿ " ಅಂದ್ರೆ ?" ಅಂದ.

" ಅಂದ್ರೆ ಏನು ? ಇಂಗ್ಲಿಷ್‌ನವರಿಗೂ ಜರ್ಮನರಿಗೂ ಯುದ್ಧ ಆಯ್ತದೆ ಇನ್ನು ಅಂತ !"

" ಹಂಗಾದರೆ ಸುದ್ದಿ ನಿಜವಾಯಿತು. ಅದಿರಲಿ ಬಿಡಿ. ನಮಗೇನು ? ನಿಮಗೊಂದು ಪಯಣ ಬಂದದೆ !"

"ಅಂದ್ರೆ ?"
"ಹೇಳ್ತೀನಿ ಕುಂತು ಕೊಳ್ಳಿ."

೨೬

ಈಚೆಗೆ ನಾಯಕನ ಜೊತೆಗೆ ಮಲ್ಲಿಯೂ ಸವಾರಿ ಹೊರಡುವುದು ವಾಡಿಕೆಯಾಗಿತ್ತು. ಅವಳು ಕುದುರೆಯ ಮೇಲೆ ಗಂಡಸಿನಂತೆ ಎರಡು ರಿಕಾಪುಗಳಲ್ಲೂ ಕಾಲು ಹಾಕಿಕೊಂಡು ಕುಳಿತುಕೊಳ್ಳುವಳು. ಅವಳಿಗೆ ಸವಾರಿ ಮೀನಿಗೆ ಈಜು ಬರುವಂತೆ ಸುಖವಾಗಿ ಸುಲಭವಾಗಿ ಬಂದಿತ್ತು. ಅವಳು ಬಂದ ಮೇಲೆ, ನಾಯಕನು ಎರಡು ಮೂರು ದಿನಕ್ಕೊಮ್ಮೆ ಹೊಳೆಗೆ ಹೋಗುವನು. ಅಲ್ಲಿ ಮಲ್ಲಿಗೆ ಈಜು ಕಲಿಸಿಯೂ ಆಯಿತು. ಇಬ್ಬರೂ ಆನಂದವಾಗಿ ಈಜುವರು.

ಮಲ್ಲಿಗೆ ಯೌವನವು ಬರುತ್ತಿದೆ: ಅಂಗಾಂಗಗಳು ಸ್ಫುಟವಾಗುತ್ತಿವೆ. ಅವಳು, ಸಮವಸ್ತ್ರಗಳನ್ನು ಧರಿಸಿ ನೀರಿಗಿಳಿದರೆ ಕಂಚಿನ ಪ್ರತಿಮೆಯೊಂದು ನೀರಿಗಿಳಿದಂತಾಗಿ ನೋಡುವವರ ಕಣ್ಣು ಕೋರೈಸುತ್ತಿದೆ. ಎಳೆಯ ಮೊಗ್ಗು ಹಣ್ಣು ಮೊಗ್ಗಾಗುವಾಗ, ಎಳೆಯ ಕಾಯಿಯು ರಸಪೂರ್ಣವಾಗಿ ಹಣ್ಣಾಗುತ್ತಿರುವಾಗ ಆಗುವ ಬದಲಾವಣೆಗಳೆಲ್ಲ ಆಗುತ್ತಿವೆ. ನಾಯಕನಂತೂ ಸ್ಪೈಲಸ್ಪ್ರಿನನ ಹಾಗೆ ಉಬ್ಬಿ ಬರುತ್ತಿರುವ ಎದೆಗಳನ್ನೂ, ಎರಕ ಹೊಯ್ದಿಟ್ಟಂತೆ ಆಗುತ್ತಿರುವ ನಿತಂಬಗಳನ್ನೂ ತೊಡೆಗಳನ್ನೂ ನೋಡಲಾರ. ಆಗಾಗ ಆವೇಶವನ್ನು ತಡೆಯಲಾರದೆ ಒದ್ದೆಯ ಮೈಯಲ್ಲೇ ಅವಳನ್ನು ತಬ್ಬಿಕೊಳ್ಳುವನು. ಅವಳೂ ತಾನು ಇನ್ನೂ ಹುಡುಗಿಯಾದರೂ ಅವನ ಪ್ರೌಢ ಗಾಢಾಲಿಂಗನವನ್ನು, ಹಳೆಯ ಸವಾರನ ಆಘಾತವನ್ನು ಸಹಿಸುವ ಹೊಸ ಕುದುರೆಯಂತೆ, ಸಹಿಸುವಳು. ಆ ದೃಢಾಲಿಂಗನದಿಂದ ಅವಳ ಮೈಯು ನೋಯುತ್ತಿರಲಿಲ್ಲ. ಸಣ್ಣ ಚೇಷ್ಟೆಗಳನ್ನು ಮಾಡಿ, ಅಲ್ಪ ತೃಪ್ತಿ ಪಟ್ಟುಕೊಂಡು, ಹೆಪ್ಪು

ಒಡೆಯುವುದಕ್ಕೆ ಇಷ್ಟವಿಲ್ಲದೆ ಮಡಕೆಯನ್ನು ಮುಚ್ಚಿ ಇಡುವ ಗೃಹಿಣಿ ಯಂತೆ, ಅವನು ಸುಮ್ಮನಾಗುವನು. ಅವಳೂ ಅದಷ್ಟನ್ನೂ ಒಪ್ಪಿ ಕೊಂಡು, ಇನ್ನಷ್ಟನ್ನೂ ಸಹಿಸಬಲ್ಲವಳಂತೆ ತನ್ನಾಸೆಯನ್ನು ತೋರಿ ಸಿಯೂ ಸುಮ್ಮನಾಗುವಳು. ಕಾಮಚೇಷ್ಟೆಗಳಲ್ಲಿ, ಅಥವಾ ಆ ಶಾಸ್ತ್ರದವರ ಮಾತಿನಲ್ಲಿ ಬಾಹ್ಯರತಿಯಿಂದ ಮನಸ್ಸು ಸುಖಪಡುವುದು ನಿಜ ಎಂದು ಬಲ್ಲ ರಸಿಕರು, ನಾಯಕನ ಈ ಒಂದು ವರ್ಷದ ಸೌಖ್ಯ ವನ್ನು ಅಳತೆ ಮಾಡಿ, 'ಹೌದು, ಅವನು, ಸೂಳೇಮಗ, ಅದೃಷ್ಟ ಶಾಲಿ,' ಎಂದು ಒಪ್ಪಿಕೊಳ್ಳುವರು: ಅದು ತಮಗಿಲ್ಲವೆಂದು ಅಸೂಯೆ ತಾನಾಗಿ ಬಂದು, ಅವರ ಎದೆಯಲ್ಲಿ ಇದ್ದ ಉಸಿರನ್ನು, ಸರಳು ಹಾಕಿ ಹುತ್ತದಲ್ಲಿದ್ದ ಹಾವನ್ನು ಈಚೆಗೆ ಎಳೆಯುವಂತೆ ಎಳೆಯುವುದು.

ನೀವು ಯಾವಾಗಲಾದರೂ ಮಾವಿನ ತೋಟಕ್ಕೆ ಹೋಗಿದ್ದೀ ರೇನು? ಸಂಜೆಯ ಬಿಸಿಲು ಎಲ್ಲೆಲ್ಲೂ ತನ್ನ ಹೊಂಬಣ್ಣವನ್ನು ಬೊಳೆದು ಕಣ್ಣಿಗೆ ಕಂಡುದೆಲ್ಲವೂ ರಮ್ಯವಾಗುವಂತೆ ಮಾಡಿರುವಾಗ, ಅಂಬರದಲ್ಲಿ ತೂಗುವ ಚಿನ್ನದ ಚೊಂಬಿನಂತೆ ಇರುವ ಮಾವಿನಕಾಯನ್ನು ಹಿಡಿದು ಕೊಂಡು, ಅದನ್ನು ಕೊಂಚ ಬಲವಾಗಿ ಎಳೆದರೆ ಕಿತ್ತು ಹೋಗುವುದೆಂದು ಗೊತ್ತಾಗಿರುವುದರಿಂದ, ಅದನ್ನು ಹಗುರವಾಗಿ, ಹಿಡಿದುಕೊಳ್ಳದೆ ಹಿಡಿಯದ ಕೈಯಲ್ಲಿ ಅದನ್ನು ತೂಗುವವರಂತೆ ಇಟ್ಟುಕೊಂಡು ಆಟ ವಾಡಿದ್ದೀರೇನು? ಆ ಬಣ್ಣ ಕಣ್ಣನ್ನು ಸೆಳೆಯುತ್ತದೆ: ಅದರ ಮಾಗಿದ ಹುಳಿಯವಾಸನೆ ಗಮ್ಮೆಂದು ಬಂದು ಮೂಗನ್ನು ಹಿಡಿದು, ಜೊತೆಗೆ ಮನಸ್ಸಿನಲ್ಲಿ ಮನೆಮಾಡಿರುವ ಜನ್ಮಾಂತರಗಳಿಂದ ಬಲಿತು ಬಂದ ಚಾಪಲ್ಯವನ್ನೆಲ್ಲ, ತಿದಿಹಾಕಿ ಬೆಂಕಿಯನ್ನು ರೇಗಿಸುವ ಕಮ್ಮಾರನಂತೆ, ರೇಗಿಸಿ, 'ತಕೊಂಡರೆ ತಪ್ಪಿಲ್ಲ: ಬಿಟ್ಟರೆ ತಪ್ಪು ನನ್ನದಲ್ಲ' ಎನ್ನುವಾಗ, ಇರಲಿ ಇನ್ನೆರಡು ದಿನ ಇರುವೆಡೆ ಇದ್ದು ತಾನಾಗಿ ಮಾಗಲಿ, ಎಂದು ಬಿಟ್ಟು ಬಂದಿದ್ದಿರೇನು? ನಾಯಕನು ಮಲ್ಲಿಯ ವಿಚಾರದಲ್ಲಿ ಹಾಗಿದ್ದ.

ಮಾವಿನ ಹಣ್ಣಿನ ಗಡಂಗಿಗೆ ಹೋಗಿ, ಕಣ್ಣಿಗೆ ತಣಿಯುವಷ್ಟು ಜಾತಿಯ ಹಣ್ಣುಗಳನ್ನು ನೋಡಿ, ಭ್ರಮೆಬಿದ್ದು ಒಂದೋ ಎರಡೋ ತಿಂದು, ಒಂದು ಬುಟ್ಟಿ ಹಣ್ಣು ತರುವ ಮನೋಭಾವ ಬೇರೆ?

"ಹಣ್ಣು ಚೆನ್ನಾಗಿದೆ: ಇನ್ನೊಂದು ಸಲ ಬರುತ್ತೇನೆ" ಎಂದು ನಾನಾ ಕಾರಣಗಳಿಂದ ಮನಸ್ಸಿನ ಚಾಪಲ್ಯವನ್ನು ಚಪ್ಪರಿಸುತ್ತಾ ಹಿಂದಿರುಗುವ ಮನೋಭಾವ ಬೇರೆ. "ಮಾವಿನ ಹಣ್ಣು ಬಹಳ ಬೆಲೆ: ಜನ ಸಾಮಾನ್ಯಕ್ಕೆ ಇದನ್ನು ತಿನ್ನುವ ಯೋಗ್ಯತೆಯಿಲ್ಲವಾದ್ದರಿಂದ ನನಗೂ ಬೇಡ" ಎಂದು ಕೆಲಸಕ್ಕೆ ಬರದ ಶುಷ್ಕವೇದಾಂತವನ್ನು ಹೇಳಿಕೊಂಡು ಹೊರಟು ಬರುವ ಮನೋಭಾವ ಬೇರೆ, "ಹಣ್ಣುಗಳಲ್ಲಿ ಮಾವಿನಹಣ್ಣು ರಾಜ." ಎಂಬ ಭಾವನೆಯೇ ಇಲ್ಲದೆ, ಏನೋ ಅದೂ ಒಂದು ತಿನ್ನುವ ಪದಾರ್ಥ ಎಂದು ತಿನ್ನುವ ಭಾವನೆಯೇ ಬೇರೆ. "ಹಸಿದು ಹಲಸು: ಉಂಡು ಮಾವು" ಎಂಬ ವಿಚಕ್ಷಣರ ಅನುಭವದ ಮೂಟೆಯ ಮನೋಭಾವನೆ ಬೇರೆ.

ನಾಯಕನಿಗೆ ಮೊದಲನೆಯ ಮನೋಭಾವದ ಜೀವನ ತುಂಬು ಜೀವನ ಎಂಬ ಭ್ರಾಂತಿ ಬಹಳ ದಿನ ಹಿಡಿದಿತ್ತು. ಸುಮಾರು ತನ್ನ ಹದಿನಾರನೆಯ ವರ್ಷದಿಂದ ಕಾಲು ಶತಮಾನ, ಇಪ್ಪತ್ತೈದು ವರ್ಷಗಳು ಅದೇ ಭಾವನೆಯಲ್ಲಿದ್ದ. ಆ ಭಾವನೆಯು ಪಕ್ವವಾಗಿ ಪದಾರ್ಥಜ್ಞಾನ ವಿವೇಕಗಳು ಪಕ್ವವಾಗಿ, ವಿಚಕ್ಷಣವಾಗಿ, ಗಾದೆಯ ಮನೋಭಾವನೆಗೆ ಬಂದು, "ಉಂಡು ಮಾವು" ಎಂಬ ಘಟ್ಟಕ್ಕೆ ಬಂದಿತ್ತು.

ಕಾಳಿದಾಸನ ದುಷ್ಯಂತ "ಬಹುವಲ್ಲಭ"ನಾಗಿದ್ದರೂ, "ಪಿಂಡ ಖರ್ಜೂರವನ್ನು ಮೆದ್ದು ಮೆದ್ದು ಕಾಡು ಹುಣಿಸೆಯ ಹಣ್ಣು ಬೇಕೆಂದವನಂತೆ" ಆಗಿ, ಊರಿನ ಚೆಲುವೆಯರನ್ನು, ಅಂತಃಪುರದ ಅಸೂರ್ಯಂಪಶ್ಯೆಯರನ್ನು ಮಧುಲೋಲುಪನಾದ ದುಂಬಿಯು ಪದ್ಮಾದಿ ಪುಷ್ಪಗಳನ್ನು ಸೇವಿಸುವ ಸ್ವೈರಿಯಿಂದ, ಬೇಕೆಂದುದು ಇಲ್ಲವೆಂಬ ಕಾರ್ಪಣ್ಯವಿಲ್ಲದೆ, ಭೋಗಿಸಿ ಭೋಗಿಸಿ, ಭೋಗ ಸ್ವರೂಪವನ್ನು ನಖಶಿಖಾಂತವಾಗಿ ಬಲ್ಲವನು, ಶಕುಂತಳೆಯನ್ನು ಕಂಡು ಒಲಿದು, ತನ್ನ ನರ್ಮಸಚಿವನೊಡನೆ "ಮಿತ್ರ, ಅದು ಅನಾಘ್ರಾತಂಪುಷ್ಪಂ, ಕಿಸಲಯ ಮಲೂನಂ ಕರರುಹೈಃ, ಯಾರೂ ಮೂಸದ ಹುವ್ವು, ಉಗುರು ಸೋಕದ ಚಿಗುರು" ಎಂದು ಏನೇನೋ ವರ್ಣಿಸಿದ ಅಂಥವನೂ ನಾಯಕನ ಸೌಭಾಗ್ಯವನ್ನು ನೋಡಿದ್ದರೆ, ಭಲೆ ಬಡ್ಡೀಮಗನೆ ಎನ್ನು

ತ್ತಿದ್ದನೇನೋ? ಫುಲ್ಲಾರವಿಂದಗಳು ಮಧುಸ್ರಾವಿಗಳಾಗಿ ಉದ್ಯಾನದಲ್ಲಿ ತುಂಬಿತ್ತು. ದುಂಬಿ ಅವುಗಳನ್ನು ನಿರಾಕರಿಸಲಿಲ್ಲ. ಆದರೂ ರಸಿಕ ರಾಜನ ಚಾತುರ್ಯವನ್ನು ಮೆರೆದು, ಪಣ್ಣು ಮೊಗ್ಗೆಯನ್ನು ಹುಡುಕಿ ಕೊಂಡು ಹೋಗಿ ಚುಂಬಿಸಿ, "ನಾಳೆ ಬರ.ತ್ತೇನೆ." ಎಂದು ಸೂರ್ಯಾಂ ಶುಭಿರ್ಭಿನ್ನಮಿವಾರವಿಂದಂ, ಎಂಬಂತಿರುವ, ಏರಿಬರುತ್ತಿರುವ ಚೆಲು ವಿನ ಖನಿಯನ್ನು ಬಿಟ್ಟು ಬಂದಂತೆ ಇದ್ದ ನಾಯಕನ ಸೌಭಾಗ್ಯವನ್ನು ಅವನು ಮೆಚ್ಚದೇ ಇರುತ್ತಿದ್ದನೇ ?

ಕುಮಾರ ಸಂಭವದ ಚೆಲುವುಗಾತಿ ಉಮಾದೇವಿ ಅನಾಸ ವಾಖ್ಯಂ ಕರಣಂ ಮದಸ್ಯ ಆಗುತ್ತಿರುವುದನ್ನು ನೋಡುವವರಿಲ್ಲದೆ, ಇದು ನನ್ನದು: ನನ್ನ ಉಪಭೋಗಕ್ಕೆ ಆದುದು ಎಂಬ ಆಸೆಯಿಂದ ನೋಡುವವರಿಲ್ಲದೆ, ನನ್ನ ಕೊಂಬೆಯಲ್ಲಿ ಬೆಳೆಯುತ್ತಿರವ ಚಿಗುರು ಎಂಬ ಅಭಿಮಾನದಿಂದ ನೋಡಿಕೊಳ್ಳುವ ವತ್ಸಲೆಯರಾದ ಮಾತಾ ಪಿತೃಗಳ ಅಂಕೆಯಲ್ಲಿ ಬೆಳೆದಳು ಮಲ್ಲಿಯು ತದ್ವಿರುದ್ಧವಾಗಿ ರಾಣಿಯ ಪೋಷಣೆಯಲ್ಲಿ ಬೆಳೆದಳು. ರಾಣಿಯು ಪಲನಿಯ ಸುಬ್ರಹ್ಮಣ್ಯನ ಸನ್ನಿ ಧಾನಕ್ಕೆ ಒಪ್ಪಿಸುವ ಕಾವಡಿಯನ್ನು ಗೌರವದಿಂದ ಮೀಸಲಾಗಿಟ್ಟು ಕಾಪಾಡುವ ಭಕ್ತನಂತೆ ಮಲ್ಲಿಯನ್ನು, ಮಲ್ಲಮ್ಮಣ್ಣಿಯನ್ನು ಕಾಪಾಡಿ ದಳು. ಅವಳಿಗೆ ತಾನೇ ಜಡೆ ಹೆಣೆಯುವಳು: ತಾನೇ ನೀರೆರೆಯು ವಳು. ಮಣ್ಣಿನಲ್ಲಿ ಬೊಂಬೆಯನ್ನು ಮಾಡುವ ಶಿಲ್ಪಿಯು ಮಣ್ಣು ಒಣಗದಂತೆ ತಂಪಿನಲ್ಲಿಟ್ಟಿದ್ದು, ಹೆಚ್ಚು ಕಡಿಮೆಗಳನ್ನು ತಿದ್ದಿ, ತನ್ನ ಮನ ಸ್ಸಿನಲ್ಲಿರುವ ಸೌಂದರ್ಯವನ್ನು ಅಷ್ಟು ಅಷ್ಟಾಗಿ ಹೊಯ್ದು, ಮೆತ್ತಿ, ಕೆತ್ತಿ, ದಿವ್ಯ ಸುಂದರವಾದ ವಿಗ್ರಹವನ್ನು ಮಾಡುವ, ಶಿಲ್ಪಿಯು ಆಗಾಗ, ಅಭಿಮಾನದಿಂದ, ತನ್ನ ಕೃತಿರತ್ನವನ್ನು ನೋಡುವಂತೆ, ಮಲ್ಲಿಗೆ ಅಲಂಕಾರಮಾಡಿ ನೋಡುವಳು. ನಿರಾಲಂಕಾರದಲ್ಲಿ ನೋಡು ವಳು. ವಸ್ತ್ರವನ್ನುಡಿಸಿ ನೋಡುವಳು. ವಸ್ತ್ರವಿಲ್ಲದಾಗ ನೋಡು ವಳು. ತಾನೇ ನಾಯಕನಾಗಿ ಅನುಭವಿಸುವುದಾದರೆ ಎಷ್ಟು ಸಕಾಮ ವಾಗಿ ನೋಡಬೇಕೋ ಹಾಗೆ ನೋಡುವಳು. ಮೀಸಲಿಟ್ಟ ಪದಾರ್ಥ ವನ್ನು ಮೂಸಿದರೆ ಕೆಟ್ಟೀತು ಎಂಬ ಕಟ್ಟುನಿಟ್ಟಿನ ವೈರಾಗ್ಯದ ಭಕ್ತನ

ಮನೋಭಾವದಿಂದ ಅವಳನ್ನು ನೋಡಿ ನಲಿಯುವಳು. ರಾಣಿಯು ಪೋಷಿಸಿ, ವರ್ಧಿಸುತ್ತಿದ್ದುದು ಬರಿಯ ಮಾತಿನ ಪಂಜರದ ಲೀಲಾ ಶುಕವನ್ನಲ್ಲ: ಕಾಮದೇವನ ಶೃಂಗಾರ ರಥವನ್ನು ಎಳೆಯುವುದಕ್ಕೆ ಬೇಕಾದ ಲೀಲಾವಾಹನವಾದ ಶುಕ ತುರಂಗಮವನ್ನು.

ಮಲ್ಲಿಯು ಹೆಜ್ಜೆ ಹೆಜ್ಜೆಗಲ್ಲ: ಗಂಟೆ ಗಂಟೆಗಲ್ಲ: ಕ್ಷಣ ಕ್ಷಣಕ್ಕೂ ಬೆಳೆಯುವ ಲತೆಯಂತೆ ಬೆಳೆದಳು. ಅವಳ ಮನಸ್ಸು ತಾನು ನಾಯಕನ ಸ್ವತ್ತು ಎಂಬುದನ್ನು ಕ್ಷಣ ಕ್ಷಣವೂ ಅನುಭವಿಸುತ್ತಿತ್ತು. ವೇದಾಂತ ದಲ್ಲಿ ಖಂಜಕೀಟ ನ್ಯಾಯವನ್ನು ಹೇಳುತ್ತಾರೆ. ಅಲ್ಲಿ ಕೀಟವು ನೋವಿ ನಿಂದ ಖಂಜವನ್ನು ಧ್ಯಾನಿಸಿ ಧ್ಯಾನಿಸಿ ಅದರಂತೆ ಆಗುವುದಂತೆ. ಇಲ್ಲಿ ಮಲ್ಲಿಯು ತದ್ವಿರುದ್ಧಳಾಗಿ ಬೆಳೆದಳು. ಆನಂದಕ್ಕೆ, ಸುಖಕ್ಕೆ, ಸಂತೋಷಕ್ಕೆ ಮನಸ್ಸನ್ನು ಬೆಳೆಸಿ ಪಕ್ವ ಮಾಡುವ ಶಕ್ತಿಯಿರುವುದು ನಿಜವಾದರೆ, ನಾವು ಆ ಮಾರ್ಗದವರು, ಅದು ಮಲ್ಲಿಯ ಮನಸ್ಸನ್ನು ಬೆಳೆಸುವುದರ ಜೊತೆಯಲ್ಲಿಯೇ ಅದರ ಗಮ್ಯಸ್ಥಾನವನ್ನೂ ಅದಕ್ಕೆ ತೋರಿಸಿತ್ತು. ನೆರಳಲ್ಲಿ ಬೆಳೆಯುವ ಲತೆಯು ಎಷ್ಟು ಹೊರವಾಗಿ ಬೆಳೆದರೂ ಕೊನೆಯಲ್ಲಿ ಮೊಗ್ಗೆಯನ್ನು ಇಟ್ಟುಕೊಂಡು ಹೊರಡುವಂತೆ, ಮಲ್ಲಿಯ ಮನಸ್ಸು ತಾನು ನಾಯಕನ ಸ್ವತ್ತು ಎಂದು ಅಂಗೀಕರಿಸಿ ಬೆಳೆಯಿತು. ಅಜ್ಞಾತವಾಗಿ ಅವಳ ಮನಸ್ಸು ಮರವನ್ನು ಆಶ್ರಯಿಸಿದ ಲತೆಯಂತೆ, ನಾಯಕನನ್ನು ಪೂರ್ಣವಾಗಿ ಅವಲಂಬಿಸಿತ್ತು.

ರಾಣಿಯು ಮನಃಪೂರ್ವಕವಾಗಿ ಆ ಭಾವವನ್ನು ಬೆಳೆಯಿಸಿ ದ್ದಳು. ನಾಯಕನಿಗೆ ಮಧ್ಯಾಹ್ನದ ತಿಂಡಿಗೆ ಸಾಮಾನು ಮಾಡುವಾಗ ಮಲ್ಲಿಯನ್ನು ಜೊತೆಯಲ್ಲಿಟ್ಟುಕೊಂಡು, ಓರಗೆಯವಳನ್ನು ಹಿರಿಯ ಳನ್ನು ಕೇಳುವಂತೆ, ಇದಕ್ಕಿಷ್ಟು ಉಪ್ಪು ಸಾಕಾ? ಅದಕ್ಕಷ್ಟು ಸಕ್ಕರೆ ಸಾಕಾ? ಎಂದು ಕೇಳುವಳು. ರಾಮನ ಶಬರಿಯಂತೆ, "ಇದಷ್ಟು ತಿಂದು ನೋಡಿ. ರುಚಿಯಾಗಿದೆಯಾ?" ಎಂದು ರುಚಿಯನ್ನು ಕಲಿಸು ವಳು. ಆದರೆ ಅಲ್ಲಿ ರಾಮಾಯಣದಲ್ಲಿ ಶಬರಿ ತಾನು ಶುಚಿಯೆಂದು ಕೊಂಡುದನ್ನು ರಾಮನಿಗೆ ಕೊಟ್ಟಳು. ರಾಣಿಯು ಈ ಶಬರಿಗೆ ನಿನ್ನ ರಾಮನಿಗೆ ಬೇಕಾದುದು ಈ ರುಚಿ, ಅದು ಇದರಲ್ಲಿ ಇದೆಯೇ ಇಲ್ಲವೇ

ನೋಡು ಎಂದು ನಾಯಕನ ರುಚಿಯನ್ನು ಮಲ್ಲಿಯ ನಾಲಿಗೆಗೆ ಕಲಿಸಿ ಕೊಟ್ಟಳು.

"ಹಾಸುಗೆಯನ್ನು ಹಾಸಿ ಬರುವಿರಾ ?" ಎಂದು ಮಲ್ಲಿಯನ್ನು ಕಳುಹಿಸಿ, ಹಿಂದೆಯೇ ತಾನೂ ಬಂದು, ಹಾಸುಗೆಯನ್ನು ಸಿದ್ಧಮಾಡುವ ಕೌಶಲ್ಯವನ್ನು ಕಲಿಸುವಳು. ಅಲ್ಲಿರುವ ಪಟಗಳಿಗೆ ಹೂವು ಮುಡಿಸುವಾಗ ದಪ್ಪ ಹೂವು ಎಲ್ಲಿರಬೇಕು ? ಸಣ್ಣ ಹೂವು ಎಲ್ಲಿರಬೇಕು ? ಎಂಬುದನ್ನು ತೋರಿಸುವಳು. ಪುಷ್ಪಗಳನ್ನು ಗಂಧಾನುಗುಣವಾಗಿ, ಏಕವಾಗಿ ಅನೇಕವಾಗಿ, ದೂರದಲ್ಲಿ ಸಮೀಪದಲ್ಲಿ ಜೋಡಿಸುವ ವಿಧಾನವನ್ನು ವಿವರಿಸುವಳು. ಹಾಸುಗೆಯ ಮೇಲೆ ಹರಿದು ಹಾಕುವ ಹೂವು ಯಾವುದು ? ಚೆಲ್ಲುವ ಹೂವು ಯಾವುದು ? ದಿಂಬಿನ ಮೇಲೆ ಇಡುವ ಹೂವು ಯಾವುದು ? ದಿಂಬಿನ ಕೆಳಗೆ ಇಡುವ ಹೂವು ಯಾವುದು ಎಂದು ಇಟ್ಟಿಟ್ಟು ಪ್ರದರ್ಶಿಸುವಳು. ಹಾಗೆಯೇ ದೀಪಗಳನ್ನು ಇಡುವ, ದುಪ್ಪಟಿ ಕಂಬಳಿಗಳನ್ನು ಜೋಡಿಸುವ, ದಿಂಬುಗಳನ್ನು ಸುಖವಾಗುವಂತೆ ವಿನಿಯೋಗಿಸುವ, ಕುಶಲ ವಿದ್ಯೆಯನ್ನು ಕಲಿಸಿದಳು.

ವೀಣಾವಾದನವನ್ನು ಕಲಿಸುವಾಗಲೂ ರಾಣಿಯು ಕಲಿಸಿದುದು ಸಂಗೀತ ಎನ್ನುವುದಕ್ಕಿಂತ ನಾಯಕನ ಮನಸ್ಸನ್ನು ಗ್ರಹಿಸುವುದಕ್ಕೆ ಬೇಕಾದ ಸಾಧನವನ್ನು ಎನ್ನುವುದೇ ಸರಿ. "ಮೋಹನದಲ್ಲಿ ನೋಡಿ, ನಮ್ಮ ಬುದ್ಧಿಯವರಿಗೆ ಈ ಮೂರ್ಛನೆ ಬಹಳ ಹಿತ" ಎಂದು ಹೇಳಿ, ಬೇರೆ ಮೂರ್ಛೆಗಳಿಗೂ ಅದಕ್ಕೂ ಇರುವ ವ್ಯತ್ಯಾಸವನ್ನು ತೋರಿಸಿ, ಅದನ್ನು ಹಿಡಿಯುವ ಸೊಗಸನ್ನು ವಿಶದಪಡಿಸಿ ಕಲಿಸುವಳು. ತಾಳಗಳನ್ನು ಉಗ್ಗಡಿಸುವಾಗ, ನೃತ್ಯವನ್ನು ಬೋಧಿಸುವಾಗ ಸವ್ಯಾಪಸವ್ಯ ಮಾರ್ಗಗಳಿಂದಲೂ ಏಕಗತಿಯನ್ನೇ ಆರಾಧಿಸುವಾಗ, ಬಾಯಲ್ಲಿ ಹೇಳದೆ, ವಾಚ ವಿಸ್ತರಿಸದೆ, ಕ್ರಿಯಾದಿಗಳಿಂದಲೇ, "ಸ್ವಂತದಲ್ಲಿ ನಿದ್ದೆಗೈವ ಕಂತುವನುದ್ಬೋಧಿಸುವಳು."

ವಸ್ತ್ರಗಳನ್ನು ಉಡುವುದರಲ್ಲಿಯೂ ರಾಣಿಯು ಮಲ್ಲಿಯನ್ನು ಕಲಾವತಿಯನ್ನು ಮಾಡಿದಳು. ಒಮ್ಮೊಮ್ಮೆ ಸೆರಗು ಹೊದೆದುಕೊಂಡುದು ಸರಿಯಾಗಿಲ್ಲವೆಂದು ಅವಳಿಗೆ ತೋರಿದಾಗ, ಎದ್ದು ಬಂದು

ಅವಳನ್ನು ಕೈ ಹಿಡಿದುಕೊಂಡು ಕರೆದುಕೊಂಡು ಹೋಗಿ, ನಿಲುಗನ್ನಡಿಯ ಮುಂದೆ ನಿಲ್ಲಿಸಿ "ಕೊರಚರ ಹಾಗೆ ಸೀರೆ ಉಡೋದಾ ? ನೋಡಿ. ನಾಳೆ, ಇಲ್ಲಿ ಇಷ್ಟು ಇಷ್ಟುಗಾತ್ರ ಬಂದಾಗ ಸೆರಗು ಬೀಸಾಗಿರಬೇಕು ಇಲ್ಲದಿದ್ದರೆ ಮುಚ್ಕೊಳ್ಳೋಲ್ಲ ಅಂತ ಇವೊತ್ತೇ ಹೇಗುಟ್ಟರೆ ಆದೀತಾ ?" ಎನ್ನುವಳು.

ಎಷ್ಟೆಂದು ವಿವರಿಸೋಣ ? ಬ್ರಹ್ಮನು ಕಾಮದೇವನನ್ನು ಸೃಷ್ಟಿಸಿ, ಅವನಿಗೆಂದು ಸೃಷ್ಟಿಸಿದ ಮೊದಲನೆಯ ಮೂರ್ತಿಯು ಕಿಂಚಿನ್ನ್ಯೂನವಾಗಿರಲು, ಇನ್ನೊಂದನ್ನು ಸೃಷ್ಟಿಸಿ, "ಇದನ್ನು ನಿನ್ನ ನಾಯಕನಿಗೆ ತಕ್ಕಂತೆ ತಿದ್ದಿಕೊ" ಎಂದು ಅದನ್ನು ಮೊಲನೆಯುವಳಿಗೆ ಒಪ್ಪಿಸಿದ್ದಂತೆ ರಾಣಿಯು ಮಲ್ಲಿಯನ್ನು ತನ್ನ ನಾಯಕನಿಗಾಗಿ ತಿದ್ದಿದ್ದಳು. ತಿದ್ದಿಸಿಕೊಂಡವಳಿಗೆ ತಾನು ತಿದ್ದಿಸಿಕೊಂಡುದೂ ತಿಳಿಯದೆ ವೀಣೆ ಕಲಿತಂತೆ ಹಿತವಾಗಿತ್ತು. ಕೈಯ ಬೆರಳು ಕತ್ತರಿಸಿ ಹೋಗಿದ್ದರೂ ಆತುಪ್ರ ಸವರಿಕೊಂಡು ಬೆರಳು ಜಡ್ಡುಕಟ್ಟಲಿ ಎಂದು ಬಾರಿಸುವಾಗ ಇರುವ ಸುಖಪೂರ್ಣವಾದರೂ ತನ್ನ ಜಾತಿಯನ್ನು ಬಿಡದ ಬೆರಳುಗಳ ನೋವಿನಂತೆ, ಅವಳಿಗೆ ಕಲಿಕೆಯು ನಡೆಯಿತು. ಗಿಡವು ಬೆಳೆಯುತ್ತಾ ಹಳೆಯ ಎಲೆಗಳನ್ನು ಉದುರಿಸಿ ಹೊಸ ಎಲೆಗಳನ್ನು ಬಿಟ್ಟು ಶೋಭಾಸ್ಪದವಾಗುವಂತೆ ದರಿದ್ರರ ಮನೆಯಲ್ಲಿ ಬೆಳೆದು ಕಲಿತಿದ್ದ ದರಿದ್ರ ಚೇಷ್ಟೆಗಳನ್ನು ಬಿಟ್ಟು ಶ್ರೀಮಂತಿಕೆಯ ಎಂಜಲು ಸೌಭಾಗ್ಯ ಚಿನ್ಹೆಗಳನ್ನು ಕಲಿತಳು. ಅಷ್ಟೇನು ? ಯಾವುದೋ ಓಟೆಯಲ್ಲಿ ಹುಟ್ಟಿದ ಮಾವಿನಗಿಡಕ್ಕೆ ಸಿಹಿಮಾವಿನಕೊಂಬೆ ಕಟ್ಟಿ ಹಸಿಮಾಡಿದರೆ ಬೆಳೆಯುವ ಗಿಡವು ಸಿಹಿಮಾವೇ ಆಗುವಂತೆ, ಎಲ್ಲಿಯೋ ಹುಟ್ಟಿ ಎಲ್ಲಿಯೋ ಬೆಳೆದ ಮಲ್ಲಿಯು ರಾಣಿಯ ಕೈಗೆ ಸಿಕ್ಕಿ, ರಾಣಿಯನ್ನು ಮೀರಿಸಬಲ್ಲ ರಾಣಿಯಾದಳು.

## ೨೮

ಮಲ್ಲಿಯು ಮೈನೆರೆದ ವಿಷಯ ಊರಲ್ಲೆಲ್ಲಾ ತಿಳಿಯಿತು. ಅವಳ ಪ್ರಸ್ತದ ದಿನ ಬಡಬಗ್ಗರಿಗೆ ಊಟ ಬೇಕಾದ ಹಾಗೆ ಬೀಳುವುದೆಂದು ಯಾವ ಜ್ಯೋತಿಷ್ಕರೂ, ಜೋಯಿಸ ಹೇಳದಿದ್ದರೂ ಸುತ್ತಮುತ್ತಿನ ಬಡವರೆಲ್ಲ ಸೇರಿದರು. ಅವರ ಆಸೆ ವಿಫಲವಾಗಲಿಲ್ಲ. ಒಬ್ಬಟ್ಟು ಪಾಯಸದೂಟ ಬಡವರ ಹೊಟ್ಟೆಯೂ ತುಂಬುವಷ್ಟು ಮಟ್ಟಿಗೆ ಆಯಿತು. ಮಲ್ಲಣ್ಣನು ಒಂದು ಕಡೆ ಶಂಭುರಾಮಯ್ಯನು ಇನ್ನೊಂದು ಕಡೆ ನಿಂತು ಎರಡು ಕಡೆಯು ಊಟವೂ ಎಲ್ಲರಿಗೂ ತೃಪ್ತಿಯಾಗುವಂತೆ, ಪೋಲಾಗದಂತೆ ನೋಡಿಕೊಂಡರು. ಎಂದಿನಂತೆ, ಬಡವರು ತಿಂದು ತೃಪ್ತರಾಗಿ ನಾಳೆಗಷ್ಟು ಎಂದು ಕೊಂಡು ಹೋದರು.

ಊಟದಲ್ಲಿ ಏನೂ ವಿಶೇಷ ಇಲ್ಲದಿದ್ದರೂ ಊಟವಾದಮೇಲೆ ಒಂದು ವಿಶೇಷವಾಯಿತು. ಸುಮಾರು ಅರವತ್ತುವರ್ಷದ ಮುದುಕನೊಬ್ಬನು ಬಂದು ಮಲ್ಲಣ್ಣನನ್ನು ಕಾಣಿಸಿಕೊಂಡನು ಮಲ್ಲಣ್ಣನು ಇವೊತ್ತು ಕಲಾಬತ್ತಿನ ಪಂಚೆಯನ್ನು ಉಟ್ಟು ವಲ್ಲಿಯನ್ನು ಹೊದ್ದಿದ್ದಾನೆ. ಎಣ್ಣೆಮಜ್ಜನಮಾಡಿ ತಲೆಯತುಂಬಾ ಇರುವ ಜುಟ್ಟನ್ನು ಎಣ್ಣೆಗಂಟು ಹಾಕಿದ್ದಾನೆ. ಪ್ರಸಾದದ ಹೂವೊಂದು ಮುಡಿದಿದ್ದಾನೆ ಕೈಗೊಂದು ನಳಿಗೆ ಕಪ್ಪ ಹಾಕಿಕೊಂಡಿದ್ದಾನೆ. ಬೆರಳಲ್ಲಿ ಒಂದು ಹರಳಿನ ಉಂಗುರ ಥಳಪಳ ಎನ್ನುತ್ತಿದೆ.

ಮುದುಕನು ಕೈಮುಗಿದು ಕಟವಾಯಿಯಲ್ಲಿ ಸೋರುತ್ತಿರುವ ತಾಂಬೂಲ ರಸವನ್ನು ಒರಸಿಕೊಳ್ಳುತ್ತಾ "ಅಡ್ಡ ಬಿದ್ದೆ, ಬುದ್ಧಿ" ಎಂದು ಕೈಯೆತ್ತಿ ಮುಗಿದನು. ಮಲ್ಲಣ್ಣನೂ ವಿನಯದಿಂದ, ತನಗೆ ಅವನು ಯಾರು ಎನ್ನುವುದು ಗೊತ್ತಿಲ್ಲದಿದ್ದರೂ ಏನೋ ಬಹಳದಿನದಿಂದ ದಿನವೂ ನೋಡಿರುವವನಿಗಿಂತ ಹೆಚ್ಚಾಗಿ ವಿಚಾರಿಸಿದನು: "ಏನಯ್ಯಾ ಎಲ್ಲಿದ್ದೀಯೆ? ಚೆನ್ನಾಗಿದ್ದೀಯಾ?"

ಆ ಮುದುಕನಿಗೆ ಅಷ್ಟು ಅವಕಾಶ ಸಿಕ್ಕಿದ್ದೇ ಸಾಕಾಯಿತು:

" ನಮ್ಮ ನೆನೆಪದೆಯಾ ಬುದ್ಧಿ ? " ಎಂದನು.

ಮಲ್ಲಣ್ಣನಿಗೆ ಪೇಚಾಟಕ್ಕಿಟ್ಟುಕೊಂಡಿತು : " ಬೋದಿನ ಆಯಿತಲ್ಲವಾ ? ನಿನ್ನ ಹೆಸರು ಮರೆತು ಹೋಗಿದೆಯಲ್ಲಾ " ಎಂದನು.

"ನೆಪ್ಪು ತಪ್ಪಿಹೋದರೆ ಏನು ಮಹಾ ! ನೋಡಿ ಹದಿನಾಕು ವರ್ಸ ಆಯಿತು ತಮ್ಮ ನೆಪ್ಪು ನನಗೆ ಚೆನ್ನಾಗಡೆ ಬುದ್ಧಿ."

ಮಲ್ಲಣ್ಣನು ತಲೆಕೆರೆದುಕೊಳ್ಳುತ್ತಾ ನಿಜವಾಗಿ ಪ್ರಯತ್ನಪಟ್ಟನು. ನೆನೆಪಾಗಲಿಲ್ಲ : " ನೀನೇ ಹೇಳಿಬಿಡು" ಎಂದನು.

ಮುದುಕನು " ಇತ್ತಕಡೆ ಕೊಂಚ ಬನ್ನಿ " ಎಂದು ಕರೆದನು. " ನನ್ನ ಹೆಂಡತೀಗೆ ಸೀರೆ ಕೊಟ್ಟದ್ದು ಮರೆತುಬುಟ್ಟರಾ ? " ಎಂದು ಕೇಳಿದನು.

ಅಲ್ಲಿಗೂ ಮಲ್ಲಣ್ಣನಿಗೆ ನೆನೆಪಾಗಲಿಲ್ಲ.

ಮುದುಕನು ಮತ್ತೆ ಹೇಳಿದನು: "ನೆನೆಪು ಮಾಡಿಕೊಳ್ಳಿ, ಅಣ್ಣಾವರೆ, ನೀವು ನಮಗೆ ಪಾಯಸದ ಊಟ ಮಾಡಿ ಹಾಕಿಸಿದಿರಿ. ನಮ್ಮ ಮಗೂ ಕೊನೇಲಿ ಇನ್ನಷ್ಟು ಪಾಯಸಬೇಕೂ ಅಂತು. ನೀವು ಎರಡಚ್ಚು ಬೆಲ್ಲ, ಒಂದು ಸೇರು ಅಕ್ಕಿ, ಒಂದು ರೂಪಾಯಿ ಕೊಟ್ಟು, ನಾಳೆ ಚೆನ್ನಾಗಿ ಪಾಯಸ ಮಾಡಿ ಹಾಕೋ ಹೊಟ್ಟೆತುಂಬಾ ಈ ಮಕ್ಕಳಿಗೆ ಅಂದಿರಿ. ನೆನೆಪಾಯಿತಾ ? "

ಮಲ್ಲಣ್ಣನಿಗೆ ನೆನೆಪಾಯಿತು. ಅಂದು ಹೆಂಡತಿಯ ಜೊತೆಯಲ್ಲಿ ಹೋಗಿ ಮಗುವನ್ನು ತಂದಿದ್ದ ದಿನದ ಮಾತು. ಇವನೇನು ಮಗು ನಂದು ಅನ್ನೋಕೆ ಬಂದಿದ್ದಾನೋ ಅನ್ನಿಸಿತು. ದಿಗಿಲಾಯಿತು. ಆದರೂ ಒಂದು ಚಿಟಿಕೆ ನಶ್ಯಹಾಕ್ಕೊಂಡು " ನೀನು ದೊಂಬರ—"

" ಚಿನ್ನ "

" ನೆನೆಪಾಯಿತು. ಚೆನ್ನಾಗಿದ್ದೀಯಾ ? ನಿನ್ನ ಹೆಂಡತಿಮಕ್ಕಳೆಲ್ಲ ಎಲ್ಲಿ ? ಈಗ ಏನು ಮಾಡುತ್ತಿದ್ದೀ ? ಎಲ್ಲಿದ್ದೀ ? "

" ನಾನು ಮುದುಕ ಆಗೋದೆ ಅಪ್ಪಾವ್ರೆ ! ಮಕ್ಕಳು ಒಬ್ಬ ಮೊನ್ನೆ ತಾನೇ ಮಿಲಿಟರಿಗೆ ಹೋದಾ ! ಇನ್ನೊಬ್ಬ ದೇಶಾಂತರ ಹೋದ. ಉಳಿದೋವು ಎರಡು ಮಕ್ಕಳು ನಾನು ಅವಳು. ಭಂಡಾಟ

ಮಾಡಿ ಹೊಟ್ಟೆ ತುಂಬಿಕೊಂತಾ ಇದೀವಿ. ಇವೊತ್ತು ಇಲ್ಲಿ ಊಟ ಅಂದರು. ನಾನು ಬಂದೆ."

"ಎಲ್ಲರೂ ಬಂದಿದ್ದೀರಿ?"

"ಒಳ್ಳೆ ಊಟಮಾಡಿ ಬಾಳದಿನ ಆಗೋಗಿತ್ತು. ಎಲ್ಲರೂ ಬಂದಿದ್ದೀವಿ."

"ಸಂತೋಷ. ಇವೊತ್ತು ರಾತ್ರಿ, ನಾಳೆ, ನಾಡಿದ್ದು ಇದ್ದು ಊಟಮಾಡಿಕೊಂಡು ಹೋಗಿ."

"ಬುದ್ಧಿ, ಕೋಪಮಾಡಕೂಡದು. ತಮಗೆ ದೇವರು ಒಳ್ಳೇದ ಮಾಡಿದ. ನಮಗೂ ಏನಾದರೂ ಮಾಡಿಸಿಕೊಡಬೇಕು."

"ಏನು ಹೇಳು! ಸರಿಯಾಗಿ ಹೇಳು!"

"ಬುದ್ಧಿ, ನಿಮ್ಮ ಪಾದದಾಣೆ ನಿಜಾ ಹೇಳ್ತೀನಿ. ಆ ಮೊಗೀನ ಅಪ್ಪಾ ಅಮ್ಮಾ ಇಲ್ಲಿ ಬಂದಿದ್ದಾರೆ."

ಮಲ್ಲಣ್ಣನಿಗೆ ಏನೋ ಗಾಬರಿ ಆಯಿತು. "ಏನೆಂದೆ?"

"ಹೌದು ಬುದ್ಧಿ. ಸುಳ್ಳಲ್ಲ. ಇಲ್ಲೆ ಅದಾರೆ. ಅಕೋ, ಅಲ್ಲಿ ಬಂದರು ನೋಡಿ. ಆ ಈಬೂತಿ ಮೇಲೆ ನೀರು ಗಂದ ಹಚ್ಚಿಕೊಂಡು?"

"ಏನು ಆ ಕೆಂಪು ಮೊಗಟ ಉಟ್ಟಿರೋರೆ?

"ಹೌದು ಬುದ್ಧಿ"

ಮಲ್ಲಣ್ಣನು ಗಂಟಲಿಗೆ ಅಡರಿದ್ದ ಶ್ಲೇಷ್ಮವನ್ನು ನುಂಗುತ್ತಾ ಅವಸರದಲ್ಲಿ ಕೇಳಿದನು: "ಅವರೇನು?"

"ಅವರೇ ಆ ಮೊಗೀನ ಅಪ್ಪ!"

"ನಿಜವಾಗಿ?"

"ಸುಳ್ಳು ಯಾಕೆ ಹೇಳಲಿ? ಬುದ್ಧಿ? ತಾವು ಆಗಬೋದು ಅಂದರೆ, ಅವರನ್ನೂ ಕರೆದು ಮಾತನಾಡುತ್ತೀನಿ ನೋಡಿ ಬುದ್ಧಿ."

"ನಮಗೆ ಕೊಟ್ಟದ್ದು ಅಂತ ಅವರಿಗೆ ಹೇಳಿದೀಯಾ?"

"ತಾವು ಹೂಂ ಅಂದರೆ ಹೇಳ್ತೀನಿ."

ಮಲ್ಲಣ್ಣನು ಯೋಚನೆಮಾಡಿದನು: "ಅವರಿಗೆ ಮಲ್ಲಿಯ ಮೇಲೆ ಅಭಿಮಾನ ಇದೆ. ಇದು ತಮ್ಮ ಮಗು ಎಂದು ತಿಳಿದರೆ,

ಅವರಭಿಮಾನ ಇನ್ನೂ ಬಲಿಯುವುದು. ತಪ್ಪೇನೂ ಇಲ್ಲ. ಆದರೆ ನಮಗೆ ತಿಳಿದಿದೆ ಎಂದರೆ ನೊಂದುಕೊಂಡಾರು, ಎಂದುಕೊಂಡು, ಅವರ ಕೈಲಿ ಮಾತಾಡು : ಹೇಳು. "ಆದರೆ ನಮಗೆ ಕೊಟ್ಟೆ ಅನ್ನ ಬೇಡ "ಎಂದನು.

"ಆ ಮೊಗಾ ಏನಾಗದೆ? ಬುದ್ಧಿ"

"ಆ ಮೊಗ ಈಗ ನಾಯಕರ ಹೆಂಡ್ತಿ : ಇವೊತ್ತು ಪ್ರಸ್ತ. ಅದಕ್ಕೇ ಈ ಊರೂಟ."

"ಹಂಗಾ !"

ಮಲ್ಲಣ್ಣನಿಗೆ ದೊಂಬನ "ಹಂಗಾ !" ಅರ್ಥವಾಯಿತು. "ಸಂಜೆ ಐದು ಗಂಟೆಗೆ ಬಂದು ನೋಡು."

"ಬುದ್ಧಿ, ನನ್ನ ಮಾತು ಕೇಳಬೇಕು. ತಾವು ಹೂಂ ಅಂದರೆ ತಮಗೆ ಕೊಟ್ಟೆ ಅಂತ ನುಡಿದೇ ಬುಡ್ತೇನೆ."

ಮಲ್ಲಣ್ಣನು ಯೋಚಿಸಿ ನೋಡಿದನು : "ಅವರು ಕೇಳಿದರೆ ಹೇಳು. ಇಲ್ಲದಿದ್ರೆ ಯಾಕೆ ? "

"ಬುದ್ಧಿ, ಅವರೂ ತಮ್ಮಂಗೆ ಇಲ್ಲಿ ಯಜಮಾನರಾಗಿರೋ ಹಂಗದೆ. ತಾವೂ ಅವರೂ ಸೇರಿ ಖಾವಂದರವರಿಗೆ ಹೇಳಿದರೆ, ಬಡವ ನನ್ನ ಹೊಟ್ಟೆ ತುಂಬುತ್ತದೆ. ಸಾಯೋ ಕಾಲದಲ್ಲಿ ನಾನೂ ಸುಖವಾಗಿ ಸಾಯ್ತೀನಿ."

"ಕೊಟ್ಟದ್ದೆಲ್ಲ ಕುಡಿದು ಬುಂಡೇ ಎಸೀತೀಯೇನೊ ?

"ಬುದ್ಧಿ, ತಾವು ಕಾಣದ್ದೇನು ? ಮಳೆ ಬಂದಾಗಲೂ ನೆಲ ನೀರು ಕುಡಿಬೇಡವಾ ? "

"ಆಯಿತು. ನಿನಗೇನಾಗಬೇಕು ಹೇಳು ? "

"ನೋಡಿ ಬುದ್ಧಿ, ನಿಮ್ಮ ಪಾದದಾಣೆ ಸತ್ಯವಾಗಿ ಏಳ್ತೀನಿ. ನನ್ನ ಸಂಸಾರಕ್ಕೆ ಹತ್ತುರೂಪಾಯಿ. ನನಗೆ ನನ್ನ ಸೊಂತ ಖರ್ಚಿಗೆ ದಿನಕ್ಕೆ ಎರಡಾಣೆ. ಅಷ್ಟಾದರೆ ಸಾಕು, ಮಹಾಪಾದ."

"ಅಲ್ಲವೋ, ಮನೆ ಬೇಡವಾ, ಮಕ್ಕಳು ಮರಿ ಹೆಂಡತಿ, ಎಲ್ಲರಿಗೂ ಬಟ್ಟೆ ಬೇಡವಾ ? "

" ಬುದ್ದಿ ಅದೆಲ್ಲ ಕೇಳಿದರೆ ಕೊಟ್ಟಾರಾ ಬುದ್ದಿ "

" ಹೊಲೇರ ಪಾಳ್ಯದಲ್ಲಿ ಇರುತೀಯೇನು ? "

" ನಾವು ದೊಂಬರಲ್ಲವಾ ಬುದ್ಧಿ, ಶಿವನಿಗೆ ಹೆಣ್ಣು ಕೊಟ್ಟೋರು ನಾವು ಉತ್ತಮರಲ್ಲವಾ ? "

ಮಲ್ಲಣ್ಣನಿಗೆ ತಾನಿದ್ದ ಮನೆ ಭಾವಣಿ ಹೋಗಿದ್ದರೂ ಗೋಡೆಗಳು ನಿಂತಿರುವುದು ನೆನಪಾಯಿತು. " ಜೋಪಡಿ ಆದರೂ ಪರವಾಯಿಲ್ಲವೋ ? " ಕೇಳಿದನು.

" ನಮಗೆ ಅದು ಅರಮನೆ, ನಿಮ್ಮ ಪಾದ ! "

" ಆಯಿತು. ನಾವಿದ್ದವಲ್ಲ, ಆ ಮನೆ ಕೊಡಿಸ್ತೀನಿ, ದೀವಳಿಗೆಗೆ ಉಗಾದಿಗೆ ಬಟ್ಟೆ ಬರೆ ಕೊಡಿಸ್ತೀನಿ. ಒಂದು ಕಡೆ ನೆಲೆಯಾಗಿ ನಿಂತೀಯಾ ? "

" ಬುದ್ದಿ. ನಾವು ತಿರುಗೋ ಮುಕ್ಕಗಳು. ಆಗಾಗ ಒಂದು ಪೇರಿ ಹೊಡೆದು ಬಂದು ಬುಡ್ತೀನಿ."

" ಸರಿ ನಿನ್ನಿಷ್ಟ. ನಾನು ಖಾವಂದರ ಹತ್ತಿರ ಮಾತಾಡುತೀನಿ. ಆದರೆ ಇವೊತ್ತಿಗೆ ಅದೆಲ್ಲ ಮರೆತು ಬಿಡಬೇಕು – ಮೊಗೀನ ವಿಚಾರ ಎಲ್ಲೂ ಎತ್ತಕೂಡದು."

" ಅಪ್ಪಣೆ ಬುದ್ದಿ ! ಅವರ ಹತ್ತಿರ ಮಾತಾಡಲಾ ? "

" ಮಾತಾಡು."

" ಅವರೇನಾದರೂ ಕೊಡುತೀನಿ ಅಂದರೆ ? "

" ತಕೋ."

" ಅಪ್ಪಣೆ."

ಮಲ್ಲಣ್ಣನು ತನ್ನ ಕೆಲಸಕ್ಕೆ ಹೋದನು. ದೊಂಬರ ಚಿನ್ನನು ಅವನು ಹೋಗುತ್ತಿದ್ದುದನ್ನು ನೋಡಿ " ಇವೊತ್ತು ನಂಗೂ ಅದ್ರುಷ್ಟಾ ಖುಲಾಯಿಸಿದೆ." ಎಂದು ತಲೆ ಸವರಿಕೊಳ್ಳುತ್ತಾ ಶಂಭುರಾಮಯ್ಯನನ್ನು ಹುಡುಕಿಕೊಂಡು ಹೋದನು.

## ೨೯

ಆನಂದಮ್ಮ ಕೆಂಪಮ್ಮಣ್ಣಿ ಇಬ್ಬರಿಗೂ ಎಲ್ಲಾ ಕೆಲಸ ತಾವೇ
ಮಾಡಬೇಕು ಎಂದು ಉತ್ಸಾಹ. ಕೆಂಪಿ ಆನಂದದಿಂದ ಖರ್ಜಿಕಾಯಿ
ಊದಿದ ಹಾಗೆ ಊದಿದ್ದಾಳೆ. ಅವಳಿಗೆ ರವಿಕೆ ತೋಳು ಪಿಟ್ಟೆನ್ನುವುದಿ
ರಲಿ, ಪಟ್ ಎನ್ನದಿರುವುದು ಆಶ್ಚರ್ಯ. ಆನಂದಮ್ಮ ಇಂದು ನಿಜವಾಗಿ
ಆನಂದಮ್ಮನಾಗಿದ್ದಾಳೆ. ಆದರೆ ಅದೇನೋ ಅವಳೇ ಹೇಳಲಾರಳು.
ಅಂತೂ ಅದು ಕೆಂಪಿಯ ಆನಂದದಂತೆ ತಾನೇ ತಾನಾಗಿ ಉಕ್ಕುತ್ತಿಲ್ಲ.
ಉಷ್ಣದ ಸಂಸರ್ಗದಿಂದ ನೀರು ಕೂಗುತ್ತಿದೆ : ಕುದಿಯುತ್ತಿಲ್ಲ. ಕೆಂಪಿ
ಗಂತೂ ಮಗಳೂ ಅಳಿಯ ಹಸೆಯ ಮೇಲೆ ಕುಳಿತಿದ್ದಾರೆ ಎಂದು
ಆನಂದ. ಆನಂದಮ್ಮನಿಗೆ ಏಕೋ ಏನೋ ಗೊತ್ತಿಲ್ಲ. ಅದು
ಉತ್ಸವ ದರ್ಶನದಿಂದ ಆದ ಸಂಭ್ರಮವಲ್ಲ. ಅದಕ್ಕಿಂತ ಆಚೆ
ಹೋಗಿದೆ. ನಾಯಕನು ತನಗೆ ಏನೋ ಆತ್ಮೀಯನಾದಂತೆ, ಆ
ಆತ್ಮೀಯತೆ ಮಲ್ಲಿಯ ಕಡೆಯಿಂದ ಬಂದ ಹಾಗೆ ಇದೆ. ಅಂತೂ
ಅವಳು ಸಂತೋಷ ಪಡುತ್ತಿದ್ದಾಳೆ. ಆ ಸಂತೋಷಕ್ಕೆ ಆ ಆನಂದಕ್ಕೆ
ಅವಳು ಕಾರಣವನ್ನು ಹೇಳಲಾರಳು.

ಸಂಜೆ ಆರತಕ್ಷತೆಯಾಯಿತು. ಮದುವಣಿಗರು ಬೇರೆ ಮನೆಗೆ
ಹೋದರು- ಐವರು ಮುತ್ತೈದೆಯರಿಗೆ ಫಲತಾಂಬೂಲಗಳನ್ನು
ಕೊಟ್ಟುದೂ ಆಯಿತು. ರಾಣಿಯು ಕೆಂಪಮ್ಮಣ್ಣಿಯನ್ನೂ ಆನಂದಮ್ಮ
ನನ್ನೂ ಮತ್ತೆ ಕರೆದು ಇಬ್ಬರಿಗೂ ಒಂದೊಂದು ಕಲಾಪತ್ತಿನ ಸೀರೆ
ಅದಕ್ಕೆ ತಕ್ಕ ರವಿಕೆಗಳನ್ನು ಫಲತಾಂಬೂಲ ದಕ್ಷಿಣೆಗಳನ್ನು ಕೊಡಿಸಿದಳು.
ಎಲ್ಲರನ್ನೂ ಕಳುಹಿಸಿ, ರಾಣಿಯು ಬಾಗಿಲು ಮುಚ್ಚಿ ಮಂಚದ ಹತ್ತಿರ
ಬಂದಳು. ನೂತನ ದಂಪತಿಗಳು ಎದ್ದು ಬಂದು ಅವಳ ಮುಂದೆ
ನಿಂತರು.

ನಾಯಕನು ರಾಣಿಯನ್ನು ಆಲಂಗಿಸಿ, ಆಕೆಗೆ ಸಂತೋಷ
ವಾಗುವಂತೆ ಮುತ್ತಿಟ್ಟುಕೊಂಡು, “ ಏನು ಪುಣ್ಯಾತ್ಮಗಿತ್ತಿ, ಎಡೆ ಬಡಿ

ಸಿದ್ದೀಯೆ. ಊಟ ಮಾಡಲಾ ? " ಎಂದು ವಿಶ್ವಾಸದಿಂದ ಕೇಳಿದನು.

" ನನ್ನೊಡೆಯ, ಚಿನ್ನ, ನನ್ನ ಸುಖ ಪಡಿಸಿದಂತೆ ಇವಳ್ನೂ ಸುಖ ಪಡಿಸಿ ನಿನ್ನ ಸೊತ್ತು ಮಾಡಿಕೊ." ಎಂದು ಅರ್ಧಾಲಿಂಗನದಲ್ಲಿ ಗಲ್ಲವನ್ನು ಹಿಡಿದು ಹೇಳಿದಳು.

ಮಲ್ಲಿಯು ಅಂಥಾ ದೃಶ್ಯವು ತನಗೆ ಹೊಸದಲ್ಲದಿದ್ದರೂ ಅಂದು ನಾಚಿ ರಾಣಿಗೆ ನಮಸ್ಕಾರ ಮಾಡಿದಳು. ರಾಣಿಯು ಅವಳನ್ನು ಎತ್ತಿ ಗಂಡಸಿಗಿಂತ ಹೆಚ್ಚಾಗಿ ಆಲಿಂಗಿಸಿ ಮುತ್ತುಕೊಟ್ಟು, " ನೋಡವ್ವ, ಈ ಬಸವನ್ನ ನಾನು ಆಳಲಾರದೆ ಹೋದೆ. ನೀನಾದರೂ ಆಳು, ಜೋಡಿ ಹಗ್ಗಕ್ಕೆ ಸಿಕ್ಕಿದ ಗೂಳಿಯಂತೆ ಅಂಕೆಗೆ ಸಿಕ್ಕಲಿ ನನ್ನೊಡೆಯರು. ನಾನು ಪಟ್ಟ ಸುಖದ ಜೊತೆಗೆ ನಾನು ಪಡದಿರುವ ಸುಖವೂ ನಿನ್ನದಾಗಲಿ." ಎಂದು ಹರಸಿದಳು.

ನಾಯಕನು ಏನೋ ಬಿಂಕದಿಂದ " ನೀನು ಪಟ್ಟ ಸುಖವಂತೂ ಸರಿ. ಪಡದಿದ್ದ ಸುಖ ಯಾವುದೋ ? " ಎಂದು ಕೇಳಿದನು.

ಮಡದಿಯು ಮೋಹದಿಂದ ಮೊಖವನ್ನು ಹಿಡಿದು ಎಳೆದುಕೊಂಡು ಸಂಪೂರ್ಣ ವಿಶ್ವಾಸದಿಂದ ಚುಂಬಿಸಿ, ಸೋಟೆ ತಿವಿದು, " ಗಂಡಂತೆ ಗಂಡು. ನನ್ನ ಹೊಟ್ಟೆಯಂತೂ ತುಂಬಲಿಲ್ಲ. ಅವಳ ಹೊಟ್ಟೆಯಾದರೂ ತುಂಬಿಸು." ಎಂದು ಹೇಳಿ ಹೊರಟಳು.

ಒಳ ಬಾಗಿಲನ್ನು ತೆಗೆದು ಮಗ್ಗುಲ ಕೋಣೆಗೆ ಹೊರಟಿದ್ದವಳು ಹಿಂತಿರುಗಿ ಹಾಗೆಯೆ ಬಾಗಿಲನ್ನು ಹಿಡಿದು ನಿಂತು ಸಣ್ಣ ದನಿಯಲ್ಲಿ " ಮಂಚ ಹತ್ತೀರೋ, ಸೊಳ್ಳೆಪರದೆ ಬಿಟ್ಟು ಹೋಗೋವಾ" ಎಂದಳು.

ದಂಪತಿಗಳು ಮಂಚವನ್ನು ಹತ್ತಿದರು.

ರಾಣಿಯು ಹಿಂತಿರುಗಿ ಬಂದು ಅಲ್ಲಿದ್ದ ಬಾದಾಮಿಯ ಹಲ್ವವನ್ನು ಇಬ್ಬರ ಬಾಯಿಗೂ ಅಷ್ಟಷ್ಟು ಇಟ್ಟು, ಕೆಂಪಗೆ ಕಾಯಿಸಿಟ್ಟಿದ್ದ ಬಾದಾಮಿಯ ಹಾಲನ್ನು ಬಟ್ಟಲಿಗೆ ಬೊಗ್ಗಿಸಿ ಇಬ್ಬರಿಗೂ ಕೊಟ್ಟು ತಾನೂ ಕುಡಿದು, ಕುಟ್ಟಿಟ್ಟಿದ್ದ ಕರ್ಪೂರ ವೀಳೆಯವನ್ನು ಅವರಿಗೂ ಕೊಟ್ಟು ತಾನೂ ಬಾಯಲ್ಲಿ ಹಾಕಿಕೊಂಡು, " ಇನ್ನು ಬರಲಾ ? "

ಎಂದು ಎದ್ದಳು.

ನಾಯಕನು ಹೋಗುತ್ತಿದ್ದವಳ ಸೆರಗು ಹಿಡಿದು. ನಿಲ್ಲಿಸಿಕೊಂಡು ಬರಸೆಳೆದು ಮೊಕದಲ್ಲಿ ಮೊಕವಿಟ್ಟು ಬಾಯಲ್ಲಿದ್ದ ತಂಬುಲದಲ್ಲಿ ಅರ್ಧ ವನ್ನು ಅವಳ ಬಾಯಿಗೆ ನೂಕಿ, ಅವಳ ಬಾಯಲ್ಲಿದ್ದ ತಂಬುಲವನ್ನು ತಾನೂ ಕಸಿದುಕೊಂಡು. ಕೆನ್ನೆಗೆ ಕೆನ್ನೆಕೊಟ್ಟು, "ತಾವು ಯಾವಾಗ ಮಗ್ಗುಲಿಗೆ ಬರುವುದು!" ಎಂದನು.

ಅವಳೂ ಅದೇ ವಿಶ್ವಾಸದಿಂದ ಅವನ ಬೆನ್ನು ಸವರುತ್ತಾ "ತಾವಿಬ್ಬರೂ ಕರೆದಾಗ." ಎಂದು ನಕ್ಕು ನಗಿಸಿ, ಹೊರಟಳು. ಸೊಳ್ಳೆಪರದೆಯು ಆ ನವದಂಪತಿಗಳನ್ನು ಮುಚ್ಚಿತು. ಎರಡು ಹೆಜ್ಜೆ ಇಟ್ಟಿದ್ದವಳು ಮತ್ತೆ ಹಿಂತಿರುಗಿ ಅವರಿಬ್ಬರನ್ನು ಕಣ್ಣು ತುಂಬಾ ನೋಡಿ, ಏನೋ ಪರಮಾರ್ಥವನ್ನು ಸಾಧಿಸಿದವಳಂತೆ ತನ್ನ ಮಲಗುವ ಮನೆಗೆ ಹೋದಳು. ಯಾಕೋ ದಾರಿಯಲ್ಲಿ ಅವಳು ಮೈಮುರಿದಳು.

ಬಾಗಿಲು ಅವಳ ಅರಿವಿಲ್ಲದೆ ಕೊಂಚ ಸದ್ದು ಮಾಡಿತು. ರಾಣಿಯು ಹಾಕಿದ ಬಾಗಿಲು ಸದ್ದಾದುದನ್ನು ಅರಿಯದ ನಾಯಕನು ಹಿಂತಿರುಗಿ ನೋಡಿದನು. ಆ ವೇಳೆಗೆ ರಾಣಿಯು ಮರೆಯಾಗಿದ್ದಳು. ಅವಳ ಕಣ್ಣಿನ ಕೊನೆಯಲ್ಲಿದ್ದ ಸಣ್ಣ ಹನಿಯನ್ನು ಅವನು ಕಾಣಲಿಲ್ಲ. ಅದು ಸಂತೋಷಕ್ಕೋ ಸಂಕಟಕ್ಕೋ ಅದು ಅವಳಿಗೂ ತಿಳಿಯಲಿಲ್ಲ.

ಆನಂದಮ್ಮನು ರಾಣಿಯು ತನಗೇಕೆ ಸೀರೆ ರವಿಕೆಗಳನ್ನು ಕೊಡಿಸಿದಳು ಎಂದು ಆಶ್ಚರ್ಯಪಟ್ಟುಕೊಂಡಳು. ಕೆಂಪಿಯನ್ನು ಬಿಟ್ಟು ತನ್ನ ಕೋಣೆಗೆ ಹೋದಾಗ ಅಲ್ಲಿ ಶಂಭುರಾಮಯ್ಯನು ಇನ್ನೂ ಎಚ್ಚರವಾಗಿ, ಏನೋ ಮೊಂಕು ಹಿಡಿದವನಂತೆ ಕುಳಿತಿದ್ದನು. ಬಾಯಲ್ಲಿ ತಂಬುಲವಿದೆ: ಅಗಿಯುತ್ತಿಲ್ಲ. ಕೈಯಲ್ಲಿ ಹೊಗೆಸೊಪ್ಪಿದೆ: ಅದನ್ನು ಬಾಯಿಗೆ ಹಾಕಿಕೊಳ್ಳುವ ಯತ್ನವಿಲ್ಲ. ಹಾಗೆಯೇ ಕುಳಿತಿದ್ದಾನೆ.

ಆನಂದಮ್ಮನು ಬಂದಳು. ಬಾಗಿಲನ್ನು ಹಾಗೆಯೇ ಸೇರಿಸಿ ಮಡಲನ್ನು ಹಾಗೆಯೇ ಹಿಡಿದುಕೊಂಡು ಬಂದು, ದೀಪವನ್ನು ಎತ್ತಿ, ಆ ಪೂರ್ಣ ಪ್ರಕಾಶದಲ್ಲಿ "ನೋಡಿದಿರಾ ಈ ವಿಚಿತ್ರ? ಕೆಂಪಮ್ಮನ ಜೊತೆಯಲ್ಲಿ ನನಗೂ ಮರ್ಯಾದೆ?" ಎಂದು ಸೀರೆ ರವಿಕೆಗಳನ್ನು

ತೋರಿಸಿದಳು. ಫಲತಾಂಬೂಲದಲ್ಲಿ ದಕ್ಷಿಣೆಯಾಗಿ ಒಂದು ಹಸುರು ನೋಟಿತ್ತು.

ಗಂಡನು ತಲೆಯಲ್ಲಾಡಿಸುತ್ತಾ "ಕಾರಣವಿದೆ" ಎಂದನು.

"ಏನು ?"

"ಏನೇನು ? ನೀನು ಮರ್ಯಾದೆಗೆ ಕೆಂಪಮ್ಮನಿಗಿಂತ ಅರ್ಹಳು ಎಂದು."

"ಹಾಗೆಂದರೆ ?"

"ನಾವು ಆಗ ಮಗುವನ್ನು ಕೊಟ್ಟುಬಿಟ್ಟೆವಲ್ಲ ?"

"ಹೂಂ !"

"ಆ ಮಗುವೇ ಮಲ್ಲಿ !"

"ನಿಜವಾಗಿ ?"

"ಖಂಡಿತವಾಗಿ."

ಆನಂದಮ್ಮನು ತಾಂಬೂಲಾದಿಗಳನ್ನೆಲ್ಲ ಅತ್ತಿಟ್ಟು ಬಂದು ಗಂಡನ ಮಗ್ಗುಲಲ್ಲಿ ಕುಳಿತು ಆತುರದಿಂದ, ಅವನ ಉತ್ತರದ ಮೇಲೆ ಪ್ರಾಣವು ನಿಂತಿರುವುದೋ ಎಂಬಂತೆ, ಯಾರಾದರೂ ಕೇಳಿಯಾರು ಎಂಬ ದಿಗಿಲಿನಿಂದಲೋ ಎಂಬಂತೆ ಸಣ್ಣಗೆ "ಯಾರು ಹೇಳಿದರು ?" ಎಂದು ಕೇಳಿದಳು.

"ಯಾರು ಹೇಳಬೇಕೋ ಅವನೇ ಹೇಳಿದ. ಅವೊತ್ತು ಮಗು ತೆಗೆದುಕೊಂಡು ಹೋದ ದೊಂಬರವನು ಇವೊತ್ತು ದೊಂಬಿಯಲ್ಲಿ ಸಿಕ್ಕಿದ. ಅವನು ಆ ಮಗುವನ್ನು ಕೆಂಪಿಗೆ ಒಂದು ಸೀರೆಗೆ ಮಾರಿದನಂತೆ."

ಆನಂದಮ್ಮನು ಒಂದು ಗಳಿಗೆ ಹಾಗೇ ಕುಳಿತುಬಿಟ್ಟಳು. ಗಂಡನು ಅವಳನ್ನು ಮೆಲ್ಲಗೆ ಹತ್ತಿರಕ್ಕೆ ಎಳೆದು ಕೂರಿಸಿಕೊಂಡನು. ಅವಳು ಅವನ ಎದೆಯ ಮೇಲೆ ತಲೆಯನ್ನು ಇಟ್ಟುಕೊಂಡು ನೀರವವಾಗಿ ರೋದಿಸಿದಳು.

ಗಂಡನೂ ಕಣ್ಣಲ್ಲಿ ಉದುರುತ್ತಿರುವ ಹನಿಗಳನ್ನು ಒರೆಸಿಕೊಳ್ಳುತ್ತ, ಅವಳ ತಲೆಯನ್ನು ಸವರುತ್ತಾ "ಇರಲಿ ಎಂದರೆ ನನ್ನ

ಮಾತು ಕೇಳದೆ ಹೋದೆ" ಎಂದು ಸಣ್ಣಗೆ ಹೇಳಿದನು.

ಒಂದು ಗಳಿಗೆಯಾದ ಮೇಲೆ ಹೆಂಡತಿಯು "ಹೋಗಲಿ ಬಿಡಿ, ನಮ್ಮಲ್ಲಿ ಇದ್ದಿದ್ದರೆ ಯಾವ ಬಡಮುಂಡೇದರ ಪಾಲಾಗುತ್ತಿತ್ತೊ? ಚೆನ್ನಾಗಿ ಬದುಕಲಿ" ಎಂದಳು.

ಮತ್ತೆ ಒಂದು ಕ್ಷಣ ಆದಮೇಲೆ, "ಈ ಸುದ್ದಿ ಅವರಿಗೂ ತಿಳಿದಿರಬಹುದೇ?" ಎಂದು ಕೇಳಿದಳು.

"ಅವರಿಗೆ ಎಂದರೆ?"

"ಕೆಂಪಮ್ಮ ಮಲ್ಲಣ್ಣನವರಿಗೆ, ನಾಯಕರಿಗೆ?"

"ಅವನು ಹೇಳಿದ್ದರಲ್ಲಿ ಮಲ್ಲಣ್ಣನಿಗೆ ಗೊತ್ತಾದಂತೆ ಇದೆ. ನಾಯಕನಿಗೂ ಗೊತ್ತಿರಬೇಕು. ಇಲ್ಲದಿದ್ದರೆ, ಇದಕ್ಕೆಲ್ಲಾ ಕಾರಣ?"

"ಇರಬಹುದು. ಅಯ್ಯೋ! ಗತಿ?"

"ಗತಿ ಏನು? ನಾಯಕನ ಸಮೀಪ ಬಂಧುಗಳಾದರೂ ಯಾರೋ ದೂರದವರಂತೆ ಇರುವುದು."

"ಅಯ್ಯೋ ಅದಿರಲಿ, ಅವರಿಗೆಲ್ಲಾ ಮೊಕ ತೋರಿಸುವುದು ಹೇಗೆ ಅಂದರೆ?"

ಗಂಡನು "ಹೀಗೆ!" ಎಂದು ಅವಳನ್ನು ಥಟ್ಟನೆ ತಬ್ಬಿಕೊಂಡನು.

"ದೀಪ ಅಂದರೆ! ಬಾಗಿಲು ತೆಗೆದಿದೆ ಅಂದರೆ!" ಎಂದು ಆನಂದಮ್ಮನು ಅಡ್ಡನುಡಿದಳು.

## ೩೦

ತಾತಯ್ಯನವರ ಕಚೇರಿಗೆ ನರಸಿಂಹಯ್ಯನು ಶಂಭುರಾಮಯ್ಯ, ಮಲ್ಲಣ್ಣನವರ ಜೊತೆಯಲ್ಲಿ ಬಂದಿದ್ದಾನೆ. ಈಡಿಗದಲ್ಲಿ ಒಂದು ವಿವೇಕಾನಂದ ಪಂಥವನ್ನು ಸ್ಥಾಪಿಸುತ್ತೇವೆ. ಆ ಸಂದರ್ಭದಲ್ಲಿ ಆರಂಭ ಭಾಷಣವಾಗಬೇಕೆಂದು ಪ್ರಾರ್ಥನೆ.

ಶಂಭುರಾಮಯ್ಯನು "ರಾವ್ ಬಹದ್ದೂರ್ ರಾಜಸೇವಾ ಪರಾಯಣ ಪುಟ್ಟಸಿದ್ದಯ್ಯ ನಾಯಕರು ತಮ್ಮ ಮನೆಯಲ್ಲಿ ಸದ್ಯಕ್ಕೆ ಸಂಘವಿರುವುದನ್ನು ಒಪ್ಪಿದ್ದಾರೆ. ಆಗಲೇ ತಿಂಗಳಿಗೆ ಎಂಟು ಆಣೆ ಕೊಡುವ ೫೦ ಜನ ಸದಸ್ಯರಾಗಿದ್ದಾರೆ." ಎಂದು ಅರಿಕೆಮಾಡಿದ್ದಾನೆ.

ತಾತಯ್ಯನವರು ವಿವರಗಳನ್ನು ಒಂದೊಂದಾಗಿ ಕೇಳಿದರು.

"ಏನೋ ನೀವೇನು ಮಾಡುತ್ತೀರಿ ?"

"ವಿವೇಕಾನಂದರ ಗ್ರಂಥಗಳನ್ನು ಓದಿಸಿಕೇಳುತ್ತೇವೆ."

"ಯಾರು ಓದುವವರು ?"

"ನರಸಿಂಹಯ್ಯನೋರು."

"ಅವರಿಗೇನಾದರೂ ಕೊಡುತ್ತೀರೋ ?"

"ಈನ್ನೂ ಏನೋ ಗೊತ್ತಾಗಿಲ್ಲ."

"ಅಲ್ಲರೀ, ಯಾವನ್ಯಾಯ ? ಹಜಾಮನಿಗೆ ಕೊಡುತ್ತೀರಿ, ಧೋಬೀಗೆ ಕೊಡುತ್ತೀರಿ, ಬಾಡಿಗೆ ಕೊಡುತ್ತೀರಿ, ದೀಪಕ್ಕೆ ಎಣ್ಣೆಗೆ ಕೊಡುತ್ತೀರಿ ನಿಮಗೋಸ್ಕರ ಆ ಹುಡುಗ ದಿನವೂ ಬಂದು ಹೋಗ ಬೇಕಾದರೆ ಬಿಟ್ಟಿಬಂದು ಹೋಗಬೇಕೆ ?"

"ಇಲ್ಲ, ರಾಯರೇ, ದಿನ ಗಾಡಿ ಕಳುಹಿಸುತ್ತೀವಿ"

"ಆ ಹುಡುಗ ಇರುವುದು ಹಳೆಯ ಅಗ್ರಹಾರ, ನಿಮ್ಮ ಹತ್ತಿರ ಬಂದು ಹೋಗುವುದರ ಜೊತೆಗೆ ಕಾಲೇಜ್‌ಗೆ ಬೇರೆ ಹೋಗಬೇಕು. ಏನು ನರಸಿಂಹಯ್ಯ, ಕೊನೆಗೆ ಏನುಮಾಡಿದೆ ? ಸಂಸ್ಕೃತ ಕಾಲೇಜಿಗೆ ಸೇರಿದೆಯೋ ?ಎಂಟ್ರೆನ್ಸ್‌ಗೆ ಸೇರಿದೆಯೊ."

"ತಮ್ಮ ಅಪ್ಪಣೆಯಂತೆ ಎಂಟ್ರೆನಸೆಗೇ ಸೇರಿದೆ, ಸಾರ್ !"

"ಒಳ್ಳೆಯ ಕೆಲಸಮಾಡಿದೆ. ನಮ್ಮ ವೈದಿಕ ವಿದ್ಯೆಗೆ ತೇಜಸ್ಸು ಕಡಿಮೆಯಾಗುತ್ತಿದೆ. ಇನ್ನು ಮುಂದಕ್ಕೆ ಬರುಬರುತ್ತಾ ಪುರೋಹಿತರು ಆಚಮ್ಯ ಎನ್ನಬೇಕಾದರೆ Drink water and proceed, ಎನ್ನುವಘಟ್ಟವೂ ಬರುವುದೇನೋ? ದಿನ ದಿನವೂ ತೇಜಸ್ವಿನಾ ಅವಧೀತ ಮಸ್ತು ಅನ್ನುತ್ತಲೇ ಇದ್ದರೂ ತೇಜಸ್ಸು ಮಾತ್ರ ಕುಂದುತ್ತಿದೆ. ಈ ತೇಜಸ್ಸು ಮತ್ತೆ ಇಂಗ್ಲಿಷ್ ಅಧ್ಯಯನದಿಂದ ಬರಬೇಕಾಗಿದೆ, ಬಹುಶಃ

ಇದು ಪರಮಹಂಸರ ಯುಗ. ಅನಕ್ಷರಸ್ಥನಾದರೂ ತಪಸ್ವಿಯಾದ ಗುರು; ಅಕ್ಷರಸ್ಥನಾಗಿ ವಿದ್ವತ್ ಶ್ರೇಷ್ಠನಾದ ನರೇಂದ್ರ ಶಿಷ್ಯ: ಇಬ್ಬರ ಯೋಗ ವಿವೇಕಾನಂದನನ್ನು ಕೊಟ್ಟು ಭಾರತಿಯ ಗೌರವವನ್ನು ಉಳಿಸಿತು. ಹಾಗೆ ನಮ್ಮಲ್ಲಿ ತಪಸ್ವಿಗಳೂ ವಿದ್ವಾಂಸರೂ ಇಬ್ಬರೂ ಬೆಳೆಯಬೇಕು. ಬಹುಶಃ ಹೊಸಯುಗ ಬರುತ್ತಿದೆ, ಎಲ್ಲವೂ ಹೊಸದಾಗುತ್ತಿದೆ, ಎಲ್ಲವೂ ಹೊಸದಾಗಿ ಹಳೆಯ ಯುಗದ ಗುರುತಾದ ಈ ದಾಸ್ಯ ನೀಗಬೇಕು. ಈ ಹಾಳು ಇಂಪೀರಿಯಲಿಸಂ ಎಂದು ಹೋಗುತ್ತದೆಯೋ? ಇಂಡಿಯಕ್ಕೆ ಎಂದು ಸ್ವಾತಂತ್ರ್ಯ ಬರುತ್ತದೋ?"

"ಈ ವಾರ್‌ನಲ್ಲಿ ಬ್ರಿಟಿಷರು ಗೆದ್ದರೆ ನಮಗೆ ಸ್ವಾತಂತ್ರ್ಯ ಕೊಡುತ್ತೀವಿ ಅಂದಿದ್ದಾರಲ್ಲ ಸಾರ್?"

"ಈ ಬ್ರಿಟಿಷರು ಶುದ್ಧ ಕಳ್ಳರು, ಇವರಿಗೆ ಡಿ.ಡಿ. ಎಂದು ಹೆಸರು. ಗೊತ್ತೋ? ಡಿ. ಡಿ. ಎಂದರೆ ಡಿಸೀಟ್‌ಫುಲ್ ಡಿಪ್ಲೊಮೆಸಿ ಎಂದು ಒಂದು, ಡೇಂಜರಸ್ ಡಿಪ್ಲೊಮೆಸಿ ಎಂದು ಇನ್ನೊಂದರ್ಥ. ಈಗ ಸೋಲುತ್ತಿದ್ದರೂ ಕೊನೆಯ ಸ್ಟೇಜಿನಲ್ಲಿ ಲೀಗ್ ಮ್ಯಾಚ್ ಆದ ಹಾಗೆ ಆಗುತ್ತದೆ ನೋಡಿಕೊಂಡಿರು, ಆಟ ಆಡೋರೆ ಬೇರೆ ಕಪ್ ತೆಗೆದುಕೊಳ್ಳೋರೆ ಬೇರೆ, ಇವರೇ ಗೆಲ್ಲುತಾರೆ. ಅದು ಷ್ಯೂರ್! ಆದರೆ ಇವರು ಮಾತು ಉಳಿಸಿಕೊಳ್ಳುವ ನಂಬಿಕೆ ಇಲ್ಲ."

"ಆಗ ತಿಲಕರು ಸುಮ್ಮನಿರುತ್ತಾರೆಯೇ ಸಾರ್; ಇತ್ತ ಕಡೆ ಆನ್ನಿ ಬೆಸೆಂಟರು ಸುಮ್ಮನಿರುತ್ತಾರೆಯೇ ಸಾರ್? ಇವರಿಬ್ಬರು ಸಾಕಲ್ಲವೆ?"

"ಇಲ್ಲ ನರಸಿಂಹಯ್ಯ, ತಿಲಕರು ಎಷ್ಟೇ ಆಗಲಿ ಬ್ರಾಹ್ಮಣ. ಅದರಲ್ಲೂ ದ್ರೋಣನಂತಹ ಬ್ರಾಹ್ಮಣ, ಹೋರಾಡುವುದಕ್ಕೆ ಎಕ್ಸೆಲೆಂಟ್–ಅವರು ತಮ್ಮ ಯೋಗ್ಯತೆಬಲ್ಲರು ನೋಡು. 'ಸ್ವರಾಜ್ಯ ಬಂದರೆ ಏನು ಮಾಡುತೀರಿ ಅಂದರೆ, I retire as a professor of mathematics.' ಎನ್ನುತ್ತಾರೆ ನೋಡು. ಅದರಿಂದ ಅವರು ಎದುರು ಬೀಳುತ್ತಾರೆ: ಸೆರೆಮನೆಗೆ ಹೋಗುತ್ತಾರೆ: ಆನ್ನಿ ಬೆಸೆಂಟರು, International person. ಅವರನ್ನು ಹಿಡಿದಾಗ ಪ್ರಪಂಚ

ದಲ್ಲೆಲ್ಲಾ ಗಲಭೆಯಾಗುತ್ತದೆ : ಮಾನ ಹೋಗುತ್ತದೆ. ಅದಕ್ಕೆ ಹೆದರಬೇಕು. ಆದರೆ ಬ್ರಿಟಿಷರಿಗೆ ಇಂಡಿಯ ಲೈಫ್ ಲೈನ್, ಇದನ್ನು ಬಿಟ್ಟಾರೆ.? ಇದು ಬಿಡಬೇಕಾದರೆ ಇನ್ನೂ ಹತ್ತು ಎಂಡರ್ ಹುಟ್ಟಿ ಇವರ ನೌಕಾಬಲ ಮುರಿಯಬೇಕು ? ಇವರು born sea-men. ಅಲ್ಲಿ ಇವರ ಪ್ರಾಣ ಇರುವುದು. ಅದನ್ನು ಭೇದಿಸಿದರೆ ಆಗ ಇವರು ಸಾಯುವುದು."

"ಹಾಗಾದರೆ ಗತಿಯೇನು ? ಸಾರ್ ?"

"ಗತಿಯಿಲ್ಲದೆ. ಇಲ್ಲ : ಆದರೆ ನಮಗೆ ಇನ್ನೂ ಗೊತ್ತಿಲ್ಲ. ಈಗೀಗ ಕಾಂಗ್ರೆಸ್ ಪೆಟಿಷನ್ ಸ್ಟೇಜ್‌ನಿಂದ ಥ್ರೆಟನಿಂಗ್ ಸ್ಟೇಜಿಗೆ ಬರುತ್ತಿದೆ. ಈ ಬನಿಯಗಳ ಗುಟ್ಟುಬಲ್ಲ ಇನ್ನೊಬ್ಬ ಬನಿಯಾನೇ ಬರಬೇಕು–ಗೋಖಲೆಯಿಂದ ಏನಾದರೂ ಆಗುತ್ತದೆಯೋ ಅಂದರೆ ಅವನೊಬ್ಬ ನವಾಬ ! ಆ ಸರ್ವೆಂಟ್ ಆಫ್ ಇಂಡಿಯ ಸೊಸೈಟಿಯಲ್ಲಿ ಕುಳಿತು 'ತ್ಯಾಗವೈರಾಗ್ಯ ಬರಬೇಕು. Public life must be spiritualised' ಅಂತಾನೆ. ಹಾಗೆಂದರೇನೋ ಅವನಿಗೇ ತಿಳಿಯದು–ಎಲ್ಲದಕ್ಕಿಂತ ಹೆಚ್ಚಾಗಿ ಕಾಂಗ್ರೆಸ್ಸ್ ಇನ್ನೂ ಅರ್ಬನ್ ಏರಿಯಾಬಿಟ್ಟು ಹಳ್ಳಿಗಳಕಡೆಗೇ ಹೋಗಿಲ್ಲ. ಇನ್ನು ಮುಂದಿನ ಸ್ಟೇಜ್ ಮಾಸ್‌ಸ್ಟೇಜ್. ಪರಿಶುದ್ಧವಾಗಿ, ರಾಮ ರಾಮ ಅನ್ನೋ, ಬನಿಯ ಆಫ್ ಬನಿಯಾಸ್ ಬರಬೇಕು–ಭಾರತೀದೇವಿ ಬಂಜೆಯಲ್ಲ ! ಆದರೆ ನಮ್ಮ ಕಾಲದಲ್ಲಿ ಸ್ವಾತಂತ್ರ್ಯ ಬರುತ್ತೋ ಇಲ್ಲವೋ ಅದೇ ಅನುಮಾನ ?".

"ಬಂದರೆ ಆ ಸ್ವಾತಂತ್ರ್ಯ ಹೇಗಿರಬೇಕು ? ಹೇಗಿರುತ್ತೆ ಸಾರ್ ?"

"ಏನೋ, ತುಂಟ, ಬೆಳಗೆದ್ದು ನನ್ನ ಕೆಲಸ ಎಲ್ಲಾ ಹಾಳುಮಾಡುತ್ತಿದ್ದೀಯೆ ! ಭಾರತದ ಪುರುಷಾಮೃಗದ ಹಾಗೆ ನನ್ನ ಬುದ್ಧಿ ! ಲಿಂಗ ಕಂಡರೆ ಅದು ಪೂಜೆಗೆ ಕುಳಿತುಕೊಳ್ಳುತ್ತಿತ್ತಂತೆ. ನನ್ನ ಬುದ್ಧಿ ಇಂಡಿಯ ಸ್ವಾತಂತ್ರ್ಯ ಅಂದರೆ ಕುಳಿತುಬಿಡುತ್ತದೆ. ಆಗಲೇ ಒಂಭತ್ತು ಗಂಟೆಯಾಗುತ್ತಾ ಬಂತು. ನಾನು ಒಂಭತ್ತೂವರೆಗೆ ಇಲ್ಲಿಂದ ಹೊರಡಬೇಕು. ಯಾರೋ ಅಲ್ಲಿ ಗಾಡಿ ಬಂದಿದೆಯೇನೋ ? "

"ನಮ್ಮ ಕುದುರೆಗಾಡಿಯಿದೆ."

"ಇದೆಯೋ, ನಮ್ಮ ಗಾಡಿ ಕಟ್ಟಬೇಡ ಅನ್ನೋ! ನಮ್ಮ ಬಸವೇಶ್ವರ ಹೋಗಿ ಬರಬೇಕಾದರೆ, ಕೈಲಾಸಯಾತ್ರೆ ಮಾಡ ಬೇಕಾಗೋಷ್ಟು ಹೊತ್ತು ಬೇಕು. ಇರಲಿ. ಏನಂದೆ? ಸ್ವಾತಂತ್ರ್ಯ ಹೇಗಿರಬೇಕು? ಹೇಗಿರುತ್ತೆ? ಏನು ಥೀಸೀಸ್ ಬರೆಯುತ್ತೀಯೇನು? ನೋಡು, ಮಗು, ಈ ಇಂಪೀರಿಯಲಿಸಂ ಬೇಟೆ ಹೊಡೆದು ಅದರ ಮೇಲೆ ಕಾಲಿಟ್ಟುನಿಂತಿರುವ ಸಿಂಹ. ಇದನ್ನು ಯಾವುದೋ ಮೊಲ ಪಲ್ಟಿ ಹೊಡೆಸಿ ಬಾವಿಗೆ ಕೆಡವುತ್ತೆ. ಆಗ ಜಗತ್ತಿನಲ್ಲಿ ಡೆಮಾಕ್ರಸಿ ಬರುತ್ತೆ. ಮೆಜಾರಿಟಿ ರೂಲ್ ಬರುತ್ತೆ. ಕಾರ್ನ್ಯ ವರ್ರ್ಯಾ ಬಿಕಮ್ಸ್ ದಿ ಪಿವಟ್. ಪ್ರಜೆಗಳ ರಾಜ್ಯ, ಪ್ರಜಾಪ್ರತಿನಿಧಿಗಳು ಪ್ರಜೆಗಳ ಸೌಖ್ಯ ಕ್ಕಾಗಿ ಆಳುತ್ತಾರೆ. ಮೇಲು ಕೆಳಗು ಎಲ್ಲಾ ಕೊಚ್ಚಿಹೋಗುತ್ತೆ. ಮಾರ್ಕ್ಸ್, ಲೆನಿನ್, ಹೇಳುವಂತೆಯೇ ಅದರೂ ಆಗಬಹುದು."

"ಆಗ ನಮ್ಮ ವರ್ಣ ಆಶ್ರಮ ಧರ್ಮ ಏನಾಗುತ್ತೆ ಸಾರ್?"

ತಾತಯ್ಯನವರು ನಕ್ಕುಬಿಟ್ಟರು. "ಹುಚ್ಚ ಪ್ರಲಯವಾ ಗೋವಾಗ ನಮ್ಮ ಗುಡಿಸಲು ಇರುತ್ತದೆಯಲ್ಲವೆ ಸಾರ್ ಎಂದ ಹಾಗೆ ಮಾತನಾಡುತ್ತೀಯಲ್ಲ. ಬ್ರಾಹ್ಮಣ, ಬೌದ್ಧ, ಕ್ರಿಸ್ತ, ಮುಸಲ್ಮಾನ ನಾಲ್ಕು ಜಾತಿ ಈಗ ಲೋಕದಲ್ಲಿರುವುದು. ಈ ನಾಲ್ಕೂ ಇಂಪೀರಿಯ ಲಿಸ್ಟ್ ಆಗಿಯೇ ಇವೆ. ಮಿಕ್ಕಮೂವರು ಎಲ್ಲರೂ ಒಂದೇ ಸಮ ಎಂದು ಬಾಯಲ್ಲಾದರೂ ಹೇಳುತ್ತವೆ. ಬ್ರಾಹ್ಮಣಮಾತ್ರ ಮಿಕ್ಕವರೆ ಲ್ಲರೂ ನನ್ನ ಶಿಷ್ಯರು: ಎಲ್ಲರೂ ನನ್ನ ಪಾದಪೂಜೆ ಮಾಡಿ ಎನ್ನುತ್ತಾನೆ. ಈ ಸ್ಪಿರಿಟ್ ಈಗ ಬರುತ್ತಿರುವ ಡೆಮೊಕ್ರಾಟಿಕ್ ಸ್ಪಿರಿಟ್‌ಗೆ ವಿರುದ್ಧ. ವರ್ಷಿಪ್‌ಮೆಂಟ್ ಅಂಡ್ ಮೆರಿಟ್ ಈಸ್ ಮೈ ಮನಾಪಲಿ ಅನ್ನೋ ಬ್ರಾಹ್ಮಣನಿಗೆ ಇನ್ನು ಸ್ಥಾನವಿಲ್ಲ. ದಶಾನಾಮೇಕಾದಶ ಆಗಬೇಕು. ಪರ್ಸನಲ್ ಮೆರಿಟ್‌ಗೆ ಕೂಡ ಕೆಲವುದಿನ ಸ್ಥಾನವಿಲ್ಲದೆ ಹೋಗ ಬಹುದು. ಗೆದ್ದಾಗ ಎರಡು ಮೂರುದಿನ ಶ್ರೀರಂಗಪಟ್ಟಣವನ್ನು ಬ್ರಿಟಿಷರು ಲೂಟಿಮಾಡಿದರಂತೆ. ತಾಳಿಕೋಟೆಯ ಯುದ್ಧವಾದ ಮೇಲೆ ಆರು ತಿಂಗಳು ತುರುಕರು ವಿಜಯನಗರ ಲೂಟಿಮಾಡಿದರಂತೆ. ಹಾಗೆ, ಕೊನೆಯ ಘಟ್ಟದಲ್ಲಿ ಗೆದ್ದವರು–ಮೂರೂ ಮುಕ್ಕಾಲುಪಾಲು

ಕಾಂಗ್ರೆಸ್ಸೇ ಗೆಲ್ಲುವುದು, ಈ ಲಿಬರಲ್ಸ್ ಮಾಡರೇಟ್ಸ್, ಇವರೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಬ್ರಿಟಿಷ್ ಭಕ್ತರು–ಕಾಂಗ್ರೆಸ್ಸು ಉಗ್ರವಾಗಿ ಕಷ್ಟನಷ್ಟಗಳನ್ನು ಬಹುವಾಗಿ ಅನುಭವಿಸಿ ಕೊನೆಗೆ ಗೆಲ್ಲಬಹುದು. ಆಗ ಸಿಕ್ಕಾಪಟ್ಟೆ ಆಗುತ್ತದೆ. ಅನಾರ್ಕಿ ಬಂದೇಬರಬೇಕು. ಲೂಟಿಯೋ ಲೂಟಿ ಆಗಬೇಕು. ಅದು ಶ್ರೀರಂಗಪಟ್ಟಣದ ಲೂಟಿಯಾದರೆ ದೇಶದ ಅದೃಷ್ಟ! ಹಾಗಿಲ್ಲದೆ ವಿಜಯನಗರದ ಲೂಟಿಯಾದರೆ ದುರದೃಷ್ಟ. ಅದಿರಲಿ. ನಿನ್ನ ಮಾತಿಗೆ ಉತ್ತರಬೇಕಲ್ಲ. ಬ್ರಾಹ್ಮಣ ಅಂತರ್ಮುಖಿಯಾಗಿ ಋಷಿಯಾದರೆ ಜಗತ್ತು ಅವನಿಗೆ ಒಂದು ಸ್ಥಾನವನ್ನು ಕೊಟ್ಟು ಪೂಜಿಸುತ್ತದೆ. ಆದರೇನು? ನಾವು ವಿನಾಯಕನ ಪೂಜೆ ಮಾಡಿದ ಹಾಗೆ ಅದು. ಯಾಕೆ ಅಂತೀಯೇನೋ? ಇನ್ನು ಮುಂದೆ ಲಕ್ಷ್ಮೀಪತಿಯ ಯುಗವಲ್ಲ: ಲಕ್ಷ್ಮಿಯಯುಗ. ಇನ್ನೂ ಮುಂದೆ ಆರಾಧ್ಯ ದೈವ ಹೆಣ್ಣು, ಹೊನ್ನು, ಮಣ್ಣು. ಆಗ ಬ್ರಾಹ್ಮಣನಿಗೆ ಸ್ಥಾನವಿಲ್ಲ. ವಿಜ್ಞಾನ, ತ್ಯಾಗ, ವೈರಾಗ್ಯ, ಅಹಿಂಸೆ, ಸತ್ಯ, ಎಂಬ ಪಂಚಾಂಗ, ಈಗ ನಮ್ಮ ಪಂಚಾಂಗ ಇರುವಂತೆ ರೆಫರೆನ್ಸ್‌ಗೆ ಎಲ್ಲರ ಬಾಯಲ್ಲೂ ಇರುತ್ತವೆ. ಈ ಲಕ್ಷ್ಮಿಯಯುಗ ಬೆಳೆದು ಅದು ರಾಕ್ಷಸಯುಗ ಲೂಟಿಯಯುಗ ಆಗುತ್ತದೆ. ಅದರ ಕೊನೆಗೆ ಮತ್ತೆ ಯಾವನೋ ಹುಟ್ಟಿ ಈ ಪಂಚಾಂಗ ಪುಸ್ತಕದ ಬದನೆಯ ಕಾಯಲ್ಲ: ಜೀವನವನ್ನು ನಿರೂಪಿಸಿರುವ ಗುರಿಗಳು ಎನ್ನುತ್ತಾನೆ ಆಗ ಕಾದಾಡಿ, ದಣಿದು, ಸೊಪ್ಪಾಗಿ, ಸತ್ತಂತಿರುವ ಲೋಕ ಅವನ ಮಾತು ಕೇಳುತ್ತದೆ. ಆಗ ಬ್ರಾಹ್ಮಣ ಎಂಬ ಹೆಸರಿಲ್ಲದ ಬ್ರಾಹ್ಮಣ, ವರ್ಣಾಶ್ರಮದ ಹೆಸರಿಲ್ಲದ ವರ್ಣಾಶ್ರಮವನ್ನು ಒಪ್ಪಿಕೊಂಡ ಸಮಾಜ ಬರುತ್ತದೆ ಆಗ ಈಗಿನ ಆಲ್ ಆರ್ ಈಕ್ವಲ್ ಫಾರ್ ಆಲ್ ಪರ್ಪಸಸ್ ಎಂಬುದು ಗುರಿಯಾಗಿ ನಿಂತು ಮ್ಯಾನ್-ಈಸ್ ಈಕ್ವಲ್ ಟು ಮ್ಯಾನ್ ಇನ್ ಸ್ಪಿರಿಟ್ ಓನ್ಲಿ ಎಂಬ ಅದ್ವೈತತತ್ವ ಜಗತ್ತಿನ ಮುಂದೆ ನಿಲ್ಲುತ್ತದೆ. Fundamentally equal and functionally different ಎಂಬ ತತ್ವದ ಮೇಲೆ ಭೇದ–ಅಭೇದವನ್ನು ಒಪ್ಪಿಕೊಂಡು ಸಮಾಜ ಪುನರ್ರಚನೆಯಾಗುತ್ತದೆ. ಆದರೆ ಅದೆಲ್ಲಾ ವೀರವಸಂತರಾಯ

ಬಂದಾಗ. ಬೆಳಗಿನ ಹೊತ್ತು ಮಾತಿನಲ್ಲಿ ಬಿದ್ದರೆ ದಿನದ ಕೆಲಸವೆಲ್ಲ ಕೇಡು. ಅದರಿಂದ ಇನ್ನುಮುಂದೆ ಆಮಾತು ಬೇಡ, ಸದ್ಯದ್ದು ಹೇಳು."

ಎಲ್ಲರೂ ತಾತಯ್ಯನವರ ಭವಿಷ್ಯವಾಣಿ ಕೇಳಿ ಆಶ್ಚರ್ಯಪರವಶ ವಾಗಿದ್ದರು. ನರಸಿಂಹಯ್ಯನೇ ಮೊದಲು ಮಾತನಾಡಿದ :

" ಅದೇ ಸಾರ್ ವಿವೇಕಾನಂದ ಸಂಘದ ಆರಂಭ ಭಾಷಣ "

" ಇವರೇನೋ ಕೇಳೋಕೆ ಬಂದಿರೋರು. ನಿಮ್ಮ ಹೆಸರು ಶಂಭುರಾಮಯ್ಯನವರಲ್ಲವೆ ? ಕೇಳಿ, ದೇವರು, ನೀವು ನಮ್ಮ ನರಸಿಂಹಯ್ಯನಿಗೆ ಒಂದು ಬೈಸ್ಕಲ್ ತೆಗೆದುಕೊಡಬೇಕು. ಅವನಿಗೆ ಈ ವರ್ಷದ ಫೀಸೆಲ್ಲಾ ಕೊಟ್ಟುಬಿಡಬೇಕು. ಇಷ್ಟಕ್ಕೆ ಒಪ್ಪಿದರೆ ನಾನು ಬರುತ್ತೀನಿ. ಒಬ್ಬರನ್ನೊಬ್ಬರು ಎಕ್ಸ್‌ಪ್ಲಾಯಿಟ್ ಮಾಡೋಕೆ, ಬಿಟ್ಟಿ ಹಿಡಿದು ದುಡಿಸೋಕೆ ಒಂದು ಸಂಘ ಕಟ್ಟಿದರೆ ನಾನು ಬರೋದಿಲ್ಲ."

" ಆಗಬಹುದು ಸ್ವಾಮಿ."

ಮಲ್ಲಣ್ಣ ಶಂಭುರಾಮಯ್ಯ ಇಬ್ಬರೂ ಮೊಕ ಮೊಕ ನೋಡಿಕೊಂಡು ಒಪ್ಪಿಕೊಂಡರು.

" ನಮ್ಮ ಖಾವಂದ್‌ರು ಬಂದಾಗ ತಾವೊಂದು ಸಲ ಬರಬೇಕು ಬುದ್ಧಿ."

" ನಿಮ್ಮ ಖಾವಂದ್‌ರು ಯಾರು ರಾವ್ ಬಹದ್ದೂರ್‌ರೋ ?"

" ಹೌದು ಬುದ್ಧಿ."

" ತಮ್ಮ ಹೆಸರೇನು ದೇವರು ?"

" ಮಲ್ಲಣ್ಣ "

" ಇವರು ತತ್ವ ಬಹಳ ಚೆನ್ನಾಗಿ ಹೇಳುತಾರೆ ಸಾರ್."

" ಹೂಂ. ಒಂದು ದಿವಸ ಕೇಳೋಣ. ನೋಡಿ ದೇವರು, ಕೋಪ ಮಾಡಿಕೊಳ್ಳಬೇಡಿ. ರಸ್ತೆಯ ಮಗ್ಗುಲಲ್ಲಿ ಒಂದು ನಾಯಿ ಸತ್ತು ಬಿದ್ದಿದ್ದರೆ ಹೇಳಿ. ಅದನ್ನು ಸರಿಯಾಗಿ ದರ್ಶನಮಾಡಿಸೋಕೆ ನಮಗೆ ಪುರಸೊತ್ತಿದೆ. ಈ ಲಕ್ಷಾಧೀಶ್ವರರ ದರ್ಶನಕ್ಕೆ ನಮಗೆ ಪುರಸೊತ್ತಿಲ್ಲ. ಬೇಕಾದ್ರೆ ಅವರು ದಿವಾನರ ದರ್ಶನಕ್ಕೆ ಹೋಗೋಲ್ಲವೆ ?

ಮಹಾರಾಜರ ದರ್ಶನಕ್ಕೆ ಕಾದಿರೋಲ್ಲವೆ? ಅವರಿಗಿಂತ ನಾನು ಕಡಿಮೆಯಲ್ಲ. ರಾವ್ ಬಹದ್ದೂರ್ ಇಲ್ಲಿಗೆ ಬಂದು ನೋಡಿಕೊಂಡು ದರ್ಶನಕೊಟ್ಟು ಹೋದರೆ, ನಮಗೆ ಗೌರವ, ಸಂತೋಷ. ಅದಿಲ್ಲದೆ ನಾವು ಬಂದರೆ 'ಸರಿ, ತಾತಯ್ಯನಿಗೆ ಅರಿವು ಮರುಳಾಯಿತು : ಹೊರಟ ಲಕ್ಷ್ಮೀಪೂಜೆಗೆ,' ಎನ್ನುತ್ತಾರೆ. ಕೊನೆಯ ಕಾಲದಲ್ಲಿ ಆ ಕೀರ್ತಿ ನಮಗೆ ಬೇಕಾಗಿಲ್ಲ. ಏನಂತೀಯೋ ನರಸಿಂಹಯ್ಯ!"

ನರಸಿಂಹಯ್ಯನಿಗೆ ಆ ಮಾತು ಕೇಳಿ ಕಣ್ಣಲ್ಲಿ ನೀರು ಬಂದಿತ್ತು.

"ಈ ಮಾತು ಒಂದು ಸಾಕು ಸಾರ್. ತಮ್ಮನ್ನು ಅಜರಾಮರರನ್ನು ಮಾಡೋಕೆ."

"ಇದಕ್ಕೇ ನಿನ್ನ ಹುಚ್ಚುಮುಂಡೆ ಅನ್ನೋದು. ಟೆನ್ನಿಸನ್ ಏನು ಹೇಳಿದ ಮರೆತೆಯಾ? ಅಜರನಂತೆ ಅಮರನಂತೆ! ಹುಟ್ಟಿದ ಎಲೆಯೆಲ್ಲಾ ಹಣ್ಣಾಗಬೇಕು: ಉದುರಬೇಕು ಇದು ಪ್ರಕೃತಿಯ ನಿಯಮ. ಅಜರ ಎಂದೆ. ಆಗಲೇ ಹಲ್ಲು ಉದುರಿದೆ: ಮೊಕ ಸುಕ್ಕು ಬಿದ್ದಿದೆ: ತಲೆಯಲ್ಲಿ ಕೂದಲೂ ಉದುರಿ ಹೋಗಿದೆ. ಇನ್ನು ಅಮರ! ಯಾವತ್ತೋ ಒಂದು ಸಲ ಈ ಓವರ್‌ವರ್ಕ್‌ನಿಂದ ಹಾರ್ಟ್ ಅಫೆಕ್ಟ್ ಆಗಿ ಈ ಜೀವ ಗೊಟಕ್ ಎನ್ನುತ್ತದೆ. ಪೇಪರುಗಳಲ್ಲಿ ಒಂದಿಷ್ಟು ಬರೀತಾರೆ : ಯಾರೋ ಒಬ್ಬಿಬ್ಬರು ಮೀಟಿಂಗ್ ಮಾಡ್ತಾರೆ : ಇನ್ನೊಂದಿಬ್ಬರು ನನ್ನದೊಂದು ಫೋಟೋ ಹಾಕಿಕೊಂಡು ಅಯ್ಯೋ ಎನ್ನುತ್ತಾರೆ. ಎಲ್ಲಾ ಮುಗಿಯುತ್ತದೆ. ಅಕೋ, ಒಂಭತ್ತೂವರೆ ಆಯಿತು. ಇನ್ನು ಏಳೋಣೋ?"

"ಯಾವೊತ್ತು, ಸಾರ್?"

"ಇದಕ್ಕೇ ನಿನ್ನ ಫೂಲ್ ಅನ್ನೋದು. ಯಾವೊತ್ತೋ ನಿಮಗೆ ಬೇಕಾದದಿನ ಬಂದು ಕರೆದುಕೊಂಡು ಹೋದ. ಅದಕ್ಕೇನು ಹನುಮಂತರಾಯನ ಗುಡೀಗೆ ಹೋಗಿ ಪ್ರಶ್ನೆ ಕೇಳಿಬರಬೇಕೇ! ಶಂಭುರಾಮಯ್ಯನವರೇ, ನರಸಿಂಹಯ್ಯ ನಮ್ಮ ಹುಡುಗ, ಅದಕ್ಕೇ ಅಭಿಮಾನವಾಗಿ ನಾನು ಹುಚ್ಚುಮುಂಡೆ, ಫೂಲ್, ಎಂದರೆ, ಅವನು ಅಯೋಗ್ಯ ಎಂದು ಕೊಂಡೀರಿ. ಅವನು ದೇವರಂಥವನು? ನೀವು ಅವನನ್ನು ಹಾಗೆ ಭಾವಿಸಿಯೇ ಕರೆಯಬೇಕು. ತಿಳೀತೋ?"

" ಅಪ್ಪಣೆ ಸಾರ್ !"

" ಏನು ಮಲ್ಲಣ್ಣನವರೆ, ನನ್ನಮಾತು ನಿಮ್ಮ ಅಭಿಮಾನಕ್ಕೆ ಕೊಡಲಿಪೆಟ್ಟು ಆಯಿತೇನೋ ? ಮೊಕ ಪೆಚ್ಚು ಮಾಡಿಕೊಂಡು ಕೂತಿದ್ದೀರಿ ? ಆಗಲಿ, ನಿಮಗೂ ಸಂತೋಷವಾಗಲಿ. ಬರುತ್ತೇನೆ, ನಿಮ್ಮ ರಾವ್ ಬಹದ್ದೂರ್‌ರು ನಮಗೆ ಗೊತ್ತಿಲ್ಲದವರಲ್ಲ. ಅವರನ್ನು ಕೌನ್ಸಿಲ್ಲಿಗೆ ನಾಮನೇಟ್ ಮಾಡಿದ್ದಾರೆ. ಅಲ್ಲಿ ನಾವಿಬ್ಬರೂ ಸೇರುತ್ತೇವೆ. ಅವರೂ ನಾವೂ ಕೌರವ ಪಾಂಡವರ ಹಾಗೆ ಅಷ್ಟೆ ! ಆಗಲಿ. ಯಾವಾಗಲಾದರೂ ಬಂದು ಕರೆದುಕೊಂಡು ಹೋಗಿ, ಬರುತ್ತೇನೆ. ಇನ್ನು ಏಳೋಣವೋ ?"

" ತಾವು ಹೋಗಿ ಗಾಡಿಕಳುಹಿಸಿಕೊಡಿ ಸಾರ್, ನಾವು ಹೋಗುತ್ತೇವೆ."

" ನೆಸೆಸ್ಸಿಟಿ ನೋಸ್ ನೋಲಾ : ನಮಗೆ ಅವಸರ, ಹಾಗೇ ಆಗಲಿ."

## ೩೧

ನಾಯಕನಿಗೆ ಇಂದು ಹೊಸತಲೆನೋವು ಬಂದಿದೆ. ಅವನು ಇದುವರೆಗೆ ಮಾದೇಗೌಡನ ಹತ್ತಿರ ಮೊಕಕೊಟ್ಟು ಮಾತನಾಡಿಲ್ಲ. ಇವೊತ್ತು ಮಾತನಾಡದಿದ್ದರೆ ಯತ್ನವಿಲ್ಲ, ಅವನು ಸಮೀಪ ಬಂಧು ಆದರೂ ಅವನ ಮನೆಗೆ ತಾನು ಹೋಗುವುದು ಇಷ್ಟವಿಲ್ಲ. ಕರೆದರೆ ಅವನು ಬರುವನೋ ಇಲ್ಲವೋ ? ಈಚೆಗೆ ದಿವಾನರ ಬಳಿ ಡೆಪ್ಯುಟೇಷನ್ ಹೋಗಿ ಬಂದಿದ್ದಾನೆ. ಆ ಡೆಪ್ಯುಟೇಷನ್‌ನಲ್ಲಿ ತನ್ನನ್ನು ಸೇರಿಸಿ ಕೊಳ್ಳಲಿಲ್ಲ ಎಂದು ನಾಯಕನಿಗೆ ಒಳಗೆ ಕೋಪವೂ ಇದೆ : ಸಾಲದೆ, ಹೋಗಿ ಬಂದವನು ಏನಾಯಿತು ಎಂದು ಹೇಳಬೇಡವೆ ? ಹಾಗೆ ಹೇಳದಿದ್ದರೆ ತನ್ನ ಘನತೆಗೆ ಕುಂದಲ್ಲವೇ ? ಎಂದು ಅದು ಒಂದು ಸಂಕಟ. ಈ

ಸಂಕಟಗಳನ್ನೆಲ್ಲ ಬದಿಗೆ ತಳ್ಳಿ, ಕೋಪವನ್ನೂ ತುಳಿದು ಹೇಳಿ ಕಳುಹಿಸಿ ದರೆ ಬರದೇ ಹೋದರೆ? ಏನುಗತಿ ? ಬಂದರೆ, ಅವನನ್ನು ಎಲ್ಲಿ ಕುಳ್ಳಿರಿಸಿ ಮಾತನಾಡಬೇಕು ? ಮೊದಲನೆ ತೊಟ್ಟಿಯಲ್ಲಿ ಮಾತನಾಡಿ ಸಿದರೆ ಅವನಿಗೆ ಅಪಮಾನ. ಎರಡನೆಯ ತೊಟ್ಟಿಗೆ ಕರೆಯುವುದಕ್ಕೆ ಇಷ್ಟವಿಲ್ಲ. ಏನು ಮಾಡಬೇಕು ?

ಒಂದುದಿನವೆಲ್ಲ ಯೋಚಿಸಿದ: ಮತ್ತೊಬ್ಬರ ಬಳಿ ಸಲಹೆ ಕೇಳುವಹಾಗಿಲ್ಲ. ಅದಿಲ್ಲದೆ, ನಾಯಕನ ಲೋಕಾನುಭವ ಒಂದು ಬುದ್ಧಿ ಕಲಿಸಿತ್ತು. ಶ್ರೀಮಂತರು ಯಾರನ್ನಾದರೂ ಸಲಹೆ ಕೇಳಿದರೆ, ಲೋಕದಲ್ಲಿ ಯಾರೇ ಆಗಲಿ, ಶ್ರೀಮಂತರ ಮನಸ್ಸಿಗೆ ಸರಿಯಾಗಿ ಹೇಳು ವರಲ್ಲದೆ, ಕರ್ತವ್ಯವನ್ನು ಕುರಿತು ಹೇಳುವುದಿಲ್ಲ. ಅದೇ ಸೊಗಸು. ಶ್ರೀಮಂತನು ಬೇವಿನ ಮರದ ಮುಂದೆ ನಿಂತು, ಇದೇನು ತೆಂಗಿನಮರ ಕವಲು ಬಿಟ್ಟಿದೆ ? ಎಂದರೆ, ಸುತ್ತಲೂ ಇದ್ದವರು, ಹಂಗೇ ಕಾಣ್ತದೆ ಅನ್ನುವರು ಕೆಲವರು : ಹೌದು. ಏನೋ ಆಗಿ, ತೆಂಗಿನಮರ ಕವಲು ಬಿಟ್ಟಿದೆ, ಎಂದು ಒಪ್ಪಿಕೊಂಡು, ನೋಡಿ, ಗರಿಗಳು ಕೊಂಬೆಗಳಾದಾಗ ಸಣ್ಣಗರಿಗಳು ಅದಕ್ಕೆ ತಕ್ಕಂತೆ ಚಿಕ್ಕಚಿಕ್ಕವಾಗಿವೆಯಲ್ಲ : ದೈವವಿಲಾಸ! ಯಾರು ಬಲ್ಲರು ? ಯಾವ ಕಾಲಕ್ಕೇನೋ ? ಎಂದು ಕಲಿಯದ, ಕೇಳದ, ತಿಳಿಯದ, ವೇದಾಂತವನ್ನೆಲ್ಲ ನುಡಿದು, ಅದು ಸತ್ಯ ಎನ್ನು ವುದಕ್ಕೆ, ಆ ಸತ್ಯವನ್ನು ತಾವು ಬಲ್ಲೆವು ಎನ್ನುವುದಕ್ಕೆ ಎಷ್ಟುಬೇಕೋ ಅಷ್ಟು ಹೇಳುವವರೇ ಹೆಚ್ಚು ; ಅದರಿಂದ, ನಾಯಕನು ಒಬ್ಬರನ್ನೂ ಸಲಹೆ ಕೇಳುತ್ತಿರಲಿಲ್ಲ. ಯಾವ ಕೆಲಸಮಾಡಬೇಕಾದರೂ ದೀರ್ಘವಾಗಿ ಯೋಚಿಸುವನು. ಪುರಾಣಗಳಲ್ಲಿ ಯಾವುದಾದರೂ ಘಟ್ಟವನ್ನು ನೆನೆದು ಕೊಳ್ಳುವನು : ಅಲ್ಲಿನ ಹಿರಿಯರು ಏನು ಮಾಡಿರುವರು ಎಂಬುದನ್ನು ಯೋಚಿಸಿ ಅದನ್ನು ಸಂದರ್ಭಕ್ಕೆ ಹೊಂದಿಸಿಕೊಂಡು ನಡೆಯುವನು : ಸಾಮಾನ್ಯವಾಗಿ ನೂರಕ್ಕೆ ತೊಂಭತ್ತರಲ್ಲಿ ಗೆಲ್ಲುವನು. ಅದು ಅವನಿಗೆ ವಾಡಿಕೆಯಾಗಿತ್ತು. ಆತನ ದೃಷ್ಟಿಯಲ್ಲಿ ಶ್ರೀಮಂತಿಕೆ ಸೌಭಾಗ್ಯ ಮಾತ್ರ ವಲ್ಲ ; ತೆಂಗಿನಮರ ಹತ್ತಿ ಕೂತವನ ಹಾಗೆ : ಬೇಕೆಂದರೂ ಮೆಲ್ಲಗೆ ಇಳಿಯಬೇಕೇ ಹೊರತು ಧುಮುಕುವಂತಿಲ್ಲ. ಮೇಲೆ ಕುಳಿತಿರುವಾಗ

ಭದ್ರವಾಗಿಯೇ ಇದ್ದರೂ ಮೈಮರೆಯುವಂತಿಲ್ಲ.

ಈಗಲೂ ಕುಳಿತು ಒಂದು ದಿನ ಯೋಚಿಸಿದನು : ಇದು ಕೃಷ್ಣ ಕಲಹವಾಡದ ಹಾಗೆ ಕರ್ಣನ ಕಿವಿ ಕಚ್ಚಿ ಕೌರವಕುಲವ ಕೊಂದಂತೆ ಮಾಡಬೇಕು ಎಂದು ನಿಶ್ಚಯಿಸಿಕೊಂಡು, ತನಗೆ ಬೇಡವಾದವನು ಎಂಬುದನ್ನೂ ಗಮನಿಸದೆ, ಅವನ ಮನೆಗೆ ಹೋಗಿ ತಾನೇ ಕರೆಯ ಬೇಕು ಎಂದು ಗೊತ್ತುಮಾಡಿಕೊಂಡು, ಆ ಸಿದ್ಧಾಂತವನ್ನು ಪುನರ್ವಿಮರ್ಶೆ ಮಾಡಿದನು. ಹಲವು ತೆರದಿಂದ ಅದು ಸರಿಯೆಂದಾಯಿತು. ತಲೇನೋವು ಅರ್ಧ ಬಿಟ್ಟಿತು.

ಮಾದೇಗೌಡನು ಸುಮಾರು ಮೂವತ್ತು ಮೂವತ್ತೈದು ವಯಸ್ಸಿನ ಪ್ರಾಯದವನು. ದೇಹ ಅಷ್ಟು ದೊಡ್ಡದಲ್ಲ : ಎತ್ತರ ಇತ್ತು ಅನ್ನಬೇಕು : ಆದರೂ ಐದೂವರೆ ಅಡಿಗಿಂತ ದೊಡ್ಡದಲ್ಲ : ದಪ್ಪ ಬಹುಶಃ ಗಳುವಿನ ಬೊಂಬೆಯಲ್ಲ, ಬಿದಿರಿನ ಬೊಂಬೆ ಯೆನ್ನಿಸಿ ಕೊಳ್ಳುವಷ್ಟು : ತೂಕ ಸುಮಾರು ನೂರು – ಅಥವಾ ನೂರು ಹತ್ತು ಪೌಂಡು ಇರಬಹುದು. ಆರಡಿ ಎತ್ತರದ ನೂರೆಂಭತ್ತು ಪೌಂಡಿನ ನಾಯಕನ ಮಗ್ಗುಲಲ್ಲಿ ಅವನು ನಿಂತರೆ, ಅಂಗಡಿಗಳಲ್ಲಿ ಹಾಕಿರುವ I sold on credit : I sold on cash ಬೊಂಬೆಗಳಂತಿರುವುದು.

ಸುಮಾರು ಆರುಗಂಟೆ ಇರಬಹುದು : ನಾಯಕನ ಕುದುರೆ ಮಾದೇಗೌಡನ ಮನೆಯ ಬಾಗಿಲಲ್ಲಿ ನಿಂತಿತು. ಬಾಗಿಲು ತೆಗೆದಿತ್ತು : ಆಳು ದನದ ಕೊಟ್ಟಗೆಯನ್ನು ಗುಡಿಸುತ್ತಿದ್ದಾನೆ. ನಾಯಕನು ಕುದುರೆಯ ಮೇಲೆ ಕುಳಿತು, "ಇದಾರಾ ಅಯ್ಯಾ ನಿಮ್ಮ ಗೌಡರು ?" ಎಂದು ಕೇಳಿದನು. ಆಳಿಗೆ ನಂಬಿಕೆಯೇ ಇಲ್ಲ : ನೋಡಿದರೂ ತನ್ನ ಕಣ್ಣು ನಂಬ : ನಾಯಕರು ಬಂದಿರುವರು ಎಂದು ನಂಬುವುದಕ್ಕೆ ಅಷ್ಟು ಹೊತ್ತು ಹಿಡಿಯಿತು. ಆಳು "ಗದ್ದೇ ಕಡೇ ಓಗವ್ರೆ ಬುದ್ಧಿ" ಎಂದು ಕೈಮುಗಿದನು. ನಾಯಕನಿಗೇನು ಊರವರಿಗೆಲ್ಲಾ ಗೊತ್ತು : ಮಾದೇಗೌಡನು ಎಂಟು ಗಂಟೆಗೆ ಏಳುವುದು ಎಂದು. ಆದರೂ ಮನೆ ಮಂದಿಯೆಲ್ಲ ಅವನು ಏಳುವುದಕ್ಕೆ ಮುಂಚೆ ಯಾರಾದರೂ ಬಂದರೆ

"ಗದ್ದೇಕಡೆ ಹೋಗವ್ರೆ ಬುದ್ಧಿ" ಅನ್ನುವರು. ಮಜ್ಜಿಗೆ ಹಳ್ಳಿಯಲ್ಲಿ "ಗದ್ದೇಕಡೇ ಹೋಗವ್ರೆ" ಎಂದರೆ, ಇನ್ನೂ ಹಾಸುಗೆ ಬಿಟ್ಟು ಎದ್ದಿಲ್ಲ ಎನ್ನುವುದರ ಪರ್ಯಾಯ ಎಂದಾಗಿತ್ತು.

ನಾಯಕನಿಗೆ ಬೇಕಾಗಿದ್ದುದೂ ಅಷ್ಟೇ! ತಾನು ಬಂದಿದ್ದೆ ಎಂದಾಗಬೇಕು: ಯತ್ನವಿಲ್ಲದೆ ಅವನು ತಾನಾಗಿ ಬರುವಂತಾಗಬೇಕು ಎಂದೇ ನಾಯಕನು ಅಷ್ಟು ಹೊತ್ತಿಗೇ ಗೌಡನನ್ನು ಹುಡುಕಿಕೊಂಡು ಹೋದುದು. ನಾಯಕನಿಗೆ ಆಳಿನ ಮಾತನ್ನು ಕೇಳಿ ನಗು ಬಂತು: ಆದರೂ ನಗುವನ್ನು ತಡೆದುಕೊಂಡು "ನಾ ಬಂದಿದ್ದೆ ಅನ್ನಯ್ಯಾ! ನಾಷ್ಟಾ ಆದಮೇಲೆ ಗೌಡರನ್ನು ಕಾಯ್ಕೊಂಡಿರುತೀನಿ ಅಂತ ಹೇಳು. ಎಲ್ಲರೂ ಚನ್ನಾಗವ್ರಾ ಗೌಡರ ಮನೆಯಲ್ಲಿ?" ಎಂದು ಹೇಳಿ. ಕೇಳಿ, ವಿಚಾರಿಸಿಕೊಂಡು ಮುಂದೆ ಬಂದನು.

ಆಳು "ಇದೇನು ಬುದ್ದಿಯೋರು ಬಂದಿದ್ದು ಯಾವತ್ತೂ ಇಲ್ಲವಲ್ಲ!" ಎಂದು ಆಶ್ಚರ್ಯಮಗ್ನನಾಗಿ, ಹೋದನು.

ಸುಮಾರು ಎಂಟುಗಂಟೆಗೆ ಗೌಡನು ಎದ್ದನು. ಅವನು ಎದ್ದ ಕೂಡಲೇ ಗಂಟೆಯಾಗುವುದು. ಆಳು ಬಿಸಿ ಬಿಸಿ ಟೀ ತೆಗೆದುಕೊಂಡು ಹೋಗಿ ಹಾಸಿಗೆಯ ಮೇಲೆ ಕೊಡಬೇಕು. ಗೌಡನು ಟೀ ಆದಮೇಲೆ ಎದ್ದು ಕಾಲುಗಂಟೆ ಮೊಕ ತೊಳೆದುಕೊಂಡು ಬರುವನು. ಆಮೇಲೆ ನಾಷ್ಟಾ. ಅದಾದ ಮೇಲೆ ಒಂದು ಎರಡು ಮೂರು ಸಿಗರೇಟ್: ಜೊತೆಗೆ ಏನೋ ಔಷದಿ. ಅದನ್ನು ಕುಡಿದರೆ ಮೊಕ ಕೆಂಪಾಗುವುದು: ಕಣ್ಣು ಕೊಂಚ ಕಿರಿಗಣ್ಣು ಬೀಳುವುದು. ಆ ಸೊಂಪಿನ ಭಾವದಲ್ಲಿ ಎಳೆ ಬಿಸಿಲು ಬಲಿಯುತ್ತಿರುವಾಗ, ಇಷ್ಟವಿದ್ದರೆ, ಗೌಡನು ಹೋಗಿ ಹೊಲ ಗದ್ದೆ ನೋಡಿ ಬರುವನು.

ಈ ದಿನ ಎದ್ದು ನಾಷ್ಟಾ ಮಾಡುತ್ತಿದ್ದಾಗ ಗೌಡನಿಗೆ ನಾಯಕನು ತಾನಾಗಿ ಬಂದು ಬರಹೇಳಿ ಹೋದುದು ತಿಳಿಯಿತು. ಅವನಿಗೆ ಆಶ್ಚರ್ಯ: ಸಂತೋಷ. ನಾಯಕನಂಥವನೂ ತನ್ನ ಮನೆಯ ಬಾಗಿಲಿಗೆ ಅಲೆಯಬೇಕು; ಹಾಗೆ ಮಾಡಿಕೊಳ್ಳಬೇಕೆಂದಿದ್ದ ತನ್ನ ಆಶೆ ನೆರವೇರಿತೆಂಬ ಸಂತೋಷ – ನಾಯಕನು ತಾನೇ ಬಂದನೇ! ಎಂದು ಆಶ್ಚರ್ಯ.

ಅಂತೂ ಹೋಗಬೇಕು – ನೋಡಿಕೊಂಡು ಬರಬೇಕು ಎನ್ನಿಸಿತು.

ಸುಮಾರು ಒಂಭತ್ತೂವರೆ ಗಂಟೆಯಿರಬಹುದು. ಗೌಡನು ನಾಯಕನನ್ನು ಕಾಣಲು ಬಂದನು. ಮನೆವಾರ್ತೆ ನಂಜಪ್ಪನು ಗೌಡನನ್ನು ಕರೆದುಕೊಂಡು ಹೋಗಿ ಎರಡನೆಯ ತೊಟ್ಟಿಯ ದಿವಾನಖಾನೆಯಲ್ಲಿ ಕೂರಿಸಿದನು, ಗೌಡನಿಗೆ ಅಭಿಮಾನಕ್ಕೆ ತೃಪ್ತಿಯಾಯಿತು. "ಪರವಾಯಿಲ್ಲ. ನಾಯಕ ನಮ್ಮ ಅಂತಸ್ತಿಗೆ ತಕ್ಕಂತೆ ನಡೆದವನೆ" ಎನ್ನಿಸಿತು. ನಿರಾಳವಾಗಿ ಕುಳಿತನು.

ನಾಯಕನು ಕೊಂಚ ಹೊತ್ತಿನಲ್ಲಿ ಬಂದನು: "ಏನು ಪಟೇಲರಿಗೆ ನಾಷ್ಟಾ ಆಯಿತಾ ?" ಎನ್ನುತ್ತಲೇ ಒಳಗೆ ಬಂದನು: ಅವನ ಹಿಂದೆಯೇ ಆಳು ಬಂದು ಮಾಂಸದ ತಿಂಡಿಯನ್ನು ತಂದು ಇಟ್ಟನು.

ಗೌಡನು ನಾಯಕನು ಬಂದರೆ ಕುಳಿತೇ ಮಾತನಾಡಬೇಕೆಂದು ಇದ್ದನು: ಆದರೆ ಏಕೋ ಏನೋ ಅವನು ಬರುತ್ತಿದ್ದ ಹಾಗೆಯೇ ಎದ್ದು ನಿಂತನು. ಅವನು ಕುಳಿತುಕೊಂಡಮೇಲೆ ಕುಳಿತುಕೊಂಡನು. ಇಬ್ಬರೂ ತಿಂಡಿ ತಿಂದು, ಕುಡಿದು ಅಡಕೆಲೆಯನ್ನು ಹಾಕಿಕೊಳ್ಳುತ್ತಾ ಮಾತನಾಡಿದರು:

ನಾಯಕನೇ ಮೊದಲು ಕೇಳಿದನು:

"ಅದೇನು ನೀವೆಲ್ಲ ದಿವಾನರ ಹತ್ತಿರಕ್ಕೆ ಹೋಗಿದ್ದರಂತಲ್ಲ !"

"ಅದಾ ! ನಾನು ಮೊನ್ನೆಯೇ ಬಂದು ಎಲ್ಲಾ ತಮ್ಮ ಹತ್ರ ಹೇಳಬೇಕು ಅಂತಿದ್ದೆ. ಏನೋ ಆಗ್ನಿಲ್ಲ. ಅದು ಇಷ್ಟೇ ! ಲೋಕ ಎಲ್ಲಾ ಬದಲಾಯಿತಾ ಅದೆ. ಅದರಲ್ಲಿ ತಮ್ಮ ಒಕ್ಕಲಮಕ್ಕಳು: ರಾಜ್ಯದಲ್ಲಿ ಇರೀನಿಂದಿಡಿದು ರಾಜ್ಯ ಆಳೋ ಮಹಾರಾಜರವರೆಗೆ ಎಲ್ಲರಿಗೂ ಅನ್ನ ಹಾಕೋರು: ಬೆವರು ಸುರಿದು ಬದುಕೋರು: ನಮಗೆ ಸರಕಾರದಲ್ಲಿ ಯಾಕೆ ದೊಡ್ಡ ದೊಡ್ಡ ಹುದ್ದೆ ಕೊಡೋಕಿಲ್ಲ ಅಂತ ಕೇಳೋಕೆ."

"ಅವರೇನಂದ್ರು ?"

"ನೀವೇಳೋ ಮಾತು ಸರಿಯಾಗಿದೆ. ಆದರೆ, ಈಗ ತಾನೇ ಯೂನಿವರ್ಸಿಟಿ ಮಾಡಿದ್ದೀವಿ, ಇದ್ಯಾವಂತರು ಬರಲಿ. ಅವರಿಗೆ

ತಪ್ಪದೆ ಚಾಕರಿ ಕೊಡಿಸಿತೀವಿ, ಅಂದರು."

"ಅಲ್ಲಾ ಅದೇನು ಎಲ್ಲಾ ಬಿಟ್ಟು ಚಾಕರಿ ಕೇಳೋಕೆ ಹೋಗಿದ್ರಿ? ಏನೋ ಗತಿಯಿಲ್ದೆ ಪುಸ್ತಕ ಇಡಿದಿರೋ ಈ ಹಾರುವರ ಹೈಕಳ್ಗೆ ಹೊಟ್ಟೆಗಿಲ್ಲ: ಅವರಿಗೆ ಚಾಕರಿ ಬೇಕೂ ಅನ್ನೋದು ಏನೋ ಸರಿ. ಅದೇಕೆ ನಮ್ಮ ಮಕ್ಕಳ್ಗೂ ಅದೇ ಗತಿ ಬಂತಾ!"

ಗೌಡನು ಒಂದು ಗಳಿಗೆ ಸುಮ್ಮನಿದ್ದನು. ಧೈರ್ಯ ಮಾಡಿ ಹೇಳಿದನು: "ಬುದ್ಧಿಯೋರ ತಾವು ಈ ಮಾತು ಹೋದವರ್ಷಾನೆ ಬರಬೇಕಾಗಿತ್ತು. ಇದು ಹೊಟ್ಟೆಗದೆ ಇಲ್ಲ ಅನ್ನೋ ಮಾತಲ್ಲ: ಅಧಿಕಾರದ ಮಾತು. ಮೊನ್ನೆ ನೀವು ಅಮಲ್ದಾರ್ ಚೆನ್ನೇಗೌಡರು ಬಂದಾಗ ನಮ್ಮೋರು ಅಂತಲ್ವಾ ಅಷ್ಟು ಮರ್ಯಾದೆ ಮಾಡಿದ್ದು? ಅಂಗೇ ಅವರೇ ರೆವಿನ್ಯೂ ಕಮೀಷನ್ನರೋ ಕೌನ್ಸಿಲ್ಲರೋ ಆದರೆ? ನೋಡಿ ಕಿರಸ್ತಾನರು, ತುರುಕರು, ಅವರೆಲ್ಲ ಕೌನ್ಸಿಲ್ಲರಾದರು: ನಮ್ಮೋರು ಒಂದು ಇಬ್ಬರಾದರೂ ಆಗಲಿ· ಅದೇನು? ಮಿಕ್ಕೋರಿಗೆಲ್ಲ ತಲೆಮೇಲೆ ಕೊಂಬಿರೋದು? ನಮಗಿಲ್ಲದಿರೋದು? ಕೋಟಿ ರೂಪಾಯಿ ಕಂದಾಯ ಕಟ್ಟೋ ಜನ ಅಲ್ವಾ ನಾವು? ಏನೂ ಕಂದಾಯ ಕೌಳಿ ಕೊಡದೋರಲ್ಲ ದೊಡ್ಡ ದೊಡ್ಡ ಹುದ್ದೇಗೆ ಬರಬೋದು? ನಮ್ಮೋರು ಯಾಕೆ ಕೂಡದು? ಈಗ ತಾವು ಮೇಲಿನ ಮನೆಗೆ ಮೆಂಬರಾದಿರಿ. ಸರಕಾರದೋರೆ ತಮ್ಮನ್ನು ಆರಿಸಿಕೊಂಡರು. ಈಗ ತಾವು ಯಾರಿಗೇನು ಕಡಿಮೆಯಾಗಿರೋದು? ಈಗ ತಮಗೆ ನೆಂಬರುದಾರ್ರು ಆಗೋಕೆ ಮುಂಚೆ ಇಂಗ್ಲೀಷ್ ಬರುತ್ತಿತ್ತಾ? ಈಗ ಕಲಿತಿಲ್ಲವಾ? ಅಂಗೇ, ನಮಗೆ ಬರದಿದ್ದರೆ ಕಲೀತೀವಿ."

ನಾಯಕನು ನಕ್ಕುಬಿಟ್ಟನು. ಅವನ ನಗು ಕೇಳಿ ಗೌಡನಿಗೆ ತಬ್ಬಿಬ್ಬಾಯಿತು. ನಾಯಕನು ಹೇಳಿದನು: "ಪಟೇಲರೆ, ನಾನೂ ಏನು ಮಹಾ ಮೆಂಬರುತನ ಎಂದಿದ್ದೆ. ಮೊದಮೊದಲು ಆ ರೂಲ್ಸು, ಅದು ತಲೆನೋಯುತ್ತಿತ್ತು. ಈಗ ಅದೆಲ್ಲಾ ನೋಡಿಗೊಂಡಿವ್ನಿ. ಆದರೆ ಬಜೆಟ್‌ನಲ್ಲಿ ನಾವು ಮಾತಾಡೋಕಾಯ್ತದೆ ಅಂತೀರಾ? ಆ ದಾವಣಗೆರೆ ನಂಜುಂಡಯ್ಯನವರು, ಕಾಫಿಪ್ಲಾಂಟರು ವಾಸುದೇವ

ರಾಯರು, ಆ ಜಡೆಯೋರು, ಮೈಸೂರಿನ ತಾತಯ್ಯನವರು ಈ ಹುಲಿಗಳ ಮುಂದೆ, ನಾವೆಷ್ಟರವರು ? ನಾವು ಈ ಇಲ್ಲದ ಪೀಕಲಾಟ ತಂದಿಟ್ಕೊಳ್ಳೋದು ನನ್ನ ಮನಸ್ಸಿಗೆ ಹಿಡಿಯೋಕಿಲ್ಲ. ನಮ್ಮ ಆಸ್ತಿ ಪಾಸ್ತಿ ರೂಢಿಸಿಕೊಳ್ಳೋವ. ಈ ಚಾಕರಿ ನೌಕರಿ ಹೊಟ್ಟೆಗಿಲ್ಲದಿದ್ದೋರು ಮಾಡಿಕೊಳ್ಳಿ. ಏನೋ ದೊಡ್ಡ ಹುದ್ದೆ ಎಷ್ಟಿದ್ದಾವು ? ಎಲ್ಲಾ ಚಾಕರಿಗಳೂ ಸಣ್ಣ ಪುಟ್ಟೋವು. ಸುಬೇದಾರಿ ತಾನೇ ಏನು ಮಹಾ! ಏನೋ ಅಲ್ಲಿ ಇಲ್ಲಿ ಕೆರಕೊಂಡು ಕಿತ್ತುಕೊಂಡು ಬಾಳೋದು. ಅದೆಲ್ಲಾ ಬರೀ ಜಂಭ. ನಂಗೇನೋ ಬೇಡಾ ಅಂತದೆ ?"

ಗೌಡ ಅದಕ್ಕೆ ಉತ್ತರ ಹೇಳಲಾರದೆ ರೇಗಿಕೊಂಡು ಮಾತನಾಡಿದ : "ಬುದ್ಧಿಯೋರು ಹಿಂದಲಕಾಲದೋರು. ಈಗಿನೋರ ಬುದ್ಧೀನೇ ತಮಗೆ ತಿಳೀದು. ತಮ್ಮ ಕಾಲದೋರಿಗೆ ಬೇಕಾಗಿದ್ದುದು ಆಸ್ತಿ, ಪಾಸ್ತಿ : ಈಗಿನೋರಿಗೆ ಬೇಕಾದ್ದು ಅಧಿಕಾರ. ಬರೀ ಜಂಭ ಅಂತೀರಿ : ಪರವಾಯಿಲ್ಲ. ಆ ಜಂಭಾನೇ ಬೇಕಾದ್ದು. ಮೊನ್ನೆ ಮೈಸೂರಲ್ಲಿ ನಾವೆಲ್ಲ ಮಾತಾಡಿಕೊಂಡಿದ್ದೀವಿ: ಮಹಾರಾಜರೂ ಕೂಡ, ನಮ್ಮ ಕೈಗೊಂಬೆ ಆಗಬೇಕು. ನಾವು ಹೇಳಿದಂಗೆ ಹೂಂ ಅನ್ನಬೇಕು. ಹಂಗೆ ಮಾಡೋತನಕ ನಾವು ಸುಮ್ಮನಿರೋಕಾದೀತಾ ? ಬರೋ ಸಲ ತಾವು ಎಲೆಕ್ಷನ್‌ಗೆ ನಿಲ್ಲಿ : ಆಗ ತಮಗೇ ತಿಳೀತವೆ. ನಾವೆಲ್ಲ ಮಾತಾಡಿಕೊಂಡಿವಿ. ಇನ್ನು ಮೇಲೆ ನಮ್ಮ ಓಟೆಲ್ಲಾ ನಮ್ಮೋರಿಗೆ. ತಾವೂ ನಮ್ಮ ಕಡೆ ಸೇರಿ ನಮ್ಮಂಗೆ ಮಾತಾಡಬೇಕು ಅಂಗಿದ್ದರೇನೆ ತಮಗೆ ಓಟು."

"ಹಂಗಾದರೆ, ನಮ್ಮ ಓಟೆಲ್ಲ ನೀವೇ ತಕೊಂಡುಬುಡುತೀರಿ ಅನ್ನಿ."

"ಏನು ಮಹಾ ಕಷ್ಟ ಬುದ್ಧಿ. ಒಕ್ಕಲಿಗನ ಮಗನಾದರೆ ಒಕ್ಕಲಿಗನಿಗೇ ಕೊಡು ಅನ್ನೋದು. ಮುಗೀತು."

"ಆಯ್ತು. ಅಲ್ಲಿಗೆ ನೀವೋಗಿ ಮಾಡೋದು ?"

"ಅದೇನು ಮಾಡೋದು ಅನ್ನೋದು ಇಲ್ಲಿಂದ ಯಾಕೆ ? ಈಗ ತಾತಯ್ಯನವರು ಅವರೆಲ್ಲ ಏನು ಮಾಡುತವ್ರೆ ? ಅವರು ಹತ್ತು ಜನ

ಸೇರವ್ರೆ ? ಅವರು ಹೆಂಗೇಳಿದ್ರೆ ಅಂಗೆ ಕೇಳ್ತದೆ ಸರಕಾರ. ಹೆಂಗೇ ನಮ್ಮ ಮಾತು ಕೇಳಲಿ !"

"ಆಗಲಪ್ಪ ! ಹೂಂ ಅನ್ನೋವ. ಸರಕಾರ ಕೇಳದ್ರು ಆಗೇನು ಮಾಡ್ತೀರಿ ? ನಿಮ್ಮೋರಿಗೆಲ್ಲ ಚಾಕರಿ ಕೊಟ್ಟರು. ಆಗ ಏನು ಮಾಡ್ತೀರಿ ?"

"ಮಿಕ್ಕ ಕೋಂನೋರ ಮೇಲೆಲ್ಲ ನಮ್ಮ ಅಧಿಕಾರ ಚಲಾಯಿಸ್ತೀವಿ."

"ಮೈಸೂರಲ್ಲಿ ನಿಮ್ಮ ಕೋಂ ಒಂದೇನೋ ಇರೋದು ? ಮಿಕ್ಕೋರೂ ಅವ್ರೋ ?"

"ಮಿಕ್ಕೋರೂ ಅವ್ರೆ !"

"ಅವರೂ ನಿಮ್ಮಂಗೇ ಮಾಡ್ದ್ರು ?"

ಗೌಡನಿಗೆ ಏನು ಹೇಳಬೇಕೋ ತಿಳೀಲಿಲ್ಲ. ಅದಕ್ಕೆ ಇನ್ನೂ ಅಷ್ಟು ಕೂಗಿ ಹೇಳಿದನು : "ಬುದ್ಧಿ, ನೀವು ಇಂಗ್ಲಿಷ್ ಕಲಿತು ಬೇರೆ ಥರಾ ಆಗೋದ್ರಿ. ನಮ್ಮನ್ನು ಪಲ್ಟೀ ಹೊಡಿಸಬೇಡಿ; ನಮ್ಮಂಗಾಗಿ."

ಇದುವರೆಗೂ ಕಾದಿದ್ದ ನಾಯಕನು ಸಮಯ ನೋಡಿ ಗುಂಡು ಹೊಡೆಯುವ ಬೇಟೆಗಾರನಂತೆ, ಸೆಟೆದುಕೊಂಡು ಕೇಳಿದನು :

"ಅದೇನು ಮೊನ್ನೆ ನಡೆದ ಹೋಟಲಿನ ಪರಸಂಗ ?"

"ಆಂ ! ಯಾವೊತ್ತು ? "

"ಮೈಸೂರಲ್ಲಿ ಕಣಯ್ಯ ! ನೀವೆಲ್ಲ ಹೋಟಲ್ನೋನ್ನ ಮೇಲೆ ಬಿಳಾಕೆ ಹೋಗಿದ್ದರಂತಲ್ಲ ! "

ಗೌಡನು ನಾಯಕರಿಗೆ ಅದು ಗೊತ್ತಾಗಿರಬಹುದು ಅಂದು ಕೊಂಡಿರಲಿಲ್ಲ. ಏನೋ ಸಾರಿಸುವನಂತೆ, "ಅದೇನೋ ! ಬುದ್ಧಿಯವರ ಗಂಟೆ ತಂದ–ಮಗ ಯಾರು ? " ಎಂದು ಬಿಟ್ಟ.

"— ಮಗ ಅಲ್ಲ; ಕಾತಯ್ಯನವರು ಖುದ್ದು ಬರೆಸವ್ರೆ ? ನಂಜಪ್ಪ, ಬಾರಯ್ಯ ಇಲ್ಲಿ. ಗೌಡರಿಗೆ ಸುಲಾವಣೆ ಮಾಡಿಸು."

ನಂಜಪ್ಪ ಬಂದು ಓದಿದನು : "ರಾಜ್ಯಶ್ರೀ ನಾಯಕರ ಸನ್ನಿಧಿಗೆ. ಮಜ್ಜಿಗೆ ಹಳ್ಳಿ ಪಟೇಲ್ ಮಾದೇಗೌಡರು, ಇಲ್ಲಿ ಬಂದು ಹೊಟೇಲಿನಲ್ಲಿ

ಇಳಿದುಕೊಂಡು ಅವಿವೇಕ ಮಾಡಿದ್ದಾರೆ. ಹೊಟೇಲಿನವನನ್ನು ಅವನು ಮಾಡಬಾರದ ಕೆಲಸ ಮಾಡಬೇಕೆಂದು ಒತ್ತಾಯಮಾಡಿ, ಮಾಡ ದಿದ್ದರೆ ನಿನ್ನನ್ನೂ ಇಲ್ಲಿಂದ ಎಬ್ಬಿಸಿ ಬಿಡುತ್ತೇನೆಂದು ಹೆದರಿಸಿದ್ದಾರೆ. ಅವನು ಹೆದರಿಕೊಂಡು ಹೊಟೇಲು ಬಿಟ್ಟು ಓಡಿ ಬಂದಿದ್ದಾನೆ. ವಿವರ ಗಳೆಲ್ಲ ಚಿ| ನರಸಿಂಹಯ್ಯನ ಮೂಲಕ ಹೇಳಿಕಳುಹಿಸಿದ್ದೇನೆ. ಆತನು ತಮ್ಮ ಬಂಧುವೆಂದು ಗೊತ್ತಾಯಿತಾಗಿ ಎಲ್ಲವೂ ಹಾಗೆ ಹಾಗೇಇದೆ. ತಮಗೆ ಸಾಧ್ಯವಾದರೆ ಆತನನ್ನು ಅಂಕೆಯಲ್ಲಿರಿಸಿಕೊಳ್ಳಿ. ಇಲ್ಲದಿದ್ದರೆ, ಆಮೇಲೆಯಾದರೂ ನಮ್ಮ ತಮ್ಮ ಸ್ನೇಹವನ್ನು ಉಪಯೋಗಿಸಲು ಯತ್ನಿಸಬೇಡಿ."

ಪಟೇಲನು ಸೋಫಾದಲ್ಲಿ ಅಡಗಿಕೊಂಡನು. ಹದ್ದನ್ನು ಕಂಡ ಕೋಳಿ ಪಿಳ್ಳೆಯಂತಾದನು. "ಏನಯ್ಯಾ ಮಾಡಿಧೆ? ಮನೆಗೆ ಹೆಸರು ತರೋನೇನಯ್ಯಾ ನೀನು? ನೀನು ಇಂಥ ಪಟಿಂಗ ಅಂತ ತಿಳಿದಿದ್ದರೆ, ನಿನ್ನ ಗುಂಡು ಹಾಕಿ ಸುಟ್ಟು ಬುಡುತಿದ್ದೆ. ನಮ್ಮನ್ನ ತಿದ್ದೋಕೆ ಬಂದ ತಿಮ್ಮಪ್ಪ ಇವನು; ಕೋಮನೆಲ್ಲ ಉದ್ಧಾರ ಮಾಡೋನು, ನೀನೇಕೆ ಕೋಡಗದಂಗಾದೆ? ಇಕೋ ನಾಳೆ ಸಂಜೆ ಒಳಗಾಗಿ ನಮಗೆ ರಾಸ್ತೀ ಪತ್ರ ಬರಬೇಕು. ಆ ಹೋಟಲ್‌ನೋನ್ಗೆ ಏನೇನು ನಷ್ಟಾ ಆಗಿದೆ ಅದೆಲ್ಲ ಭರ್ತಿಮಾಡಿ ಕೊಟ್ಟು ತಪ್ಪಾಯಿತು ಹೇಳಿಬರಬೇಕು. ತಿಳೀತಾ!"

"ಮೇಷ್ಟ್ರೆ!"

"ಸಾರ್" ನರಸಿಂಹಯ್ಯ ಬಂದನು. ಆತನನ್ನು ಕಂಡು ಗೌಡನು ಅರ್ಧವಾಗಿ ಹೋದನು.

"ಇಕೋ, ಇವನ್ನೇ ಕರಕೊಂಡುಹೋಗಿ ಎಲ್ಲಾ ಸೆಟಲ್ ಮಾಡಿಸಿ, ತಾತಯ್ಯನೋರ ಪಾದಕ್ಕೆ ಬಿದ್ದು, ತಪ್ಪಾಯ್ತು ಅಂದು ಅವರಿಂದ ಕಾಗದ ತರಬೇಕು. ಇಲ್ಲದಿದ್ದರೆ, ಮಜ್ಜಿಗೆಹಳ್ಳೀಲಿ, ನಿಂಗೆ ನಿಲ್ಲೋಕೆ ಅಂಗೈಯಗಲ ತಾವು ಇಲ್ಲದಂತೆ ಮಾಡಬೇಕಾದೀತು."

ಆ ಗರ್ಜನೆಗೆ ಗೌಡನು ನಡುಗಿ ಹೋದನು: "ಅಪ್ಪಣೆ, ಬುದ್ಧಿ" ಎಂದು ಎದ್ದು ನಿಂತು ಕೈಮುಗಿದನು.

"ಯಾವಾಗ ಹೊರಡುತೀ?"

"ಇವೊತ್ತು ಸಂಜೇಗೆ."

"ಊಟ ಮಾಡಿಕೊಂಡು ಹೊರಡು. ಸಾರೋಟಿನಲ್ಲೇ ಹೋಗಿ ಬಾ."

"ಅಪ್ಪಣೆ."

ಗೌಡನು ಎದ್ದು ಹೋಗುತ್ತ ಏನೋ ಪಕ್ಕಕ್ಕೆ ತಿರುಗಿದನು. ಅಲ್ಲಿ ಮಲ್ಲಿಯು ನಿಂತಿದ್ದಾಳೆ. ಅವಳ ಕಣ್ಣು ಕೆಂಪಗೆ ಅವನನ್ನು ಸುಡುವಂತಿದೆ. ಆ ಕಣ್ಣಿನ ನೋಟದ ಹಿಂದಿರುವ ಬಿಸಿ ಅವನನ್ನು ಮುಟ್ಟಿದಂತೆ, ಅವನಿಗೆ ಚುರ್ ಎನ್ನಿಸಿತು. ಅಭಿಮಾನದಿಂದ ಕಣ್ಣಲ್ಲಿ ನೀರೂರಿತು. ಆ ನೀರು, ಆ ಹನಿ, ಕೆಳಗುರುಳುವಷ್ಟರಲ್ಲಿ ಅವನು ಸರ್‍ರನೆ ಬಾಗಿಲು ದಾಟಿ ಹೊರಟುಹೋದನು.

## ೩೨

ಅವನು ಅತ್ತ ಕಡೆ ಹೋಗುತ್ತಿದ್ದ ಹಾಗೆಯೇ ಮಲ್ಲಿಯು ಒಳಗೆ ಬಂದಳು. ಅವಳ ಹಿಂದೆಯೇ ರಾಣಿಯೂ ಬಂದಳು. ನರಸಿಂಹಯ್ಯನು ಅವರಿಬ್ಬರೂ ಬಂದುದು ನೋಡಿ ದೂರಕ್ಕೆ ಸರಿದ ಮನೆವಾರ್ತೆ ನಂಜಪ್ಪ ನೊಡನೆ ಹಿಂದಕ್ಕೆ ಸರಿದನು.

ನಾಯಕನಿಗೆ ನರಸಿಂಹಯ್ಯನ ಮೇಲೆ ತುಂಬಾ ಅಭಿಮಾನ. ಇಂಗ್ಲಿಷ್ ಮೇಷ್ಟ್ರುಯೆಂದು ಅವನಲ್ಲಿ ತುಂಬಾ ಸಲುಗೆ, ಅದರಿಂದ ಅವನನ್ನು ಹಾಸ್ಯಮಾಡುತ್ತಾ "ನಂಜಪ್ಪನಂತೂ ಶಿಬ್ಬಂದಿಯವನು. ಅವನು ಮನೇಗೇ ಸೇರಿದವನಾದರೂ ಮರ್ಯಾದೆ ಅಂತ ದೂರ ಹೋದ. ನೀವೇಕೆ ಹೋಗಬೇಕು ? ನೀವು ಮೇಷ್ಟ್ರು. 'ವರ್ಣ ಮಾತ್ರಂ ಕಲಿಸಿದಾತಂ ಗುರು.' ನೀವು ಗುರುಗಳು. ನಮಗೆ ಇಂಗ್ಲಿಷ್ ಕಲಿಸಿದ್ದೀರಿ. ಇವರಿಬ್ಬರೂ ನಿಮ್ಮ ಕೈಲಿ ಸಂಸ್ಕೃತ ಕಲೀಬೇಕು ಅಂತಿದಾರೆ. ನೀವೇಕೆ ಸಂಕೋಚ ಪಡಬೇಕು ?" ಎಂದ.

" ಇಲ್ಲ, ಸಾರ್. ಸಂಕೋಚ ನನ್ನ ಸ್ವಭಾವ-ಯಾರೇ ಆಗಲಿ, ನನ್ನನ್ನು ಹತ್ತಿರಕ್ಕೆ ಕರೆಯೋವರೆಗೂ ಅವರ ಬಳಿಯೂ ಸುಳಿಯೋ ದಿಲ್ಲ."

" ಆಯ್ತು, ಮೇಸ್ಟ್ರೇ, ನಾಳೆ ಮದುವೆ ಮಾಡಿಕೊಂಡು ಸಂಸಾರ ಮಾಡೋವಾಗಲೂ ಹಿಂಗೇ ಇರ್ತೀರಾ ?"

" ಇಲ್ಲ ಸಾರ್, ನಾನು ಮದುವೆಯೇ ಮಾಡಿಕೊಳ್ಳೋದಿಲ್ಲಾ !"

" ಅದೇನ್ರೀ ಹಂಗಂತೀರಿ !"

" ಹೌದು ಸಾರ್, ನನಗೆ ನಮ್ಮ ತಾಯಿ ಕಂಡರೆ ಬಹಳ ಭಕ್ತಿ ಸಾರ್. ಅದರಿಂದ, ನನಗೆ ಯಾವ ಹೆಂಗುಸು ಕಂಡರೂ ಅಲ್ಲಿ ನನಗೆ ನಮ್ಮ ತಾಯಿಯ ದರ್ಶನವೇ ಆಗುತ್ತದೆ ಸಾರ್ ! ಶಾಸ್ತ್ರವೂ ಹಾಗೇ ಹೇಳುತ್ತದೆ. ಹಾಗೇ, ಕೊನೆಯುವರೆಗೂ, ಪ್ರತಿಯೊಬ್ಬ ಸ್ತ್ರೀಯನ್ನೂ ಮಾತೃಭಾವದಿಂದಲೇ ಕಾಣಬೇಕೆಂದಿರುವ ನನಗೆ ಮದುವೆಯಿಂದ ಆಗ ಬೇಕಾದುದೇನು ?"

" ಹಾಗಾದರೆ ನಿಮಗೆ ಮಕ್ಕಳು ಮರಿ ಆಗಬೇಕು ಅಂತ ಆಸೆ ಯಿಲ್ಲವಾ ?"

" ಸಾಧ್ಯವಾದರೆ, ನಾನೂ ಬಿ.ಎ. ಮಾಡಿಕೊಂಡು ದೇಶಸೇವೆಗೆ ಈ ದೇಹವನ್ನು ಮೀಸಲು ಮಾಡುತ್ತೇನೆ. ಬ್ರಿಟಿಷರ ರಾಜ್ಯ ತಪ್ಪಿ ಸ್ವರಾಜ್ಯ ಬರುವುದು ಅಷ್ಟು ಸುಲಭವಲ್ಲ. ಆ ದುಸ್ಸಾಧ್ಯವಾದ ಕಾರ್ಯ ಕ್ಕಾಗಿ ತಪಸ್ಸು ಮಾಡುವವರ ಗುಂಪಿಗೆ ಸೇರಿಕೊಂಡು ಜನ್ಮವನ್ನು ನೀಗುತ್ತೇನೆ. ಇಂಥಾ ನನಗೆ, ಸಂಸಾರ, ಮಕ್ಕಳು ಮರಿ, ಇವೆಲ್ಲ ಬೇಕಾಗಿಲ್ಲ."

" ಒಂದು ವೇಳೆ ನಿಮ್ಮತಲೇಗೇ ಸ್ವರಾಜ್ಯ ಬಂತಪ್ಪ !"

" ಆಗ ಹಿಮಾಲಯಕ್ಕೆ ತಪಸ್ಸಿಗೆ ಹೋಗುತ್ತೇನೆ. ಇಲ್ಲದಿದ್ದರೆ, ಒಂದು ಶಾಲೆ ಕಟ್ಟಿಕೊಂಡು ಪಾಠ ಹೇಳುತ್ತಾ ಕೂತುಕೊಳ್ಳುತ್ತೇನೆ."

" ಆ ಕೆಲಸ ಈಗಲೇ ಮಾಡಿ. ನಿಮಗೆ ಈಗ ಇಬ್ಬರು ಶಿಷ್ಯರು- ಇವರಿಬ್ಬರೂ ನಿಮಗೊಂದು ಶಾಲೆ ಕಟ್ಟಿಸಿಕೊಡುತ್ತಾರೆ. ಅದೂ ಅಲ್ಲದೆ, ಬ್ರಿಟಿಷರು ಈ ಯುದ್ಧದಲ್ಲಿ ಗೆದ್ದರೆ ನಿಮಗೆ ಸ್ವರಾಜ್ಯ ಸಿಕ್ಕೇ

ಸಿಕ್ತದಲ್ಲಾ? ಇನ್ನು ತಪಸ್ಸೇಕೆ? ಸುಖವಾಗಿರಿ."

"ಇಲ್ಲಾ ಸಾರ್, ಸುಖಪಡೋಕೆ ಹುಟ್ಟಿರೋರು ಕೆಲವರು. ಕಷ್ಟಪಡೋಕೇ ಹುಟ್ಟಿರೋರು ಕೆಲವರು- ಕಷ್ಟ ಕಷ್ಟ ಅಂತ ತಿಳಿದು ತಿಳಿದೂ ಅದನ್ನು ಒಪ್ಪಿಕೊಂಡು ಆ ಕಷ್ಟದ ಮಾರ್ಗ ಹಿಡಿಯೋದೆ ತಪಸ್ಸು. ಅದರಲ್ಲಿ ಇರೋ ಹಿತ ನನಗೆ ಇನ್ನು ಯಾವುದರಲ್ಲೂ ಇಲ್ಲ."

"ಅಲ್ರೀ, ನಿಮ್ಮ ತಪಸ್ಸು ಯಾಕೆ? ಸ್ವರಾಜ್ಯಕ್ಕೆ! ಈ ಯುದ್ಧ ದಲ್ಲಿ ಬ್ರಿಟಿಷರು ಗೆದ್ದೇಗೆಲ್ತಾರೆ ಅಂತ ನೀವೇ ಹೇಳ್ತಿದ್ದೀರಿ. ಅವರು ನಾವು ಗೆದ್ದರೆ ಸ್ವರಾಜ್ಯ ಕೊಟ್ಟೇ ಕೊಡ್ತೀವಿ ಅಂತ ಹೇಳ್ತಾಲೇ ಇದ್ದಾರೆ. ಇನ್ನು ನಿಮ್ಮ ತಪಸ್ಸೇಕೆ?"

"ನೋಡೀಸಾರ್, ತಾವು ಟೈಟಲ್ ಹೋಲ್ಡರ್, ತಮಗೆ ಬ್ರಿಟಿಷರಲ್ಲಿ ವಿಶ್ವಾಸವಿದೆ. ಅದು ಸರಿ. ಆದರೆ, ಅವರು ಸ್ವರಾಜ್ಯ ಕೊಡೋ ವಿಚಾರದಲ್ಲಿ ನಮಗೆ ಅಷ್ಟು ಅಪನಂಬಿಕೆ ಹುಟ್ಟಿಸಿರೋದು ತಾನೇ ಏಕೆ ಬಲ್ಲಿರಾ? ಆ ಡೆಮಾಕ್ರಸಿ ಬಂದರೆ, ಮೆಜಾರಿಟಿ ಸರಕಾರ. ಮೆಜಾರಿಟಿ ಕಮ್ಯುನಿಟಿಗಳು ತಮಗೆ ಸ್ವರಾಜ್ಯ ಬರುತ್ತೆ ಅಂತ ಕೋ ಆಪರೇಟ್ ಮಾಡಲಿ ಅಂತ. ಈಗ ಒಂದು ಗಳಿಗೆ ಮುಂಚೆ ಪಟೇಲರು ಹಾರಾಡಿದರಲ್ಲ: ಅದೂ ಆ ನಂಬಿಕೆಯ ಫಲ. ನಾಳೆ ಡೆಮಾಕ್ರಸಿ ಬಂದರೆ, ಎಲ್ಲಾ ಹಾರುವರ ಪಾಲಾಗುತ್ತೆ ಅಂತ, ಇವೊತ್ತೇ ಅವರಿಗೆ ಬಾಯಿಗೆ ಬಟ್ಟೆ ಕಟ್ಟುತ್ತೀವಿ ಅಂತ ಹಾರಾಡುತ್ತಿರೋದು. ಬ್ರಿಟಿಷರ ಒಡೆದು ಆಳು ನೀತಿಯ ವಿಷಫಲಗಳಲ್ಲಿ ಮೊದಲನೆಯದಿದು. ಉತ್ತರ ದಲ್ಲಿ ಹಿಂದೂ ಮಹಮ್ಮದೀಯರೆಂಬ ಭೇದ ತಂದಿಟ್ಟಿದ್ದಾರೆ. ದಕ್ಷಿಣದಲ್ಲಿ ಬ್ರಾಹ್ಮಣ ಅಬ್ರಾಹ್ಮಣ ತಂದಿಟ್ಟಿದ್ದಾರೆ."

"ಹಂಗಾದರೆ ಗೌಡ ಬ್ರಿಟಿಷರ ಸರ್ಕಾರದ ಕಡೆ ಅಂತೀರಾ?"

"ಗೌಡರಿಗೂ ಬ್ರಿಟಿಷರಿಗೂ ನೇರವಾಗಿ ಸಂಬಂಧವಿಲ್ಲ. ಆದರೆ ಅವರು ಹಸಿದ ಹೊಟ್ಟೆ ನೋಡಿ ಹಿಡಿ ಕಾಳು ಚೆಲ್ಲುವ ವಿದ್ಯೆ ಚೆನ್ನಾಗಿ ಬಲ್ಲರು. ಇರುವವರೆಗೂ ಊರನ್ನೆಲ್ಲಾ ಗೋಳು ಹುಯ್ದುಕೊಂಡು ಸತ್ತಮೇಲೂ ಊರು ಹಾಳಾಗಲಿ ಎಂದು ಏನೋ ಮಾಡಿದ ಶಾನು

ಭೋಗನಂಥವರು. ಈ ಬ್ರಿಟಿಷರು, ಹಾಗೆ ಬಿಟ್ಟು ಹೋಗುವ ಕಾಲ ಬಂದರೂ ಏನೋ ಅನರ್ಥ ಮಾಡಿಯೇ ಹೋದಾರು."

" ನಮಗೇನೋ ನಿಮಗೆ ಬಂದಂಗೆ ಸಂದೇಹ ಬಂದಿಲ್ಲ. ಒಂದು ವೇಳೆ ನಿಮ್ಮ ಮಾತೇ ನಿಜ ಅನ್ನೋಣ. ಇರಲಿ. ನಮ್ಮ ಮಲ್ಲೀ ಅಂಥ ಹೆಣ್ಣು ತಂದು ಮದುವೆ ಮಾಡಿದರೆ ಆಗೇನು ಮಾಡ್ತೀರಿ ?"

" ಮೊದಲನೆಯದು, ಮದುವೆಯಾಗೋದಿಲ್ಲ : ಎರಡನೆಯದು ಮಲ್ಲಮ್ಮಣ್ಣಿ ಅಂಥಾ ಸ್ತ್ರೀಯರು ನನ್ನ ಮೇಲೆ ಅಭಿಮಾನ ಮಾಡಿದರೆ, ಪೂಜೆಗೆ ಚಿನ್ನದ ವಿಗ್ರಹ ಸಿಕ್ಕಿದ ಹಾಗೆ. ಹೇಗೆ ಹೇಗೂ ನಾನು ಬ್ರಹ್ಮಚಾರಿ. ಆ ತಾಯಿಗೇ ಅಡ್ಡಬಿದ್ದು 'ನಾನು ಬ್ರಹ್ಮಚಾರಿಯಾಗಿ ರುವಂತೆ ಅನುಗ್ರಹಿಸು' ಎಂದು ಪ್ರಾರ್ಥನೆ ಮಾಡಿದ. ಅಷ್ಟೇ ! ರಾಮ ಕೃಷ್ಣರು ಮಾಡಲಿಲ್ಲವೆ ಹಾಗೆ ?"

" ರಾಮಕೃಷ್ಣರಿಗೆ ಮದುವೆಯಾಗಿತ್ತು. ನೀವೂ ಹಾಗೇ ಮದುವೆ ಮಾಡಿಕೊಳ್ಳಿ."

" ಮದುವೆಯಾಗದ ರಾಮಕೃಷ್ಣರು ಎಷ್ಟು ಜನ ಇಲ್ಲ ?"

" ಏನೋಪ್ಪ. ನಾನಾಗಿದ್ದರೆ ನಿಮ್ಮಷ್ಟು ಹಟ ಹಿಡೀತಿರಲಿಲ್ಲ. ಏನ್ರೀ ನೀವೇನಂತೀರಿ ? ದೊಡ್ಡಮ್ಮನೋರು ಏನಂತಾರೆ ? ಚಿಕ್ಕಮ್ಮ ನೋರು ಏನಂತಾರೆ ?"

ರಾಣಿಯು ನುಡಿದಳು : " ನಾವೂ ಮೇಷ್ಟ್ರನ್ನ ಒಂದು ವರ್ಷ ದಿಂದ ನೋಡ್ತಾ ಇದ್ದೀವಿ. ಅದರಲ್ಲೂ ಆನಂದಮ್ಮ ದಿನ ದಿನಾ ನೋಡ್ತಾರೆ ಅವರೂ ಅದೇ ಮಾತು ಹೇಳಿದರು. ಇವರು ಅಪರಂಜಿ ಭಂಗಾರ. ಅದರಲ್ಲಿ ಏನೂ ಸುಳ್ಳಿಲ್ಲ. ಏನೋ ಅವರ ಗತಿ ಹೆಂಗದೋ? ನಾವೇನು ಹೇಳೋದು ?"

" ತಾವೇನಂತೀರಿ ಚಿಕ್ಕಮ್ಮನೋರು ?"

" ಏನನ್ನಲಿ ಬುದ್ಧಿ ? ನನಗಂತೂ ಅವರ್ನ ಕಂಡಾಗಲೆಲ್ಲಾ ಪುರಾಣದಲ್ಲಿರೋ ಋಷಿಗಳನ್ನ ಕಂಡಹಂಗಾಗ್ತದೆ. ಅವರ ಮರ್ಮ ನಾವೇನು ಬಲ್ಲೋ ?"

" ನಾ ಹೇಳಿದ ಮಾತೇ ಕೇಳಲಿಲ್ಲವಾ ? ನಿನ್ನಂಥಾ ಹೆಣ್ಣೊಂದು

ಗಂಟುಬಿತ್ತು ಅನ್ನು: ಆಗ ಇವರೇನು ಮಾಡ್ತಾರೆ ಅಂತೀನಿ?"

"ನಾನು ನಿಮ್ಮಂಗೆ ತಿಳಿದೋಳಲ್ಲ. ಆದರೂ ಬುದ್ಧಿ, ನೀರು ಬಿದ್ದರೆ ಕರಗಿ ಹೋಗೋ ಮಣ್ಣು ಹೆಂಟೆಯಲ್ಲ ಇದು. ನೀರಿಗೆ ಜಗ್ಗದ ಬಂಡೆ ಅನ್ನಿಸ್ತದೆ."

"ಹಂಗಾದರೆ ಪರೀಕ್ಷೆ ಮಾಡಿದ್ದೀಯಾ?" ನಾಯಕನು ನಗುತ್ತಾ ಕೇಳಿದನು.

ರಾಣಿಯು, "ಅಂಯ್, ಬುಡಿ, ಯಾವಾಗಲೂ ನಿಮ್ಮದು ಹಿಂಗೇ ಹಾಸ್ಯಮಾಡೋದು" ಎಂದು ವಾಮವಾಗಿ ನುಡಿದಳು.

ಮಲ್ಲಿಯ ಮೊಕ ಕೆಂಪಾಗಿದ್ದರೂ ನಗುತ್ತ ಹೇಳಿದಳು: "ಇರಲಿ ಬುಡಿ, ಬುದ್ಧಿ. ಬುದ್ಧಿಯೋರು ನಮ್ಮನ್ನಲ್ಲದೆ ಇನ್ನು ಯಾರನ್ನು ಹಾಸ್ಯ ಮಾಡಬೇಕು? ಬುದ್ಧಿ, ಮಾತಿಗೆ ಮಾತು ಕೊಟ್ಟಳು ಅನ್ನದಿದ್ದರೆ, ಹೇಳ್ತೀನಿ."

"ಹೇಳು, ಹೇಳು, ಕೇಳೋವ."

"ಮೀಸಲು ಹಾಲಿಗೇನು ಗೊತ್ತು ಕೊತ್ತಿ ಮುಸುಡಿ ಹೆಂಗದೆ ಅಂತ?"

ನರಸಿಂಹಯ್ಯನೂ ಜೊತೇಲೇ ಹೇಳಿದನು: "ಇದೂ ಕದ್ದು ಹಾಲು ಕುಡಿಯುವ ಕೊತ್ತಿಯೂ ಅಲ್ಲ."

ನಾಯಕನು ಬಹು ಸಂತೋಷವಾಗಿ ನಕ್ಕನು: "ಮಲ್ಲಿ, ನಿನ್ನ ಮಾತು ಒಪ್ಪೋ ಮಾತು ಒಪ್ಪಿಕೊಂಡೆ."

ರಾಣಿಯು ಮಗ್ಗುಲಲ್ಲಿದ್ದ ಮಲ್ಲಿಯನ್ನು ಬರಸೆಳೆದು ಅಪ್ಪಿಕೊಂಡು ಮೆಚ್ಚಿಕೆಯಿಂದ ಕೈಹಿಸುಕಿದಳು.

ಮನೆವಾರ್ತೆ ನಂಜಪ್ಪನು ಮುಸಿ ಮುಸಿ ನಗುತ್ತಾ ಅತ್ತಕಡೆ ತಿರುಗಿದನು.

ನಾಯಕನು ಅದನ್ನು ಕಂಡು, "ನಂಜಪ್ಪಾ, ನೀನು ನಗುತಾ ಇದ್ದೀಯಲ್ಲ? ಗೌಡ ಹೊರಗೆ ಹೋದಾಗ ನಿಮ್ಮ ಚಿಕ್ಕಮ್ಮನೋರ ಮೊಕ ಕಣ್ಣು ಕಂಡೆಯಾ? ಉತ್ತರಹಳ್ಳಿ ಅಮ್ಮನಾಗಿ ಹೋಗಿಬಿಟ್ಟಿದ್ದರು. ಆ ರೌದ್ರ ಕಳೀಲಿ ಅಂತ ಕೊಂಚ ಹಿಂಗೆ ಆಟ ಹೂಡಿದೆ

ಕಣಪ್ಪಾ !" ಎಂದನು.

ನಂಜಪ್ಪನು " ಸರಿ ! ಬುದ್ದಿ" ಅಂದನು.

" ಹೂ ! ಅದೇನು ಹೇಳಬೇಕೊ ಹೇಳೇಬಿಡು. ನಿನ್ನದೂ ಆಗಲಿ."

" ಏನಿಲ್ಲ. ಊಟ ಆದಮೇಲೆ ಮೈಸೂರಿಗೆ ಹೊರಡೋದಿತ್ತು : ಇನ್ನೂ ಮೇಷ್ಟ್ರುರಿಗೆ ಊಟ ಆಗಿಲ್ಲ, ಅನ್ನೋವಾ ಅಂತಿದ್ದೆ."

" ಬಿಡೋ ! ಈ ಹಾರುವರ ಊಟಾ ಏನು ? ಎಲೆ ಮುಂದೆ ಕುಂತು ಉಣ್ಣದಿದ್ದರೆ ಇಲ್ಲ : ಎರಡು ಹಣ್ಣು ಒಂದು ಬಟ್ಟಲು ಹಾಲು ಆದರೆ ಮುಗೀತು. ಆಗಲಿ. ಹಂಗಂತಾ, ಇವರೂಟಕ್ಕೆ ನಾವೇಕೆ ಚೆಕ್ಕರ್ ಹಾಕಬೇಕು ? ನಿನ್ನೆ ರಾತ್ರೆ ಹಗಲು ಊಟ ಚೆನ್ನಾಗಿತ್ತಾ ಮೇಷ್ಟ್ರೆ ?"

" ಅಡಿಗೆ ಹೇಗಿದ್ದರೇನು ಸಾರ್ ! ಆ ತುಪ್ಪ, ಮೊಸರು ಆ ಎರಡೇ ಒಂದು ತೂಕ. ಅವರ ಮನೆಯಲ್ಲಿ ಅಡುಗೆ ಶ್ರದ್ಧಾಭಕ್ತಿಯಿಂದ ಮಾಡಿದ್ದರು. ಚೊಕ್ಕಟವಾಗಿತ್ತು. ಇನ್ನೇನುಬೇಕು ?"

" ನಮ್ಮ ಶಾನುಭೋಗರನ್ನ ಕಳೀಬೇಡಿ. ಒಳ್ಳೆ ಬ್ರಾಹ್ಮಣ. ಶಾಸ್ತ್ರಗೀಸ್ತ್ರ ಓದಿಲ್ಲ ನಿಮ್ಮ ಹಂಗೆ. ಆದರೂ ಒಂದು ದಿನ ದೇವರ ಪೂಜೆ ಬಿಡೋಕಿಲ್ಲ. ಬಹಳ ನಿಷ್ಠರು. ಈ ಗೌಡ ಇಷ್ಟು ಹಾರಾಡಿದ ನಲ್ಲ, ಅವನೂ ಕೂಡ ನಮ್ಮ ಶಾನುಭೋಗರನ್ನ ಕಂಡ್ರೆ ಎದ್ದು ಕೈ ಮುಗಿಯೋದೆ !"

" ಯೋಗ್ಯತೆಯಿದ್ದರೆ ಗೌರವ ಇಲ್ಲದೆ ಹೋಗೋದೂ ಉಂಟೆ ? ಬೆಂಕಿಯನ್ನು ಬರಿಯ ಕಾಲಲ್ಲಿ ತುಳಿಯುವುದಕ್ಕೂ ಆದೀತೆ ?"

" ಆಯಿತು. ನಮ್ಮನ್ನು ಗೆಲ್ಲಿಸಿದಿರಿ. ಒಂದು ವರ್ಷದೊಳಗಾಗಿ ಇಂಗ್ಲೀಷ್ ಕಲಿಸಿಕೊಟ್ಟು, ಇತರರು ಆಡುವುದು ಅರ್ಥವಾಗುವ ಹಂಗೆ ಮಾಡಿದಿರಿ. ನಮ್ಮ ಅಮ್ಮನೋರಿಗೂ ಹಂಗೆ ಸಂಸ್ಕೃತ ಕಲಿಸಿಬಿಡಿ."

" ನಾವು ಬುದ್ಧಿಯೋರ ಜೊತೇಲಿ ಇಂಗ್ಲಿಷ್ ಆಡಬೇಡವಾ ಬುದ್ಧಿ "

" ನೋಡವ್ವಾ, ನಾನು ಮುದುಕಿ ಆಗೋದೆ, ಏನಿದ್ದರೂ ಇನ್ನು

ರಾಜ್ಯ ನಿನ್ನದು. ಅವರುಂಟು ನೀವುಂಟು."

"ಅಪ್ಪಣೆ ಆಗಲಿ ಬುದ್ಧಿ, ನಮಗೂ ಇಂಗ್ಲಿಷ್ ಕಲಿಸೋಹಂಗೆ"

"ಆಗಬೋದು : ಇನ್ನೇನು ?"

"ನೋಡಿ ಬುದ್ಧಿ, ಬುದ್ಧಿಯೋರಿಗೆ ಇಂಗ್ಲಿಷ್ ಕಲಿಯೋಕೆ ಒಂದು ವರ್ಷ ಬೇಕಾಯ್ತು. ನಾನು ಆರೇತಿಂಗಳಲ್ಲಿ ಕಲೀದಿದ್ದರೆ, ಮಲ್ಲೀ ಅನ್ನಬೇಡಿ. ಇನ್ನೇನಾದರೂ ಅನ್ನಿ."

"ನೀವು ಕಲಿಯೋ ಮಾತಾಡ್ತಾ ಇದ್ದೀರಿ ಹೊರತು, ಕಲಿಸೋರ ಗತಿಯೇನು ಅನ್ನೋ ಯೋಚನೆಯೇ ಇಲ್ಲವೋ ?"

"ಕುದುರೆಗೆ ಹುರುಳಿ ಮೇಯೋದು ಗೊತ್ತು : ಇನ್ನೇನು ತಾನೇ ಅದಕ್ಕೆ ಯಾಕಬೇಕು ?"

"ನಂಜಪ್ಪ, ಇಲ್ಲಿ ಬಾ, ಖರ್ಚುಹಾಕಿ ಒಂದು ಎರಡು ಸಾವಿರ ತತ್ತಾ ! ಸಾಕಾ !"

ರಾಣಿಯು "ತಮ್ಮ ಚಿತ್ತ" ಎಂದು ಸುಮ್ಮನಾದಳು.

ಮಲ್ಲಿಯು "ಬುದ್ಧಿಯೋರ ಪಾದದಲ್ಲಿ ನಾನು ಮಾತಾಡ ಬೋದಾ !" ಎಂದು ವಿನಯದಿಂದ ಕೇಳಿದಳು.

ಆ ವಿನಯಕ್ಕೆ ಮೆಚ್ಚಿ ನಾಯಕನು ತಾನು ಮಾಡಬೇಕಾದ ಶೃಂಗಾರೋಪಚಾರಗಳನ್ನೆಲ್ಲ ಕಣ್ಣಿಂದಲೇ ಮಾಡುತ್ತ "ಅಮ್ಮನೋರ ಅಪ್ಪಣೆ ಆಗಬೋದು" ಎಂದನು.

"ಬುದ್ಧಿ, ತಾವು ತಾಫೆಯೋರು ಬಂದರೆ ಒಂದು ಸಾವಿರ ಕೊಡು ತೀರಿ. ಸಂಗೀತಗಾರರು ಬಂದರೆ ದಿನಕ್ಕೊಂದು ಸಾವಿರ ಕೊಡುತೀರಿ ನಮ್ಮ ಮೇಷ್ಟ್ರು ಕೈಲಿ ಒಂದು ವರ್ಷ ದುಡಿಸಿಕೊಂಡು ಎರಡು ಸಾವಿರ ರೂಪಾಯೇನ ಕೊಡೋದು ?"

"ಎಲಾ, ಹೆಣ್ಣೆ, ಕೊಟ್ಟೆಯಲ್ಲ ಚಕ್ಕರ್ ? ಎಷ್ಟು ಕೊಡಲಿ ಅದನ್ನಾದರೂ ಹೇಳು."

"ಕೈತುಂಬಾ ಕೊಡಿ."

ನಾಯಕನೂ ರಾಣಿಯೂ ಒಬ್ಬರನ್ನೊಬ್ಬರು ನೋಡಿದರು ? ಇಬ್ಬರ ದೃಷ್ಟಿಯೂ ಮಾತನಾಡಿಕೊಂಡಂತೆ ಆಯಿತು: ನಾಯಕನು

ಸಂತೋಷ ತಡೆಯಲಾರದೆ " ಇದೆಲ್ಲೋ ದೊರೆಗಳ ಮನೇಲೇಹುಟ್ಬೋ ಹೆಣ್ಣು ಕಣೋ !" ಎಂದನು.

ಮಲ್ಲಿಯು ಮೆಚ್ಚಿನ ಕಾಣಿಕೆಯನ್ನು ಒಪ್ಪಿಕೊಂಡ ಮಹಾರಾಣಿಯಂತೆ ಮೆಲ್ಲಗೆ ನಗುತ್ತಾ "ಅಲ್ಲ, ಅಲ್ಲ, ದೊರೆಗಳ ದೊರೆ ಕೈಹಿಡಿಯೋ ಭಾಗ್ಯ ಪಡೆದ ಹೆಣ್ಣು !" ಎಂದು ಕೈ ಮುಗಿದಳು.

ನಂಜಪ್ಪನಿಗೆ ಮತ್ತೆ ಅಪ್ಪಣೆಯಾಯಿತು : "ಚಿಕ್ಕಮ್ಮನೋರ ಲೆಕ್ಕ ಅಂತ ಐದುಸಾವಿರ ಖರ್ಚುಹಾಕಿ ತತ್ತಾಪ್ಪಾ! ಇನ್ನಾದರೂ ಈಗ ಚಿಕ್ಕಮ್ಮನೋರ ಮನಸ್ಸಿಗೆ ಒಪ್ಪಿತೋ ?" ಮಲ್ಲಿಯು ತಲೆದೂಗಿದಳು ಪೂಜೆಗೆ ಒಲಿದು ಪ್ರಸನ್ನಳಾದ ದೇವಿಯಂತೆ.

ನರಸಿಂಹಯ್ಯನು ಕೈಮುಗಿದುಕೊಂಡು "ನಾಯಕರೇ, ನನಗೆ ಅಷ್ಟು ಹಣಬೇಕಿಲ್ಲ. ತಮ್ಮಲ್ಲಿರಲಿ. ಬೇಕಾದಾಗ ತೆಗೆದುಕೊಳ್ಳುತ್ತೇನೆ." ಎಂದು ಯಾಚಕನಂತೆ ಪ್ರಾರ್ಥಿಸಿದನು.

ನಾಯಕನು ರೇಗಿದವನಂತೆ ಮೊಕ ಸಿಂಡರಿಸಿಕೊಂಡು ಗದರಿಸಿಕೊಳ್ಳುವನಂತೆ ಹೇಳಿದನು : "ಎಲ್ಲಿ ಹಾರುವಯ್ಯ ಗಂಟುಬಿದ್ದ : ಮದುವೆ ಅಂದರೆ ಬೇಡ. ಹಣ ತಕೋ ಅಂದರೆ ಬೇಡ. ನಾವಿನ್ನೇನು ಕೊಟ್ಟು ನಿನ್ನಋಣ ತೀರಿಸೋವಾ? ಸುಮ್ಮನೆ ತಕೊಂಡುಹೋಗಿ ಸೇವಿಂಗ್ಸ್‌ನಲ್ಲಿ ಹಾಕಿರಿ. ಇರಲಿ ಯಾವ ಕಾಲಕ್ಕೆ ಹೆಂಗೋ ? ಲಕ್ಷ್ಮೀ ಬಂದರೆ ಬಿಡಬಾರದು."

ನರಸಿಂಹಯ್ಯನಿಗೆ ಪ್ರತಿ ಹೇಳಬೇಕೆಂದು ಇಚ್ಛೆಯಿತ್ತು. ಆದರೆ ಪ್ರತಿಯಾಡಲಾಗಲಿಲ್ಲ.

## ೩೩

ಮಾದೇಗೌಡ ಮನೆಗೆ ಬಂದು ಊಟದ ಶಾಸ್ತ್ರಮಾಡಿ ಮುಗಿಸಿದ. ರಾಣಿ ಸುಂದರಮ್ಮಣ್ಣಿಯೂ ಹಾಗೆ ಮೊಕ ಸಿಂಡರಿಸಿಕೊಂಡು

ಕೋಪದಿಂದ ಉರಿಯುತ್ತಿದ್ದುದು ಕಂಡಿದ್ದರೂ ಅವನಿಗೆ ಅದು ಅಸಹ
ಜವೆನ್ನಿಸಲಿಲ್ಲ. ಆಕೆ ರಾಣಿ. ಮನೆಗೆ ಯಜಮಾನಿ: ಆಕೆ ಅಪರಾಧ
ವಾದರೆ ರೇಗುವುದು ಸಹಜ ನಾಯಕ ತಮ್ಮ ಕುಲದಲ್ಲೆಲ್ಲಾ
ಎಲ್ಲಾದರಲ್ಲೂ ನಾಯಕ. ಅವನು ರೇಗುವುದೂ ಅವನಿಗೆ ಸರಿ ಎನ್ನಿ
ಸಿತು. ಆದರೆ, ತಂದಾನಪದದ ಮಲ್ಲನ ಮಗಳು ಮಲ್ಲಿ, ಇನ್ನೂ ಸರಿ
ಯಾಗಿ ಹೇಳಬೇಕೆಂದರೆ, ಹಾದರದ ಹಳ್ಳಿನಲ್ಲಿ ಹುಟ್ಟಿ, ಯಾರ
ಮನೇಲೋ ಬೆಳೆದು, ಬಂದಿಹಾಕಿಸಿಕೊಂಡ ಸೂಳೆಯಾಗಿ ಅರಮನೆ
ಸೇರಿದವಳು, ನಾಯಕನ ಹತ್ತಿರದ ನಂಟನಾದ ತನ್ನ ಮೇಲೆ ರೇಗು
ವುದು? ಇವಳು ಯಾವ ದೇವರ ಬಂಟಳು ? ಎಂದು ಅವನಿಗೆ ಬಹಳ
ಸಹಿಸುವುದಕ್ಕಾಗದ ಕೋಪಬಂದಿತು, ಕೆಣಕಿದ ನಾಗರಹಾವು ರೇಗಿ
ದ್ದರೂ ಯತ್ನವಿಲ್ಲದೆ ಹುತ್ತಸೇರಿ, ಮೊರೆಯುವಂತೆ, ಆ ಕೋಪ ಹೃದ
ಯದಲ್ಲಿ ನಿಂತು ಕುಣಿಯುತ್ತಿತ್ತು.

ಸಾರೋಟು ಬಂತು: ಅದರಲ್ಲಿ ನರಸಿಂಹಯ್ಯ. ಇನ್ನೇನು ಹೊರ
ಡುಬೇಕೆನ್ನುವಾಗ ನಂಜಪ್ಪ ನಾಲ್ಕುನೂರು ಸವರ್ನಗಳನ್ನು ತಂದು
ಪಟೇಲರ ಕೈಯಲ್ಲಿ ಕೊಟ್ಟು, 'ಇದನ್ನು ನಾಳೆಯಿದ್ದು ನರಸಿಂಹಯ್ಯ
ನೋರ ಹೆಸರಿನಲ್ಲಿ ಖಜಾನೇಲಿ ಇಟ್ಟು ರಸೀತಿ ತರಬೇಕು ಅಂತ ಅಪ್ಪಣೆ
ಯಾಗಿದೆ' ಎಂದನು. ಹಾಗೆಯೇ ಐದು ನೂರು ರೂಪಾಯಿನ ಒಂದು
ಥೈಲಿ ಕೊಟ್ಟು ' ಇದು ತಮ್ಮ ಖರ್ಚಿಗಂತೆ' ಎಂದನು.

ಮಾದೇಗೌಡನಿಗೆ ನಾಯಕನ ಬೈಗಳು ತಿಂದು ಆಗಿದ್ದ ಗಾಯ
ಕೂಡಲೇ ಮಾಯ್ತು 'ಎಷ್ಟೇ ಆಗಲಿ ಹಿರಿಯ. ನಮ್ಮ ಕಷ್ಟ ಬಲ್ಲ.'
ಎನ್ನಿಸಿ ಹಿತವಾಯಿತು. ಏಕೋ ನರಸಿಂಹಯ್ಯನ ಮೇಲೆ ಕ್ರೋಧ
ಬಂತು. ಮಲ್ಲೀಮೇಲೆ ಎಲ್ಲೂಇಲ್ಲದ ಆಕ್ರೋಶಬಂತು. ಸಾಧ್ಯ
ವಾಗಿದ್ದರೆ, ಅವನು ಆ ಕೂಡಲೇ ಹೋಗಿ ಅವಳನ್ನು ಏನೇನೋಮಾಡಿ
'ಜಾತಿ ಕೆಡಿಸಿ ಬಿಡ್ತಿದ್ದ' ಆದರೆ ಯತ್ನವಿಲ್ಲ. ಸುಮ್ಮನಿದ್ದ.

ದಾರಿಯಲ್ಲಿ ಸಾರೋಟು ಹೋಗುವಾಗಲೂ ಒಬ್ಬರ ಮೈ ಒಬ್ಬ
ರಿಗೆ ತಗಲದಂತೆ ಇಬ್ಬರೂ ಎರಡು ಮೂಲೆ ಹಿಡಿದು ಕೂತಿದ್ದಾರೆ. ಜೋಡಿ
ಕುದುರೆಗಳು ಒಂದೇ ಶ್ರುತಿಯಲ್ಲಿ ಒಂದು ತಾಳದ ಗತಿ ಹಿಡಿದು ನುಡಿ

ಯುತ್ತಿರುವ ಮೃದಂಗದಂತೆ ಏಕಗತಿಯಲ್ಲಿ ನಡೆಯುತ್ತಿವೆ. ನರಸಿಂಹಯ್ಯನಿಗೆ ರಥದ ಅಂದೋಲನದಿಂದ ಕೊಂಚ ತೂಕಡಿಕೆ ಬಂದು ಹಾಗೆಯೇ ಒರಗಿಕೊಂಡಿದ್ದಾನೆ.

ಮಾದೇಗೌಡ ಯೋಚಿಸುತ್ತಾ ಕುಳಿತಿದ್ದಾನೆ: "ಏನು ಮಾಡಿದರೆ ಮಲ್ಲಿ ಮೇಲೆ ತಾನು ಸೇಡು ತೀರಿಸಿಕೊಳ್ಳಬಹುದು ?" ಎಂದು ಅವನಿಗೆ ಒಂದೇ ಯೋಚನೆ. ಅವನೂ ಕಣ್ಣುಮುಚ್ಚಿದ್ದಾನೆ. ರೇಗಿ ಅಂಗಾರವಾಗಿರುವ ಎರಡು ಪದ್ಮಲೋಚನಗಳು ಅವನನ್ನು ದುರುಗುಟ್ಟಿಕೊಂಡು ನೋಡುತ್ತಿವೆ. ಗಾಬರಿಯಾಗಿ ಕಿಟಾರನೆ ಕಿರಚಿಕೊಳ್ಳಬೇಕು. ಅಷ್ಟು ಕ್ರೂರವಾಗಿವೆ. "ಪಾಪಿ ! ಆ ಬಡಹುಡುಗಿಯನ್ನು ಹಿಡಿದುಕೊಳ್ಳುವುದಕ್ಕೆ ಹೋದ ಹಾಗೆ ನನ್ನನ್ನು ಏನಾದರೂ ಕೇಳಬೇಕಾಗಿತ್ತು. ನಿನ್ನ ಆಯುಸ್ಸನ್ನು ಹೀಗೆ ತೊಡೆದು ಬಿಡುತ್ತಿದ್ದೆ : ನಿನ್ನನ್ನು ತಗಣೆಯನ್ನು ಹಿಸುಕಿಹಾಕುವಹಾಗೆ ಮಾಡಿಬಿಡುತ್ತಿದ್ದೆ." ಎಂದು ಗದರಿಸುವ ಹಾಗೆ ಆಗುತ್ತಿದೆ. ಅವನು ಒದರಿಕೊಂಡು ಆ ಕನಸನ್ನು ಬಿಟ್ಟು ಏಳುತ್ತಾನೆ ಆ ಕನಸಿನ ಭ್ರಾಂತಿಯಿನ್ನೂ ಬಿಡದೆ ಅಂಜಿಸುತ್ತದೆ : ಅಂಜಿಸುತ್ತಿದೆ.

ನರಸಿಂಹಯ್ಯನಿಗೂ ಒಂದು ಸಣ್ಣ ಕನಸು; ಅದರಲ್ಲಿಯೂ ಮಲ್ಲಿ. ಮಲ್ಲಿಯು ದೇವಕನ್ಯೆಯಂತೆ ಎದುರು ನಿಂತಿದ್ದಾಳೆ : 'ಬೇಕೆಂದರೆ ನಿನ್ನನ್ನು ಮದುವೆ ಮಾಡಿಕೊಳ್ಳುತ್ತೇನೆ ' ಎನ್ನುತ್ತಾಳೆ. ಅವನು 'ತಾಯಿ, ನೀನು ಜಗನ್ಮಾತೆ, ನನ್ನನ್ನೇಕೆ ಇಂತು ಚಂಡಿಸುವೆ ? ನಿನ್ನಲ್ಲಿ ಮಾತೃಭಾವವನ್ನು ಕಂಡು ಕೃತಾರ್ಥನಾಗುವಂತೆ ಅನುಗ್ರಹಿಸು ಎನ್ನುತ್ತಾನೆ.' 'ಹಾಗಾದರೆ ಹೋಗಲ್ಲಿ ತೆಗೆದುಕೊ ' ಎಂದು ಕೈನೀಡುತ್ತಾಳೆ. ಸುವರ್ಣವೃಷ್ಟಿಯಾಗುತ್ತದೆ. ಅವನು 'ತಾಯಿ, ಹಿಂದೆ ವಿದ್ಯಾರಣ್ಯರಿಗೆ ಸುವರ್ಣವೃಷ್ಟಿಯ ಅನುಗ್ರಹ ಮಾಡಿದೆಯಂತೆ : ಅವರು ಅದನ್ನು ಪ್ರಜೆಗಳಿಗೆ ಹಂಚಿ ವಿಜಯನಗರರಾಜ್ಯವನ್ನು ಕಟ್ಟಿದರಂತೆ. ನಾನೂ ಹಾಗೆಯೇ ಈ ಸುವರ್ಣ ವೃಷ್ಟಿಯನ್ನು ನೀನು ಇನ್ನೂ ಹತ್ತು ಸಲ ಕರೆ : ಅದಷ್ಟನ್ನೂ ಈ ರಾಜ್ಯದಲ್ಲಿರುವವರಿಗೆಲ್ಲ ಹಂಚಿ ನಾನು ಸ್ವರಾಜ್ಯವನ್ನು ಕಟ್ಟುತ್ತೇನೆ, ಎನ್ನುತಾನೆ. ಆಕೆಯು ನಗುತ್ತಾ 'ಸ್ವರಾಜ್ಯವನ್ನು ಕಟ್ಟುವುದಕ್ಕೆ ನೀನು ಅರ್ಹಯೋಗ್ಯನಾ

ಗಿದ್ದೀಯೆ' ಎನ್ನುತ್ತಾಳೆ. 'ನಾನು ಪೂರ್ಣಯೋಗ್ಯನಾಗುವದು ಯಾವಾಗ?' ಎಂದವನು ಕೇಳುತ್ತಾನೆ. 'ಅಗೋ, ನೋಡು, ನಿನ್ನ ದೇಶಬಾಂಧವರನ್ನು ಬ್ರಿಟಿಷರು ಬಂಧಿಸಿರುವರು ಎಂದು ನೀನು ತಿಳಿದುಕೊಂಡಿದ್ದೀಯೆ. ನಿಮಗೆ ನೀವೇ ತೊಡಿಸಿಕೊಂಡಿರುವ ಈ ನಿಗಳಗಳನ್ನು ಕಳಚು. ಆಮೇಲೆ ಅವರು ತೊಡಿಸಿರುವ ಸಂಕಲೆಯು ಬಿಡುವುದು' ಎನ್ನುತ್ತಾಳೆ. ಹಾಗಾದರೆ ಯಾವಾಗ? ಎಂದು ಮತ್ತೆ ಪ್ರಶ್ನೆ; 'ನಾನೂ ನಿನ್ನ ಜೊತೆಯಲ್ಲಿ ಮನೆಬಿಟ್ಟು ಬಂದಾಗ ಅದು ಆಗುವುದು' ಎಂದು ಉತ್ತರ. 'ಹಾಗಾದರೆ, ನೀನು ಮನೆಯನ್ನು ಬಿಟ್ಟು ಬರುವೆಯಾ?' ಎಂದು ಮತ್ತೆ ಪ್ರಶ್ನೆ. 'ನೋಡುತ್ತಿರು' ಎಂದುತ್ತರ.

ಕನಸು ಮುಗಿಯಿತು. ಎಚ್ಚರವಾಯಿತು. ಆದರಿನ್ನೂ ಭ್ರಾಂತಿ. ಮಲ್ಲಿಯ ಮಡುಲಲ್ಲಿ ತಾನು ಮಗುವಾಗಿ ಮಲಗಿರುವ ಹಾಗೆ! ಅವಳು ತನ್ನನ್ನು ತಟ್ಟುತ್ತಿರುವ ಹಾಗೆ ತೋರುತ್ತಿದೆ.

ಗೌಡನು ಕಣ್ಣುಜ್ಜಿಕೊಂಡು ಎದ್ದನು. ಯಾರೋ ತನ್ನನ್ನು ಕಾಡುತ್ತಿದ್ದವರು ಕೆಳಕ್ಕಿಳಿದು ಹೋದಹಾಗಾಯಿತು. ನರಸಿಂಹಯ್ಯನು ಕಣ್ಣುಜ್ಜಿಕೊಂಡು ಎದ್ದನು. ಯಾರೋ ದೇವತೆಯು ಒಳಕ್ಕೆ ಹತ್ತಿ ಬಂದಂತಾಯಿತು. ಇಬ್ಬರೂ ಒಬ್ಬರನ್ನೊಬ್ಬರು ಕೇಳಿದರು. ಅದೂ ಏಕಕಾಲದಲ್ಲಿ.

"ಈಗ ಇಳಿದು ಹೋದವರು ಯಾರು?"

"ಈಗ ಹತ್ತಿಬಂದವರು ಯಾರು?"

ಮತ್ತೆ ಇಬ್ಬರೂ "ಹಾಗೆಂದರೇನು?"

ಗಾಡಿಯಲ್ಲಿ ಯಾರೂ ಇಲ್ಲ: ಇರುವವರು ತಾವಿಬ್ಬರೇ ಎಂದು ತಿಳಿದು ಒಬ್ಬನು ತನ್ನ ಪ್ರಶ್ನೆಯನ್ನು ಬಿಟ್ಟನು: ಇನ್ನೊಬ್ಬನು ಗಾಡಿಯಿಂದ ಬಗ್ಗಿ ರಸ್ತೆಯೆಲ್ಲಾ ನೋಡಿದನು: ಯಾರೂ ಇರಲಿಲ್ಲವಾಗಿ ಅವನೂ ಸುಮ್ಮನಾದನು.

ಪಟೇಲನಿಗೆ ನರಸಿಂಹಯ್ಯನ ಹತ್ತಿರ ಏನೋ ಮಾತನಾಡಬೇಕು ಎನ್ನಿಸುತ್ತಿದೆ. ಆದರೆ ಏನೋ ಸಂಕೋಚ: ಏನೋ ದಿಗಿಲು.

ಗಾಡಿಯು ಮುಂದೆ ಮುಂದೆ ಓಡುತ್ತಿದೆ. ಇನ್ನು ಒಂದೆರಡು ಮೈಲಿ ಮಾತ್ರ. ಮೈಸೂರು ಸಿಕ್ಕಿಹೋಗುತ್ತದೆ.

ಕೊನೆಗೆ ತಡೆಯಲಾರದೆ ಬಂತು: "ಸ್ವಾಮಿ, ಮೇಷ್ಟ್ರೆ, ಒಂದುಪಕಾರ ಮಾಡಿ. ಹಾದಿರಂಪು ಬೀದಿರಂಪು ಮಾಡಬೇಡಿ. ನನ್ನ ಮಾನ ಕಾಪಾಡಿ" ಎಂದು ಕೈಹಿಡಿದುಕೊಂಡನು. ನರಸಿಂಹಯ್ಯ ನಿಗೆ ಇವನು ನಾಯಕನೊಡನೆ ಆಡಿದ್ದ ಮಾತೆಲ್ಲ ನೆನೆಪಾಯಿತು. "ಅಲ್ಲಯ್ಯ, ನೀವು ನಿಮ್ಮ ಕೋಮಿನ ಉದ್ಧಾರಕ್ಕೆ ಬದ್ಧಕಂಕಣರು: ಅದಕ್ಕಾಗಿ ಮತ್ತೊಂದು ಕೋಮನ್ನು ತುಳಿಯಲೂ ಸಿದ್ಧರು: ಇಂತಹ ಧೀರರಿಗೆ ಯಃಕಶ್ಚಿತನಾದ ನನ್ನಿಂದ ಉಪಕಾರವೇನು? ಅಪಕಾರ ವೇನು?" ಎಂದು ಕೇಳಿದನು.

ಗೌಡನು ಕೈಹಿಡಿದುಕೊಂಡು "ಇಲ್ಲ ತಪ್ಪಾಯಿತು. ಇನ್ನು ಮುಂದೆ ನಾನು ಅನಾಥರ ಮೇಲೆ ಕೈಮಾಡುವುದಿಲ್ಲ" ಎಂದು ಅಂಗ ಲಾಚಿಕೊಂಡನು.

ನರಸಿಂಹಯ್ಯನಿಗೆ ಅದನ್ನು ಕಂಡು ಅಸಹ್ಯವಾಯಿತು: "ಅಯ್ಯೋ ಬಡಾಯಿಗಾರ! ಕೊನೆಗೂ ಇಷ್ಟೇನೆ? ನೀನೊಬ್ಬ ಖರ್ಜಿಕಾಯಿ! ಅಂಜಿದರೆ ಅಂಜಿಸುವುದು: ಅಂಜದಿದ್ದರೆ ಅಂಜುವುದು. ನೀನೂ ಆ ಧೀರನ ಕುಲದಲ್ಲಿ ಹುಟ್ಟಿದವನೇ ಏನು?" ಎಂದು ಏನೋ ಯೋಚಿಸಿಕೊಂಡು "ಬನ್ನಿ. ಆ ಪುಣ್ಯಾತ್ಮನಿಗಾಗಿ ಎಲ್ಲವನ್ನೂ ಸಾರಿಸೋಣ" ಎಂದು ತಾತಯ್ಯನವರ ಬಳಿಗೆ ಕರೆದುಕೊಂಡು ಹೋದನು.

## ೩೪

ಮಲ್ಲಣ್ಣ ದಂಪತಿಗಳೂ ಶಂಭುರಾಮಯ್ಯ ದಂಪತಿಗಳೂ ಒಟ್ಟಿಗೇ ಇದ್ದಾರೆ. ಅವರಿಗೆ ಬೇರೆ ಕೆಲಸ ಏನೂ ಇಲ್ಲ. ಬೆಳಗೆದ್ದು ಸ್ನಾನ

ಮಾಡುತ್ತಾರೆ. ನಾಲ್ವರೂ ಭಗವದ್ಗೀತೆ ಹಿಡಿದು ಕೂರುತ್ತಾರೆ. ಪಾರಾಯಣ ಎಂಟುಗಂಟೆವರೆಗೂ ಮಾಡಿ, ಒಂದಷ್ಟು ಹೊತ್ತು ಧ್ಯಾನ ದಲ್ಲಿದ್ದು ದೇವರ ಪೂಜೆ ಮಾಡಿ ಈಚೆಗೆ ಬರುತ್ತಾರೆ. ಅಡಿಗೆಯವಳು ತಂದಿಟ್ಟ ಉಪಾಹಾರ ಅಷ್ಟು ಸೇವಿಸಿ ಬಂದು ವಿವೇಕಾನಂದ ಸಂಘದಲ್ಲಿ ಕುಳಿತು ಕೊಳ್ಳುತ್ತಾರೆ. ಅಲ್ಲಿ ದಿನವೂ ಪರಮಹಂಸರು, ರಾಮ ತೀರ್ಥರು, ವಿವೇಕಾನಂದರು, ನಿಜ ಗುಣರು, ಮೊದಲಾದ ಮಹನೀ ಯರ ಉಪದೇಶಗಳನ್ನು ಕುರಿತು ಅಷ್ಟು ಮಾತುಕಥೆಗಳಾಗುತ್ತವೆ. ಮಧ್ಯಾಹ್ನ ಮೂರರಿಂದ ಐದರವರೆಗೆ ಭಾರತ ಭಾಗವತ ಪುರಾಣ. ಮತ್ತೆ ಸಂಜೆ ಪೂಜೆ ಮಂಗಳಾರತಿ–ದಿನವೂ ಹೀಗೆ ನಡೆಯುತ್ತಿದೆ.

ಈ ದಿನ ಏಕೋ ಕೆಂಪಮ್ಮನಿಗೆ ಹಾಸುಗೆಯಿಂದ ಏಳುವ ವೇಳೆಗೇ ಏನೋ ಮುಜಗರ. ಆದರೂ ಎದ್ದು ಸ್ನಾನಮಾಡಿ ಕಷ್ಟ ಪಟ್ಟುಕೊಂಡು ಗೀತಾ ಪಾರಾಯಣ ಮುಗಿಸಿದಳು. ಮೈಕೈಯೆಲ್ಲ ನೋವು–ಆನಂದಮ್ಮನಿಗೆ ಹೇಳಿ ಮನೆಯಲ್ಲೇ ಮತ್ತೆ ಮಲಗಿ ಕೊಂಡಳು. ಮಧ್ಯಾಹ್ನದ ವೇಳೆಗೆ ಬಲವಾಗಿ ಜ್ವರ ಬಂದಿದೆ.

ಮಲ್ಲಣ್ಣ ಮಗ್ಗುಲಲ್ಲೇ ಕುಳಿತಿದ್ದಾನೆ: "ಏನು ಕೆಂಪೀ! ಯಾವುದಾದರೂ ಔಸ್ತಿ, ಕಷಾಯ ಮಾಡಲಾ?" ಎಂದು ಕೇಳಿದ.

ಕೆಂಪಿಯು ಹೊದೆದಿದ್ದ ಮುಸುಕು ತೆಗೆದು ಸುತ್ತಲೂ ನೋಡಿ "ಏನೂ ಬ್ಯಾಡಿ–ನೀವು ಬೇಕಾದ್ದಾಗಲಿ ನನ್ನ ಮಗ್ಗುಲಲ್ಲಿದ್ದು ಬಿಡಿ. ನಮ್ಮ ಮಲ್ಲೀನ ಕರಿಸಿ. ಈ ಸರ್ತಿ ನಾ ಬದುಕೇನೋ ಇಲ್ಲವೋ ಕಾಣೆ. ಎಲ್ಲಿ? ಇತ್ತ ಬನ್ನಿ. ಮೈಮೇಲೆ ಗ್ಯಾನ ಇರೋವಾಗಲೇ ಆನಂದ ಪಟ್ಟುಬುಡ್ತೀನಿ." ಎಂದು ಗಂಡನನ್ನು ಬರಸೆಳೆದು ಮೊಕವನ್ನು ಮುದ್ದಾಡಿಬಿಟ್ಟಳು. "ಇನ್ನು ಸತ್ತರೂ ನನಗೆ ಚಿಂತೆಯಿಲ್ಲ" ಎಂದು ದುಪ್ಪಟಿ ಎಳೆದುಕೊಂಡು ಮಲಗಿಬಿಟ್ಟಳು.

ಮಲ್ಲಣ್ಣ ಯೋಚಿಸಿದ; "ಇದ್ಯಾಕೆ ಹಿಂಗೆ ಮಾತಾಡ್ತಾಳೆ? ಒಂದು ವೇಳೆ ಇವಳು ಹೇಳಿದಂಗೇ ಆಗ್ಹೋದರೆ, ನಾನೇನು ಮಾಡ ಬೇಕು? ಇವಳಿಂದ ನನಗೆ ಸಂಸಾರ! ಈ ಮುಕ್ಕನೇ ಹೋದಮೇಲೆ ನಾನಿಲ್ಲಿದ್ದು ಮಾಡೋದಾದರೂ ಏನು? ನಾನೇಕೆ ಮತ್ತೆ ನನ್ನ ಕಿನ್ನರಿ

ತಕೊಂಡು ದೇಶದ ಮೇಲೆ ಹೊರಟು ಹೋಗಬಾರದು? ಏನೋ ಕಾಸಿ, ರಾಮೇಸ್ವರ, ಅಂತ ತಿರುಕ್ಕೊಂಡು, ಎಲ್ಲಂದರಲ್ಲಿ ಇದ್ದು ಬುಡೋದು? ಆದರೆ ನಾಯಕರು ಇರೋ ಅಂದರೋ? ಮಲ್ಲಿ ಹೋಗ ಕೂಡದು ಅಂದರೋ?"

ಅಷ್ಟರಲ್ಲಿ ಆನಂದಮ್ಮ ಶಂಭುರಾಮಯ್ಯ ಪುರಾಣ ಮುಗಿಸಿಕೊಂಡು ಬಂದರು. ಆನಂದಮ್ಮ ಅವಸರ ಅವಸರವಾಗಿ ಕೇಳಿದಳು, "ಹೇಗಿದೆ ಕೆಂಪಮ್ಮನವರಿಗೆ?"

"ಜರ ಕಾಯಿತಾ ಆದೆ."

"ಮಜ್ಜಿಗೆ ಹಳ್ಳೀಗೆ ವರ್ತಮಾನ ಕಳಿಸಿದಿರಾ?"

"ಮಧ್ಯಾಹ್ನವೇ ಕಳೀಸ್ತು."

"ಈಗ ಔಷಧಿ ಏನು ಕೊಡೋದು?"

"ಏನೂ ಬೇಡ ಅಂತಾಳೆ."

"ಅವರು ಹಾಗಂದರೆ ನಾವು ಸುಮ್ಮನಿರೋಕೆ ಆದೀತೆ? ಕೆಂಪಮ್ಮ! ಏನ್ರೀ! ಯಾವ ಔಷಧಿ ತೆಗೆದುಕೋತೀರ್ರೀ? ಆಸ್ಪತ್ರೆ ಔಷಧಿ ತೆಗೆದುಕೋತೀರಾ? ನೇಟಿವ್ ಔಷಧಿ ತೆಗೆದುಕೋತೀರಾ?"

ಕೆಂಪಮ್ಮ ಮುಸುಕು ತೆಗೆದಳು: ಆನಂದಮ್ಮನಿಗೆ ಒಲೆಹತ್ತಿರ ಕುಳಿತಂತಾಯಿತು. "ತಾಯಿ, ನನಗೆ ಆಸ್ಪತ್ರೆ ಔಸ್ತಿ ಅಸಂಯ್ಯ! ಯಾವ ಯಾವ ಜಾತಿಯೋರ ನೀರು ನಾನ್ಯಾಕೆ ಕುಡೀಲಿ? ನನಗೆ ಏನೂ ಬೇಡ, ಸ್ವಾಮಿಪಾದ ಸೇರಿಕೊಳ್ಳೋವ. ಎಲ್ಲಾ ಚೆನ್ನಾಗಿರೋ ವಾಗಲೇ ಕಣ್ಣುಮುಚ್ಚಿಕೊಳ್ಳೋವ ಅನ್ನಸ್ತಾ ಅದೆ. ಏನೋ ನಮ್ಮ ಮಲ್ಲೀ ಹೊಟ್ಟೇಲಿ ಒಂದುಮೊಗ ಕಂಡಿದ್ದರೆ ಆಗುತ್ತಿತ್ತು. ಓಗಲಿ. ಎಲ್ಲಾ ನಾಕೂ ಮೂಲೆ ಚೆನ್ನಾಗದೆ. ನಮ್ಮ ಬುದ್ಧಿಯೋರ ಮುಂದೆ ಅರಸಿನ ಕುಂಕುಮ ಇಟ್ಟುಕೊಂಡು ಹೋದರೆ ನಾನೇ ಪುಣ್ಯವಂತೆ:"

ಆನಂದಮ್ಮ ಅವಳ ಮಾತುಗಳನ್ನು ಕೇಳಿದಳು-ಜ್ವರದ ತಾಪ. ಮಾತು ಧಾರಾಳವಾಗಿ ಬರವೆ ಅಲ್ಲಲ್ಲಿ ಕಚ್ಚಿ ಕಚ್ಚಿ ಬಂದಂತೆ ಬರುತ್ತದೆ. ಆದರೂ ಆ ಮಾತಿನ ಭಾವ ಅವಳ ಮನಸ್ಸಿಗೆ ಹಿಡಿಯಿತು. 'ಅವಳು ಹೇಳುವುದೂ ನಿಜ-ಎಂದಿದ್ದರೂ ಹೋಗಬೇಕು. ಎಲ್ಲವೂ ನೇರವಾಗಿ

ಇರುವಾಗಲೇ ಹೋಗಬಾರದೇಕೆ ?' ಎನ್ನಿಸಿತು. "ನನಗೇಕೆ ಹೀಗೆ ತೋರಿತು ?" ಎಂದು ಅವಳೇ ಆಶ್ಚರ್ಯಪಟ್ಟಳು. ಏಕೆ ಹೀಗೆನ್ನಿಸಿತೋ ಅವಳಿಗೇ ತಿಳಿಯದು. 'ಯಾರಾದರೂ ಬಲವಂತವಾಗಿ ತನ್ನ ಎದೆಯಲ್ಲಿ ಆ ಮಾತುಗಳನ್ನು ಮೂಟೆ ಕಟ್ಟಿ ಹಾಕಿದರೋ ?' ಎಂದು ಕೂಡಾ ಅನ್ನಿಸಿತು.

ಆ ಮಾತುಗಳನ್ನು ಅತ್ತ ತಳ್ಳಿ ಆನಂದಮ್ಮನು ಎದ್ದು ತಲೆಗೆ ಕಿಬ್ಲೊಟ್ಟೆಗೆ ಒದ್ದೆಬಟ್ಟೆ ಪೋಲ್ಟೀಸ್ ಹಾಕಿದಳು. ಕೂಡಲೇ ಎಗ್ನ್ಯೂ ಮಿಕ್ಸ್‌ಚರ್ ತರಿಸಿ ಒಂದಿಷ್ಟು ಕೊಟ್ಟು, ಡಾಕ್ಟರಿಗೆ ಹೇಳಿ ಕಳುಹಿಸಿದಳು. ಡಾಕ್ಟರ್ ಬಂದುನೋಡಿ ಇನ್ನೊಂದಿಷ್ಟು ಮಿಕ್ಸ್‌ಚರ್ ಕೊಟ್ಟು, ನಾಳೆಬಂದು ನೋಡುವುದಾಗಿ ಹೇಳಿಹೋದರು.

ರಾತ್ರಿಯೆಲ್ಲ ಜ್ವರಕಾಯಿತು : ಬೆಳಗಿನ ಝಾವದಲ್ಲಿ ಕೆಂಪಿಯು ಕಿರಿಚಿಕೊಂಡು ಎದ್ದುಬಿಟ್ಟಳು : "ಯಾರೋ ನನ್ನ ಹಿಡಿದೆಳೀತವ್ರೇ ! ಎಳೀತವ್ರೇ !" ಎಂದು ಅರಚುತ್ತಿದ್ದಾಳೆ.

ಆನಂದಮ್ಮ ಶಂಭುರಾಮಯ್ಯ ಮಲ್ಲಣ್ಣ ಮೂವರೂ ವಿಶ್ವಪ್ರಯತ್ನಮಾಡಿ ಅವಳನ್ನು ಸಮಾಧಾನಮಾಡಿದರು.

ಸುಮಾರು ಒಂಭತ್ತು ಗಂಟೆ ಇರಬಹುದು-ಸಾರೋಟು ಬಂತು ; ಮಲ್ಲಿ, ನಾಯಕರು, ಸುಂದರಮ್ಮಣ್ಣಿ ಮೂವರೂ ಬಂದರು. ಮಲ್ಲಿಯು ಓಡಿಹೋಗಿ ತಾಯಿಮಗ್ಗುಲಲ್ಲಿ ಕುಳಿತುಕೊಂಡು "ಅವ್ವಾ ! ಅವ್ವಾ !" ಎಂದಳು. ಕೆಂಪಿಯು ಆ ಶಬ್ದವನ್ನು ಕೇಳುತ್ತಲೇ "ಬಂದೆಯಾ ಅವ್ವಾ !" ಎಂದು ಆನಂದದಿಂದ ಮಲ್ಲಿಯನ್ನು ತಬ್ಬಿಕೊಂಡಳು. ಅವಳಿಗೆ ಆ ಆನಂದದಲ್ಲಿ ಹೊಸದಾಗಿ ಚೈತನ್ಯ ಕೂಡಿತ್ತು. ಅಬ್ಬಾ ಆ ವಾತ್ಸಲ್ಯದ ಪ್ರಭಾವ ಎಂಥದು ! ತಾಯಿಗೆ ಮಕ್ಕಳನ್ನು ಕಂಡರೆ ಯೌವನವು ಉಕ್ಕುವುದಂತೆ ; ಆ ಮಗಳನ್ನು ಮುಟ್ಟಿ ಅವಳಿಗೆ ಗುಣವಾಯಿತೋ ಎನ್ನುವ ಮಟ್ಟಿಗೂ ಆಯಿತು. ಜ್ವರವು ಕಡಿಮೆಯಾದಂತಾಯಿತು.

ಆನಂದಮ್ಮನು ಒದ್ದೆಬಟ್ಟೆಯಲ್ಲಿ ಮೈಯೆಲ್ಲಾ ಒರೆಸಿದಳು. ರಾಣಿಯೂ ವಿಶ್ವಾಸದಿಂದ ಉಪಚಾರದ ಮಾತುಗಳನ್ನಾಡಿ ಸಮಾಧಾನ-

ಮೂಡಿದಳು : ಕೆಂಪಿಯು ಕೈಮುಗಿದು ಆಕೆಯ ಪಾದಗಳನ್ನು ಮುಟ್ಟಿ ಕಣ್ಣಿಗೊತ್ತಿಕೊಂಡು "ಬುದ್ಧಿ, ತಾವು ದೊಡ್ಡಮನಸ್ಸುಮಾಡಿ ನನ್ನ ಮಗೀನ ಕೈಹಿಡಿದು ಕಾಪಾಡಿದ್ರಿ. ನಾನು ನನ್ನ ಚರ್ಮ ಕೊಯ್ದು ನಿಮ್ಮ ಪಾದಕ್ಕೆ ಜೋಡುಮಾಡಿ ತೊಡಿಸಿದರೂ ತಮ್ಮ ಋಣ ತೀರಿಸ ಲಾರೆ. ಈ ಸಲ ನಾನು ಬದುಕೋ ಅಂಗಿಲ್ಲ. ಅಪ್ಪಣೆಕೊಡಿ. ಓಗ್ಬುಟ್ಟು ಬರ್ತೀನಿ." ಎಂದಳು.

ಸಹಜವಾಗಿ ಸರಳವಾಗಿ ಬಂದ ಮಾತುಗಳು ರಾಣಿಯ ಹೃದಯ ವನ್ನು ಕಲಕಿದುವು. "ಯಾಕೆ ಕೆಂಪಮ್ಮಣ್ಣಿ ! ಇನ್ನೂ ಎಷ್ಟುಕಾಲ ಇರಬೇಕೋ ಏನೋ? ಮೊಮ್ಮಗನ್ನ ಎತ್ತಿಕೋಬೇಡವಾ? ಸುಮ್ಮನಿರಿ ಹಂಗೆಲ್ಲ ಆಡಬಾರದು" ಎಂದು ಮೃದುವಾಗಿ ನುಡಿದು ಧೈರ್ಯ ಹೇಳಿದಳು.

ನಾಯಕನೂ ಒಂದುಗಳಿಗೆ ಅಲ್ಲಿದ್ದು ಎಲ್ಲವನ್ನೂ ವಿಚಾರಿಸಿ ಕೊಂಡು ತನ್ನ ಕೋಣೆಗೆ ಬಂದನು.

ಇನ್ನೊಂದು ಗಳಿಗೆಗೆ ಡಾಕ್ಟರು ಬಂದು ನೋಡಿದರು. "ಇದೇಕೋ ಪಲ್ಸ್‌ಫೇಲ್ ಆಗುತ್ತಿದೆ. ದೊಡ್ಡಡಾಕ್ಟರನ್ನು ಕರೆಸಿದರೆ ಒಳ್ಳೆಯದು." ಎಂದರು. ಲೇಡೀ ಡಾಕ್ಟರೂ ಬಂದರು. ಅವರೂ ಹೋಗಿ ಇನ್ನೊಬ್ಬ ಭಾರಿಡಾಕ್ಟರನ್ನು ಕರೆತಂದರು. ಊಟದ ಹೊತ್ತಿಗೆ ಮೂವರು ಭಾರಿ ಭಾರಿ ಡಾಕ್ಟರುಗಳು ಬಂದು ನೋಡಿದರು. ಏನೇನೋ ಔಷಧಗಳನ್ನು ಕೊಟ್ಟರು. ಆದರೆ ಅವರ ನಿರೀಕ್ಷೆಯಂತೆ ರೋಗವು ಇಳಿಯಲಿಲ್ಲ. ಆಗ ಇನ್ನೂ ಇಂಜೆಕ್ಷನ್‌ಗಳು ಬಂದಿರಲಿಲ್ಲ : ಅಲ್ಲೋಪತಿಯೂ ಪೌಡರ್ ಮಿಕ್ಸ್‌ಚರ್‌ಗಳಲ್ಲೇ ಇದ್ದ ಕಾಲ.

ಸಂಜೆಯಾಗುತ್ತಾ ಕೆಂಪೀಗೆ ಸಂಕಟವು ಹೆಚ್ಚಾಗುತ್ತ ಬಂತು. ಗಂಜಿಯೂ ದಕ್ಕಲಿಲ್ಲ. ಜ್ಞಾನಾಜ್ಞಾನವಾಗುತ್ತ ಬಂತು. ಜ್ಞಾನ ವಾದಾಗ ಮಲ್ಲಿಯು ಮಗ್ಗುಲಲ್ಲಿ ಕುಳಿತಿದ್ದು "ಅವ್ವಾ ! ಏನಾಗ ಬೇಕು ?" ಎಂದಳು. ಕೆಂಪಿಯು ಕಣ್ಣು ಆಗಲವಾಗಿ ತೆರೆದು "ಎರಡಾಸೆ" ಎಂದಳು.

"ಹೇಳವ್ವಾ. ಮಾಡೋವ."

" ನೀನೂ ನಾಯಕರು ಜೊತೇಲಿ ನಿಂತುಕೊಳ್ಳಿ ಕಣ್ಣಾರ ನೋಡಬೇಕು. ಆ ಮಕ್ಕಳು ಅವರಿಗೇನಾದರೂ ಮಾಡು."

ಮಲ್ಲಿಯು ಕಣ್ತುಂಬ ನೀರಿಟ್ಟುಕೊಂಡು ಹೋಗಿ ಗಂಡನನ್ನು ಕರೆದುಕೊಂಡು ಬಂದಳು. ಇಬ್ಬರೂ ಜೊತೆಯಲ್ಲಿ ನಿಂತರು. ಕೆಂಪೀಗೆ ಉಮಾ ಮಹೇಶ್ವರರ ದರ್ಶನವಾಗಿದ್ದರೂ ಅಷ್ಟು ಸಂತೋಷವಾಗುತ್ತಿರಲಿಲ್ಲ. ಆ ಆನಂದವು ಅವಳಿಗೆ ದೇಹಾದ್ಯಂತವೂ ವ್ಯಾಪಿಸಿತು. ಜ್ವರವನ್ನು ಹಿಮ್ಮೆಟ್ಟಿಸಿತು. ಎದ್ದು ಗಂಡನನ್ನು ಒರಗಿಕೊಂಡು ಕುಳಿತಳು. ಇಬ್ಬರಿಗೂ ಕೈ ಮುಗಿದಳು. "ಬಂದೆ! ಬಂದೆ!" ಎಂದು ಕೆಳಗುರುಳಿದಳು. ಒಂದೇಗಳಿಗೆಯೊಳಗಾಗಿ ಮೈಯೆಲ್ಲ ತಣ್ಣಗಾಗಿ ಹೋಯಿತು.

## ೩೫

ಎಲ್ಲರಿಗೂ ಮಲ್ಲಿಯನ್ನು ಸಮಾಧಾನಪಡಿಸುವುದು ದುಸ್ಸಾಧ್ಯವಾಯಿತು. ಅವಳು ಅಳುವುದಿಲ್ಲ. ಮಾತೂ ಆಡುವುದಿಲ್ಲ. ಕರ್ತೃತ್ವವೇ ಇಲ್ಲದ ಅಚೇತನ ಮೂರ್ತಿಯಂತೆ ಕುಳಿತಲ್ಲಿ ಕುಳಿತಿರುತ್ತಾಳೆ. ಕಣ್ಣು ಬಿಟ್ಟಿದೆ. ಏನನ್ನೂ ನೋಡುತ್ತಿಲ್ಲ. ಬಾಯಿ ಮುಚ್ಚಿದೆ: ತುಟಿ ಪಿಟಕ್ಕೆನ್ನುವುದಿಲ್ಲ. ಮುಖವು ಗಂಭೀರವಾಗಿದೆ. ಎಳ್ಳಷ್ಟು ಚಲನವಿಲ್ಲ. ಹೋಗಿ ಮಗ್ಗುಲಲ್ಲಿ ಕುಳಿತುಕೊಂಡು ಮಾತನಾಡಿಸಿದರೆ, ಎರಡು ಸಲವೋ ಮೂರುಸಲವೋ ಕೂಗಿದರೆ.'ಆಂ' ಎಂದು ಎಲ್ಲಿಯೋ ಪಾತಾಳ ಕುಹರದಿಂದ ಎದ್ದು ಬಂದವಳಂತೆ, ಉತ್ತರ ಕೊಡುತ್ತಾಳೆ. ಮತ್ತೆ ಪ್ರಬಲ ಪ್ರಯತ್ನದಿಂದ ನೀರಿನ ಮೇಲಕ್ಕೆ ತಲೆಯೆತ್ತಿದ್ದ ಮೀನನ್ನು ಯಾವುದೋ ಅಜ್ಞಾತಶಕ್ತಿಯು ಎಳೆದುಕೊಂಡು ಹೋದರೆ ನೀರು ಮತ್ತೆ ನಿಶ್ಚಲವಾಗುವಂತೆ ತಣ್ಣಗಾಗುತ್ತಾಳೆ, ಆದರೆ ನೋಡಿದವರಿಗೆಲ್ಲಾ ಬಿರುಗಾಳಿಯಲ್ಲಿ ಅಲ್ಲೋಲ ಕಲ್ಲೋಲವಾಗಿ ಮಹಾಕ್ಷೋಭದಲ್ಲಿ ಸಿಕ್ಕಿ ಒದ್ದಾಡುತ್ತಿರುವ ಸಾಗರವನ್ನು ಕಂಡಂತೆ ಆಗಿ ಗಾಬರಿ

ಯಾಗುತ್ತದೆ. ಎಲ್ಲಿಯೋ ಸಣ್ಣಗೆ ಉಸಿರಾಡುತ್ತಿದೆ. ಕಣ್ಣಿಟ್ಟು ನೋಡಿದರೆ ಎದೆಯು ಉಬ್ಬುತ್ತಿರುವುದೂ ಇಳಿಯುತ್ತಿರುವುದೂ ಕಾಣಿಸುತ್ತದೆ. ಅದಷ್ಟು ಬಿಟ್ಟರೆ ಅಲ್ಲಿ ಸೋಫಾದಮೇಲೆ ಕುಳಿತಿರುವುದು ಶಿಲಾಮೂರ್ತಿಯೋ, ಮನುಷ್ಯ ವಿಗ್ರಹವೋ ಅದನ್ನು ಯಾರೂ ಹೇಳುವುದಕ್ಕೇ ಸಾಧ್ಯವಿಲ್ಲ.

ನಾಯಕನಿಗೆ ಒಮ್ಮೊಮ್ಮೆ 'ಆ ಮೇಷ್ಟ್ರಾದರೂ ಬಂದರೆ, ಇವಳ ಸಹಜವಾದ ನಗು ಬಂದೀತೇನೋ ?' ಅನಿಸುತ್ತದೆ. ಅವನಿಗೆ ಏನು ಮಾಡುವುದಕ್ಕೂ ತೋರದು. ಅವನ ಬಲವಂತಕ್ಕೆ ಏನೋ ಊಟದ ಶಾಸ್ತ್ರ ಮಾಡುತ್ತಾಳೆ : ಹಾಸುಗೆಯಲ್ಲಿ ಮಲಗಿದರೂ ಮುಸುಕು ಹಾಕಿಕೊಂಡು ಅಳುತ್ತಾಳೆ. ಮೈಯೆಲ್ಲಾ ಜ್ವರ ಬಂದಹಾಗೆ ಸುಡುತ್ತದೆ.

ಅವಳ ದುಃಖದ ಆಳವನ್ನೂ ಯಾರೂ ತಿಳಿಯಲಾರರು: ಅದರ ಪರಿಹಾರವಂತೂ ಗೊತ್ತೇ ಇಲ್ಲ.

ಮಲ್ಲಣ್ಣ ಆಗಾಗ ತತ್ವ ಹೇಳಿಕೊಂಡು ಕಣ್ಣೀರು ಒರೆಸಿಕೊಳ್ಳುತ್ತಾನೆ. ಆ ದಂಪತಿಗಳು ತಮ್ಮ ಆತ್ಮೀಯರು ಯಾರೋ ಹೋದರೆ ಆಗುವಂತೆ ಆಗಿರುವ ಮನಶ್ಶೂನ್ಯತೆಯನ್ನು ಅನುಭವಿಸುತ್ತಿದ್ದಾರೆ.

ಕೆಂಪಿಯು ಒಂದು ವಿಚಿತ್ರವಾದ ರೀತಿಯಲ್ಲಿ ಎಲ್ಲರ ಮನಸ್ಸಿನಲ್ಲೂ ನಿಂತು ತಾನಿಲ್ಲದಿರುವಿಕೆಯನ್ನು, ತನ್ನ ಅಭಾವವನ್ನು ತೋರಿಸುತ್ತಿದ್ದಾಳೆ.

ಮೂರು ದಿನವಾಯಿತು. ನಾಯಕನಿಗೆ ನರಸಿಂಹಯ್ಯ ಬಂದಿಲ್ಲವಲ್ಲ ಎಂದು ಚಿಂತೆ. ಬೆಂಗಳೂರಿಗೆ ಹೋಗಿರುವುದು ಗೊತ್ತು. ಅವನ ವಿಳಾಸ ತಿಳಿದಿದ್ದರೆ ಟೆಲಿಗ್ರಾಂ ಆದರೂ ಕಳುಹಿಸಬಹುದಿತ್ತು. ಅದೂ ಗೊತ್ತಿಲ್ಲ. ಏನೋ ಟಾಗೂರ್ ಬಂದಿರುವರಂತೆ ! ಅವರನ್ನು ನೋಡುವುದಕ್ಕೆ ಹೋಗಿದ್ದಾನೆ : ಎಲ್ಲಿ ಇಳಿದಿದ್ದಾನೋ ಗೊತ್ತಿಲ್ಲ.

ಆದಿನ ಮಧ್ಯಾಹ್ನ ಶಂಭುರಾಮಯ್ಯನು ಬಂದು "ನಾಳೆ ರವೀಂದ್ರನಾಥ ಟಾಗೂರರು ಬರುತ್ತಾರಂತೆ" ಎಂದು ಸುದ್ದಿಯನ್ನು ಹೇಳಿದನು. ಇನ್ನೂ ಆ ಮಾತು ಮುಗಿಯುತ್ತಿದ್ದಹಾಗೆಯೇ ನರಸಿಂಹಯ್ಯನು ಬಂದನು. ಅವನಿಗೂ ಮೊಕ ಇಳಿದುಹೋಗಿತ್ತು. ಅವನ

ಜೊತೆಯಲ್ಲಿ ಅವನ ತಾಯಿಯೂ ಬಂದಿದ್ದರು.

ನಾಯಕನು ಅವನನ್ನು ಕಂಡ ಕೂಡಲೇ ಬಡವನು ನಿಧಿಯನ್ನು ಕಂಡಂತೆ ಹರ್ಷಿಸಿದನು. ಅವನಿಗೆ ಇನ್ನು ಮಲ್ಲಿಯು ಉಳಿದಳು ಎನ್ನಿಸಿತು. "ಬನ್ನಿ" ಎಂದು ಸೋಫಾದಲ್ಲಿ ಕೂರಿಸಿದನು.

ನರಸಿಂಹಯ್ಯನು "ಕೆಂಪಮ್ಮನವರು ಹೋಗಿಬಿಟ್ಟರಂತೆ ?" ಎಂದು ವಿಚಾರಿಸಿದನು.

ನಾಯಕನು "ಕೆಂಪಮ್ಮನೋರು ಏನೋ ವಯಸ್ಸಾಗಿತ್ತು. ಹೋದರು. ಯಾವೊತ್ತಿದ್ದರೂ ಹೋಗಬೇಕಾದ್ದು. ಅವರ ಮಗಳೂ ಏನಾದಾಳೋ ಅಂತ ದಿಗಿಲಾಗದೆ." ಎಂದು ತನ್ನ ನೋವನ್ನು ತಾನೇ ನುಂಗಿಕೊಂಡು ಹೇಳಿದನು.

ನರಸಿಂಹಯ್ಯನಿಗೆ ಆ ನೋವು, ಆ ನುಡಿ, ನೋಡಿ, ಕೇಳಿ ಎದೆಯಲ್ಲಿ ಚುರ್ ಎಂದಿತು : "ಏನಂದಿರಿ, ಸಾರ್, ಹಾಗೆ ಇನ್ನೊಂದು ಘಟ ಹೋಗಬೇಕಾದರೆ, ಅದಕ್ಕೆ ಬದಲಾಗಿ ಈ ಘಟ ಕೊಟ್ಟು, ಆ ಘಟ ಉಳಿಸೋದಲ್ಲವೆ, ಸಾರ್ ! ಅಪ್ಪಣೆಯಾಗಲಿ ದೊಡ್ಡಮ್ಮನೋರು ಎಲ್ಲಿ ? ಚಿಕ್ಕಮ್ಮನೋರು ಎಲ್ಲಿ ?"

"ಮಲ್ಲೀ !" ನಾಯಕನು ಕೂಗಿದನು.

ಮಲ್ಲಿಯು ಏನೋ ಬೆಟ್ಟ ಕಿತ್ತಿಟ್ಟು ಆಯಾಸಪಟ್ಟು ಉಸಿರು ಮೊಗಚಲಾರದೆ ಅಳುತ್ತಿರುವಳಂತೆ ಬಂದಳು. ಅವಳ ಕಣ್ಣಿನಲ್ಲಿ ಮೊದಲ ತೇಜಸ್ಸಿಲ್ಲ. ಮೊಕದಲ್ಲಿ ಕಾಂತಿಯಿಲ್ಲ. ನಡಗೆಯಲ್ಲಿ ಬೆಡಗಿಲ್ಲ. ದೇಹದಲ್ಲಿ ಯೌವನದ ಸೊಕ್ಕಿಲ್ಲ. ಬಂದಳು. ನರಸಿಂಹಯ್ಯನನ್ನು ನೋಡುತ್ತಲೂ ಅವಳ ದುಃಖದ ಕೆರೆಯು ಕಟ್ಟೆ ಒಡೆಯಿತು. ಮೂರು ದಿವಸಗಳಿಂದ ಬಂದು ಬಂದು ಒಡ್ಡು ಒಡ್ಡಿ ಮಳೆ ಕರೆಯುವೆನೆಂದು ಹೆದರಿಸಿ ಹೆದರಿಸಿ ಸುಮ್ಮನೆ ಕವಿಚಿಕೊಂಡಿದ್ದ ಮೋಡ ಇಂದು ಹಠಾತ್ತಾಗಿ ಕುಂಭದ್ರೋಣವನ್ನು ಕರೆಯಲಾರಂಭಿಸಿತು. ಮಲ್ಲಿಯು "ಮೇಷ್ಟ್ರೆ ! ನಮ್ಮ ಅಮ್ಮ ಹೋದಳು. ನಾನು ತಬ್ಬಲಿಯಾದೆನಲ್ಲಾ ! ಅಯ್ಯೋ ! ನನಗಿನ್ನಾರು ಗತಿ ?" ಎಂದು ಹೋ ಎಂದು ಅತ್ತುಬಿಟ್ಟಳು.

ಅಳುವಿನ ಭರದಲ್ಲಿ ಅಯ್ಯೋ ಎಂದು ಬಿದ್ದಳು. ನಾಯಕನು ಥಟ್ಟನೆದ್ದು ಅವಳನ್ನು ಹಿಡಿದುಕೊಂಡು ಸೋಫಾದಮೇಲೆ ಇಟ್ಟನು. ಅವಳ ಅಳು ಅಸದೃಶವಾಗಿತ್ತು. ಮಾನವತಿಯಾದ ಹೆಣ್ಣು ಎದೆಯ ಮೇಲೆ ಸೆರಗು ಹಾರಿಹೋಗುವುದರ ಅರಿವೂ ಇಲ್ಲದೆ, ಎದೆ ಎದೆ ಬಡಿದು ಕೊಂಡು ಅತ್ತಳು.

ಎಲ್ಲರಿಗೂ ಅದರಲ್ಲಿ ಶಂಭುರಾಮಯ್ಯ, ನಾಯಕ ಇಬ್ಬರಿಗೂ ಆಶ್ಚರ್ಯ. ಮೂರು ದಿನದಿಂದ ಉಸಿರೆತ್ತಿ ಅಳದವಳು ಇವತ್ತು ಮೇಷ್ಟ್ರ ಮೊಕ ನೋಡಿ ಇಷ್ಟು ಅಳುತ್ತಿದ್ದಾಳಲ್ಲ ಎಂದು ವಿಸ್ಮಯಾನ್ವಿತರಾದರು. ಅಳುವಿಗೂ ಕಟ್ಟೆಯೊಡೆದು ಬರಬೇಕಾದರೆ ಸಮಾನಶೀಲ, ಸಮ ವಯಸ್ಸುಗಳು ಬೇಕೇನು ? ನಾಯಕನಿಗೆ ತನ್ನ ಸರ್ವಸ್ವವನ್ನೂ ಒಪ್ಪಿಸಿ ದ್ದರೂ ಅವನ ಮುಂದೆ ಅವಳು ಅಳಲಿಲ್ಲ. ತನ್ನನ್ನು ತನ್ನ ಪ್ರತಿಬಿಂಬ ವೆಂಬಂತೆ ನೋಡಿಕೊಳ್ಳುತ್ತಿರುವ ರಾಣಿಯ ಬಳಿ ಅಳಲಿಲ್ಲ. ತನ್ನ ತಂದೆಯೆಂದುಕೊಂಡಿರುವ ಮಲ್ಲಣ್ಣನ ಬಳಿ ಅಳಲಿಲ್ಲ. ತಂದೆಯ ಆಪ್ತ ಸ್ನೇಹಿತನಾಗಿರುವ ಶಂಭುರಾಮಯ್ಯನ ಬಳಿ ಅಳಲಿಲ್ಲ. ತಾಯಿಗೆ ತಾಯಾಗಿ ಉಪಚರಿಸುವ ಆನಂದಮ್ಮನ ಹತ್ತಿರ ಅಳಲಿಲ್ಲ. ನರಸಿಂಹ ಯ್ಯನನ್ನು ಕಂಡೇಕೆ ಅಳಬೇಕು ? ಅದೇ ಸ್ವಭಾವ. ಅದೇನೋ ಹೃದಯ ಕೆಲವರನ್ನು ತನ್ನವರು ಎಂದುಕೊಳ್ಳುವುದು : ತನ್ನವರು ಎಂದುಕೊಳ್ಳುವುದಕ್ಕೆ ಏನು ಕಾರಣ ಎಂಬುದನ್ನು ಮಾತ್ರ ತನಗೂ ತಿಳಿಯದು, ಇತರರಿಗೂ ತಿಳಿಯದು.

ಮಲ್ಲಿಯು ಗಟ್ಟಿಯಾಗಿ ಅಳುವುದನ್ನು ಕೇಳಿ ರಾಣಿ, ಮಲ್ಲಣ್ಣ, ಎಲ್ಲರೂ ಬಂದರು. ರಾಣಿಯು ಮಲ್ಲಿಯ ಮಗ್ಗುಲಲ್ಲಿ ಕುಳಿತು ಸಮಾ ಧಾನ ಮಾಡಲು ಹೋದಳು. ನರಸಿಂಹಯ್ಯನು 'ಬೇಡಿ, ಸುಮ್ಮನಿರಿ', ಎಂದು ಸನ್ನೆ ಮಾಡಿದನು. ಎಲ್ಲರೂ ನೀರವವಾಗಿ ಅವಳೊಡನೆ ಅತ್ತರು. ಆನಂದಮ್ಮನೂ ಒಂದು ಮೂಲೆಯಲ್ಲಿ ನಿಂತಿದ್ದಾಳೆ.

ನರಸಿಂಹಯ್ಯನಿಗೆ ಒಂದು ಗಳಿಗೆ ಏನು ಮಾಡಲೂ ತೋರಲಿಲ್ಲ. ಕೂಡಲೇ "ಮಲ್ಲಮ್ಮಣ್ಣಿ !" ಎಂದು ಕೂಗಿದನು. ಧ್ವನಿಯು ದೃಢ ವಾಗಿತ್ತು : ಕಂಚಿನಹಾಗಿತ್ತು : ಮೊಳಗಿತು.

ಮಲ್ಲಿಯೂ ತಲೆಯೆತ್ತಿ ನೋಡಿದಳು.

"ಏನಾಯಿತೆಂದು ಅಳುತ್ತಿದ್ದೀರಿ! ನಿಮ್ಮನ್ನು ಬಿಟ್ಟು ನಿಮ್ಮ ತಾಯಿ ಇಲ್ಲಿಗೆ ಬಂದಾಗ ಆ ಎರಡು ಮಕ್ಕಳನ್ನು ಮಾಡಿಕೊಂಡು ತಮ್ಮ ದುಃಖವನ್ನು ಮರೆಸಿಕೊಂಡರು. ಹಾಗೇ ನೀವು ಒಬ್ಬ ತಾಯಿಗೆ ಬದಲು ಇಬ್ಬರು ತಾಯಿಯರನ್ನೂ ಒಬ್ಬ ಅಣ್ಣನನ್ನೂ ಮಾಡಿಕೊಂಡು ಆ ಹೋದ ತಾಯಿಯ ದುಃಖವನ್ನು ಮರೆಯಿರಿ. ಇದೋ, ಈ ಆನಂದಮ್ಮ ಒಬ್ಬರು ತಾಯಿ, ನಮ್ಮ ತಾಯಿ ಒಬ್ಬರು ತಾಯಿ, ನಾನು ಒಬ್ಬ ಅಣ್ಣ, ಒಂದಕ್ಕೆ ಮೂರು ಸಿಕ್ಕಿತು. ಆ ತಾಯಿಯ ಅಭಿಮಾನವೋ ಎನ್ನುವಿರೇನೋ? ನೀವೇ ಎಷ್ಟು ಸಲ ಹೇಳಿಲ್ಲ: ಆನಂದಮ್ಮನವರ ಅಭಿಮಾನ ನಮ್ಮಮ್ಮನ ಅಭಿಮಾನಕ್ಕಿಂತ ದೊಡ್ಡದು ಎಂದು? ಜೊತೆಗೆ ಇದೋ ನಮ್ಮ ತಾಯಿ ನನ್ನನ್ನು ಬೇಕಾದರೆ ನಿಮಗೆ ಅಣ್ಣನಾಗಿ ಮಗನಾಗಿ ದತ್ತು ಕೊಡುವುದಕ್ಕೆ ಸಿದ್ಧರಾಗಿದ್ದಾರೆ. ಅಥವಾ ನೀವೇ ಅವರಿಗೆ ದತ್ತುವಾಗಿ ಹೆಣ್ಣುಮಗಳಾಗಿ ನಮ್ಮ ಕುಟುಂಬಕ್ಕೆ ಬನ್ನಿ. ಕಾಣಿರಾ! 'ದುಃಖೇ ದುಃಖಾಧಿಕಾನ್ ಪಶ್ಯೇತ್, ಸೌಖ್ಯೇ ಸೌಖ್ಯಾಧಿಕಾನ್ ತಥಾ'

"ನಮಗೆ ವಿವೇಕವಿರುವುದು ಪ್ರತಿಯೊಂದನ್ನೂ ಯಥಾಸ್ಥಾನವಾಗಿ ನೋಡುವುದಕ್ಕೆ, ನೀವು ಮದುವೆಯಾಗಿ ಗಂಡನ ಮನೆಗೆ ಹೋದಾಗ ತಾಯಿಯ ಮನೆ ತುಂಬಿತೋ ಬರಿದಾಯಿತೋ? ಮುಂದಿನ ಮಂಗಳವನ್ನು ನೆನೆದು ತಾಯಿ ತಂದೆಯರು ಅಂದಿನ ವಿರಹವನ್ನು ಸೈರಿಸುವಂತೆ, ಕೆಂಪಮ್ಮನವರ ಆತ್ಮ ಈ ಗೂಡನ್ನು ಬಿಟ್ಟು ಆಕಾಶಕ್ಕೆ ಹಾರಿ ಸ್ವತಂತ್ರವಾಯಿತೆಂದು ದುಃಖವನ್ನೊತ್ತಿ, ಸಹಿಸಿ ಕೊಳ್ಳಬೇಕಾದ ಕಾಲವಿದು. ನೀವು ಹೇಳುವ ತತ್ವಗಳೇನಾಯಿತು? ಓದಿದ ಭಗವದ್ಗೀತೆಯೇನಾಯಿತು? ನೀವು ಒಬ್ಬರಿಗಾಗಿ ಅಳುತ್ತಿದ್ದೀರಿ. ನಿಮಗಾಗಿ ಇಷ್ಟು ಜನರು ಅಳುತ್ತಿದ್ದಾರೆ. ಇದು ವಿವೇಕವೇ? ಬೇಡಿ. ಬಿಡಿ ನಮ್ಮಮ್ಮ. 'ಸಂತೋಷಂ ಜನಯೇತ್ ಪ್ರಾಜ್ಞಃ ತದೇವ ಈಶ್ವರ ಪೂಜನಂ' ಎಂದು ನೀವೇ ಹೇಳುತ್ತ, ನಾನು ಇರುವವರೆಗೂ ಒಬ್ಬರ ಕಣ್ಣಲ್ಲಿ ನನಗಾಗಿ ನೀರು ಬರದಂತೆ ನೋಡಿಕೊಳ್ಳಬೇಕು ಎಂದು

ಹೇಳುವುದಿಲ್ಲವೆ ? ಅದನ್ನು ಈಗ ಅನುಸರಿಸಿ. ಆಪತ್ಕಾಲದಲ್ಲಿ ಒದಗದ ಬುದ್ಧಿಯೇಕೆ ? ಆ ಬುದ್ಧಿಯನ್ನು ಈಗ ಉಪಯೋಗಿಸಿ."

ಹೀಗೆಯೇ, ಕರುಣಾಪರವಾದ ಹೃದಯದಿಂದ ಹೊರ ಹೊಮ್ಮಿದ ಆ ವಿಶ್ವಾಸ ವಾಕ್ಯಗಳಲ್ಲಿ ಅದೇನು ಅಮೃತವಿತ್ತೋ ? ಅಥವಾ ಹೊರ ಹೊಮ್ಮಿ ಕಟ್ಟೆಯನ್ನೊಡೆದು ಬಂದ ದುಃಖವು ಹರಿದು ಹೋಗಿ ಹೃದಯವು ತನ್ನ ಪೂರ್ವದ ಶಾಂತಸ್ಥಿತಿಯನ್ನು ಕೈಕೊಂಡಿತೊ ? ಮಲ್ಲಿಯು ಕಣ್ಣೊರೆಸಿಕೊಂಡಳು. ಸೆರಗನ್ನು ನಡುವಿಗೆ ಕಟ್ಟಿದಳು. ಎದ್ದು ಬಂದು ನರಸಿಂಹಯ್ಯನ ಬಳಿ ಬೊಗ್ಗಿ ಮಂಡಿಯೂರಿ ಕುಳಿತು ಕಾಲು ಮುಟ್ಟಿ ಕಣ್ಣಿಗೆ ಒತ್ತಿಕೊಂಡು ಹೇಳಿದಳು: "ಗುರುವೇ ನಿನ್ನ ಮಾತಿನಲ್ಲಿ ವಿವೇಕವಿದೆ: ಮಾಧುರ್ಯವಿದೆ: ಅಮೃತವಿದೆ. ನಿನ್ನ ಮಾತು ಕೇಳಿ ನನಗೂ ವಿವೇಕ ಬಂತು. ಭಗವದ್ಗೀತೆಯ 'ಗತಾಸೂರ್ ಆಗತಾಸೂರ್ಂಶ್ಚ ನಾನು ಶೋಚಂತಿ ಪಂಡಿತಾ:' ಎಂಬುದನ್ನು ಅರ್ಥಮಾಡಿಕೊಂಡು ಅದರಂತೆ ನಡೆಯುವೆನು. ನಿಮ್ಮ ಚರಣ ಕೃಪೆಯು ನನಗೆ ಶಕ್ತಿಯನ್ನು ಕೊಡಲಿ. ಗುರುದೇವ"

"ತಾಯಿ, ಈ ದಾಸನು ಗುರುವಾಗಲೂ ಗುರುದೇವನಾಗಲೂ ಅರ್ಹನಲ್ಲ. ಭರತಖಂಡವೆಲ್ಲವೂ ಗುರುದೇವನೆಂದು ಗೌರವಿಸುವ ಕವೀಂದ್ರ ರವೀಂದ್ರರು ಇಲ್ಲಿಗೆ ದಯಮಾಡಿಸುವರು. ತಾವು ನನ್ನ ಮೇಲೆ ಕೃಪೆಮಾಡಿ ಬನ್ನಿ. ಅಲ್ಲಿ ಆ ಮಹಾಪುರುಷನ ಸನ್ನಿಧಿಯಲ್ಲಿ ತಮ್ಮ ವಿವೇಕವು ದೃಢವಾಗುವುದು: ತಮ್ಮ ದುಃಖವು ದೂರಪಾಗುವುದು. ನಾನಾಗಲೇ ಹೇಳಿದಂತೆ, ಇದೋ ಇಬ್ಬರು ತಾಯಿಯರು ಎಲ್ಲದಕ್ಕಿಂತ ಹೆಚ್ಚಾಗಿ ಎಲ್ಲರಿಗೂ ಆಶ್ರಯ ಕೊಡುವ ನಾಯಕರು ನಿಮ್ಮ ಎದುರಿಗೇ ಇರುವಾಗ, ನಿಮ್ಮನ್ನು ಸರ್ವಸ್ವವೆಂದು ತಿಳಿದು, ನಿಮ್ಮ ಸರ್ವಸ್ವವಾಗಿರುವಾಗ, ನೀವು ಇರುವುದೆಷ್ಟು ಎಂಬುದನ್ನು ಗಮನಿಸದೆ, ಹೋದುದಕ್ಕಾಗಿ ಅಳುವುದೇ ? ತಾಯಿ ಈ ದುಃಖ ಇಲ್ಲಿಗೆ ನಿಮಗೆ ಗುರುದೇವನ ದಯೆಯಿಂದ ನಿವಾರಣವಾಗಲಿ." ಎಂದು ತಾನೂ ಇದ್ದು, ಸರಳವಾಗಿ ಸಹಜವಾಗಿ ಆಶೀರ್ವಾದ ಭಾವದಲ್ಲಿ, ತನ್ನ ಬಾಯಿಂದ ಬಂದ ಭಾವವನ್ನು ಕೈಯ್ಯಿಂದಕೊಟ್ಟು ಅನುಗ್ರಹಿಸುವ

ನಂತೆ, ಮಲ್ಲಿಯ ತಲೆಯ ಮೇಲೆ ಕೈಯನ್ನಿಟ್ಟನು.

ಮಲ್ಲಿಗೆ ನರಸಿಂಹಯ್ಯನ ಕೈಯಿಂದ ಏನೋ ಅಮೃತದ ಸೋನೆಯೊಂದು ಇಳಿದು ತನ್ನ ದೇಹವನ್ನೆಲ್ಲಾ ವ್ಯಾಪಿಸಿದಂತೆ ಆಯಿತು. ತಾಯಿಯನ್ನು ಕಳೆದುಕೊಂಡನೆಂಬ ಭಾವದಿಂದ ದೇಹವೆಲ್ಲಾ ಬರಿದಾಗಿದ್ದುದನ್ನು, ತನ್ನ ದೇಹದಲ್ಲಿದ್ದ ಶೂನ್ಯತೆಯನ್ನು ಆ ಭಾವವು ತುಂಬಿದಂತಾಯಿತು. ತನ್ನಲ್ಲಿದ್ದ ಕಾಳನ್ನೆಲ್ಲಾ ಸುರಿದು ಬಿಟ್ಟ ಮೇಲೆ ಸೊಪ್ಪಾಗಿ ಬಿದ್ದಿದ್ದ ಬಟ್ಟೆಯ ಚೀಲವು ಮತ್ತೇನನ್ನಾದರೂ ತುಂಬಿದರೆ, ಮತ್ತೆ ದಪ್ಪವಾಗಿ, ಬಿಗಿಯಾಗಿ ಕೂತುಕೊಳ್ಳುವಂತೆ ಆಯಿತು. ಅವಳಿಗೆ ಹೋದ ತಾಯಿಯೊಡನೆ ಏನೋ ಹೋಗಿತ್ತು ಎಂದು ಗೊತ್ತಿದ್ದರೂ ಹೋಗಿದ್ದುದು ಏನು ಎಂಬುದು ತಿಳಿಯದು: ಈಗ ಏನೋ ಬಂದು ಸೇರಿದೆ ಎಂಬುದೂ ಗೊತ್ತು : ಆದರೆ ಬಂದು ಸೇರಿದುದು ಏನು ಎಂಬುದು ತಿಳಿಯದು. ಅಂತೂ ಸ್ವ-ಸ್ಥಳಾದಳು. ಸಹಜ ಭಾವಾಪನ್ನಳಾದಳು.

ಕತ್ತಲೆಯ ಮನೆಯಲ್ಲಿ ತುಂಬಿದ್ದ ಏನನ್ನೋ ಚದುರಿಸಿ, ಅದರ ಸ್ಥಾನವನ್ನು ದೀಪದ ಬೆಳಕು ಹಿಡಿದಂತಾಯಿತು. ಮೂರು ನಾಲ್ಕು ದಿನಗಳಿಂದ ನಗೆಯನ್ನು ಕಾಣದೆ ಮುಗಿಲ ಹಿಂದಿನ ತಿಂಗಳಂತೆ ಇದ್ದ ಮಲ್ಲಿಯ ಮೊಗವು ಇವೊತ್ತು ನೋವನೊತ್ತಿ, ದುಃಖವನ್ನು ತುಳಿದು ಹೊರ ಬರುವ ನಗೆಯನ್ನು ಕಂಡಿತು.

ನಾಯಕನು ಬಿಸಿಲು ಮಳೆಯ ಹಗಲಿನಂತಾದನು. ಶಂಭುರಾಮಯ್ಯ ಆನಂದನ್ನು ಏನೋ ನಿಟ್ಟುಸಿರು ಬಿಟ್ಟು ಸ್ವಸ್ಥರಾದರು. ಮಲ್ಲಣ್ಣನು ಏನೋ ಆವೇಶ ಬಂದಂತೆ,

" ಬುದ್ಧಿಯುವರ ಮಾತು ನಿಜ. ಏನು ಹಾಳು ಸಂಸಾರವೋ ? ಈ ಸಂಸಾರವೆಂಬುದು ಲೊಳಲೊಟ್ಟೆ."

ಯಾರಿಗೆ ಯಾರುಂಟು ಎರವಿನ ಸಂಸಾರ||
ನೀರಗುಳ್ಳೆಯಂತೆ ತೋರುವ ಸಂಸಾರ||

ಎಂದು ತತ್ತ್ವವನ್ನು ಹಾಡಿಕೊಳ್ಳುತ್ತಾ, ಕಣ್ಣೀರು ಒರಸಿಕೊಂಡು

ಹೊರಟು ಹೋದನು.

ರಾಣಿಯು "ಬಾನ್ನ : ಮೊಕ ತೊಳೆದುಕೊಡುತ್ತೀನಿ" ಎಂದಳು. ಮಲ್ಲಿಯು ಮಗುವಿನಂತೆ ಕೋಮಲವಾದ ದನಿಯಲ್ಲಿ ನಾಯಕನನ್ನೂ ಮೇಷ್ಟ್ರನ್ನೂ ಮಿಕ್ಕವರನ್ನೂ ಬೀಳ್ಕೊಂಡು ಹೋದಳು.

ಮೊದಲನೆಯ ಮಳೆಯಲ್ಲಿ ನೆಂದು ಬಿಸಿಲಿನ ಬೇಗೆಯನ್ನೂ ಬೇಸಿಗೆಯ ಧೂಳನ್ನೂ ತೊಳೆದುಕೊಂಡು ರಮ್ಯವಾದ ಪ್ರಕೃತಿಯಂತೆ ಮಲ್ಲಿಯು ಹೊಸಬಳಂತಾಗಿದ್ದಳು.

ನರಸಿಂಹಯ್ಯನು ನಾಯಕನೊಡನೆ ಇನ್ನೂ ಅಷ್ಟು ಮಾತನಾಡುತ್ತಿದ್ದನು. "ಕವೀಂದ್ರರು ದರ್ಶನ ಕೊಡಲು ಒಪ್ಪಿದ್ದಾರೆ. ನಾಳೆ ಮಧ್ಯಾಹ್ನ ಮೂರು ಗಂಟೆಗೆ ಅವರ ದರ್ಶನ. ಸಂಜೆಗೆ ಕಾಲೇಜಿನಲ್ಲಿ ಭಾಷಣವಿದೆ. ನಾಡಿದ್ದು ವರದಾಚಾರ್ಯರ ನಾಟಕಕ್ಕೆ ಬರುತ್ತಾರೆ. ನಾಳೆ ನಾಡಿದ್ದು ಸಾಧ್ಯವಾದಷ್ಟು ಸಲ ಅವರ ದರ್ಶನ ಮಾಡಿ ಕೃತಾರ್ಥರಾಗಬೇಕು." ಎಂದನು. ನಾಯಕನೂ ಆಗಬಹುದು ಎಂದನು. ಅವನಿಗೆ ಸಂತೋಷ : ಆಶ್ಚರ್ಯ – ತಾಯಿವಿರಹದಿಂದ ತಬ್ಬಲಿಯಾದ ಎಳೆ ಗುರುವಿನಂತೆ ಒದ್ದಾಡುತ್ತಿದ್ದ ಮಲ್ಲಿ ನರಸಿಂಹಯ್ಯನ ಮಾತಿನಿಂದ ಸ್ವಸ್ಥಳಾದಳಲ್ಲಾ ಎಂದು ಅವನ ಸಂತೋಷಕ್ಕೆ ಮೇರೆಯಿಲ್ಲ : ತನ್ನ ಕೈಯಲ್ಲಾಗದ ಕಾರ್ಯವನ್ನೂ ಅವನು ಮಾಡಬಲ್ಲನೆಂದು ಆಶ್ಚರ್ಯ. ಅವನು ನರಸಿಂಹಯ್ಯನನ್ನು ನಾನಾ ಭಾವ ಭಂಗಿಗಳಲ್ಲಿ ನೋಡಿದ್ದ. ಆದರಿಂದು, ಈದಿನ, ಇದ್ದಷ್ಟು ಗಂಭೀರವಾಗಿ, ಯಾವೊತ್ತೂ ನೋಡಿರಲಿಲ್ಲ.

## ೨೬

ನರಸಿಂಹಯ್ಯನು ಸಪರಿವಾರನಾದ ನಾಯಕನನ್ನು ಕರೆದುಕೊಂಡು ರವೀಂದ್ರರ ದರ್ಶನಕ್ಕೆ ಹೋದನು. ಆ ವೇಳೆಗೆ ಕಾಲೇಜಿನ ಹುಡುಗರೆಲ್ಲ ಬಂದು ಸೇರಿಕೊಂಡಿದ್ದಾರೆ. ರವೀಂದ್ರರು ಸಕಾಲದಲ್ಲಿ ಈಚೆಗೆ

ಬಂದರು. ಪರ್ವತ ಶಿಖರದಲ್ಲಿ ಯಾವಗಾಳಿಗೂ ಸಿಕ್ಕದೆ ನಿಶ್ಚಲವಾಗಿ, ಗಂಭೀರವಾಗಿ, ಸೌಮ್ಯವಾಗಿರುವ ಸರೋವರವು ಎದ್ದು ನಡೆದು ಬಂದಂತೆ ಬಂದರು. ಆ ವಿಶಾಲವಾದ ಮುಖದಲ್ಲಿ ಎದ್ದು ಕಾಣುವ ಮೂಗು, ಆ ವಿಶಾಲವಾದ ಹಣೆಯನ್ನು ಹೊತ್ತು ನಿಂತಿರುವಂತಿದೆ. ಪೊದೆಯಂತಿರುವ ಹುಬ್ಬುಗಳ ಹಿಂದಿನಿಂದ ಎರಡು ದೀಪಗಳಂತೆ ಕಣ್ಣುಗಳು ಹೊಳೆಯುತ್ತಿವೆ: ಆದರೆ ದೀಪದ ತೀವ್ರ ಕಾಂತಿಯಿಲ್ಲ: ಅಲ್ಲಿ ಸೌಮ್ಯವಾಗಿ ಅನುಗ್ರಾಹಕವಾಗಿರುವ ಕಾಂತಿಯನ್ನು ಹಿಡಿದು ತುಂಬಿ- ಟ್ಟಿರುವಂತಿದೆ. ಯಾರಾದರೂ ಹೌದೇ ಎಂದು ಸಂದೇಹ ಪಟ್ಟರೆ, ಹೌದು ಎಂದು ದೃಢಪಡಿಸುವುದಕ್ಕೋ ಎಂಬಂತೆ, ಮುಖವನ್ನು ವ್ಯಾಪಿಸಿರುವ ಎಳೆನಗೆಯು ಸಾಕ್ಷಿಕೊಡಲು ಮುಂದೆ ನುಗ್ಗುತ್ತಿದೆ. ಸಹಸ್ರಾಂತರಗಳಿಂದ, ಸುಮಾರು ಅರ್ಧಶತಮಾನಕಾಲ ಲೋಕಹಿತಾರ್ಥವಾಗಿ ಆಚರಿಸಿರುವ ದೀರ್ಘತಪಸ್ಸಿನಂತೆ ನೀಳವಾದ ಗಡ್ಡವು ಮೆರೆಯುತ್ತ ಆ ಎತ್ತರವಾದ ದೇಹಕ್ಕೆ ಎಂಬಂತೆ, ಮುಖಮಂಡಲಕ್ಕೆ ಏನೋ ಅಪೂರ್ವವಾದ ರೀತಿಯಲ್ಲಿ ಶೋಭಾಕರವಾಗಿದೆ. ಉನ್ನತವಾದ ದೇಹ, ಧರಿಸಿರುವ ಆ ಕಪಿನಿಯಂತಹ ಅಂಜೂರವರ್ಣದ ನಿಲುವಂಗಿ, ರೀತಿಯಿಂದ ನಡೆಯುವ ಭಂಗಿ, ಎಲ್ಲವೂ ಆ ಮಹಾಪುರುಷನನ್ನು ನೋಡಿದವರೆಲ್ಲಾ ಭಕ್ತಿಯ ಕಾಣಿಕೆಯನ್ನು ಒಪ್ಪಿಸುವಂತೆ ಬಲಾತ್ಕರಿ- ಸುವಂತಿದೆ. ಎಲ್ಲರಿಗೂ ಆ ಶಾರದಾಭಕ್ತನ ದರ್ಶನದಿಂದ ಹೃದಯ ಮನಸ್ಸುಗಳು ಶುದ್ಧವಾಗಿ ಗಂಗಾಸ್ನಾನಮಾಡಿ ಪವಿತ್ರವಾದಂತೆ ಆಗಿದೆ. ವಿಶ್ವಭಾರತಿಯನ್ನು ಸ್ಥಾಪಿಸಿ ಭರತಖಂಡದ ಪ್ರಾಚೀನ ಸಂಸ್ಕೃತಿಯ ದಿವ್ಯ ಪ್ರಭಾವವನ್ನು ಲೋಕದಲ್ಲಿ ಹರಡಿದ ಮಹನೀಯನನ್ನು ನೋಡಿ ಎಲ್ಲರ ಕಣ್ಣುಗಳಲ್ಲಿಯೂ ಆನಂದವುಕ್ಕಿ ಕಂಬನಿಯಾಗಿ ಸೂಸುತ್ತಿದೆ. ಶಾಂತಿನಿಕೇತನದ ಶಾಂತಿದೂತನನ್ನು ನೋಡಿ, ಜಗತ್ತಿನ ದುಃಖಭಾರದಿಂದ ಬೊಗ್ಗಿರುವಂತೆ ನಿದಾನವಾಗಿ ನಡೆದು ಬರುವ ಆ ದೇವ ಪ್ರತಿಮನನ್ನು ನೋಡಿ ಎಲ್ಲರ ಮನಸ್ಸಿನಲ್ಲಿಯೂ ಅಪೂರ್ವವಾದ ಶಾಂತಿಯು ನೆಲಸಿದೆ.

ನರಸಿಂಹಯ್ಯನು ಆ ಭವ್ಯರೂಪರಾಶಿಗೆ ' ಯಸ್ಸರ್ವಭೂತಾಂತ

ರಾತ್ಮಾಸನೋ ವಿಷ್ಣುಃ ಪ್ರಸೀದತು' ಎಂದು ಸಾಷ್ಟಾಂಗ ನಮಸ್ಕಾರ ಮಾಡಿದನು. ಅದನ್ನು ಕಂಡು ಸರ್ವರೂ ನಮಸ್ಕಾರ ಮಾಡಿದರು. ಟಾಗೋರರು ಎಲ್ಲರಿಗೂ ಆಶೀರ್ವಾದ ಮಾಡಿ, ಕೈಮುಗಿದು ತಮಗಾಗಿ ಸಿದ್ಧವಾಗಿದ್ದ ಆಸನದಲ್ಲಿ ಕುಳಿತರು. ಎಲ್ಲರೂ ತಾವು ತಂದಿದ್ದ ಫಲಪುಷ್ಪಗಳನ್ನು ಒಪ್ಪಿಸಿದರು. ನಾಯಕನು ಹಾರವನ್ನೊಪ್ಪಿಸಿದನು-ರಾಣಿಯು ಒಂದು ತಟ್ಟೆಯ ತುಂಬಾ ಸೊಗಸಾದ ಕಿತ್ತಳೆಯ ಹಣ್ಣುಗಳನ್ನು ಒಪ್ಪಿಸಿದಳು. ಮಲ್ಲಿಯು ಸೊಗಸಾದ ಅಂಜೂರಗಳನ್ನು ಪೇರಿಸಿದ್ದ ತಟ್ಟೆಯನ್ನು ಮುಂದಿಟ್ಟು ಆ ಮಹಾಪುರುಷನ ಪಾದಗಳನ್ನು ಕಣ್ಣಿಗೆ ಒತ್ತಿಕೊಂಡಳು.

ಟಾಗೋರರು ನಗುತ್ತಾ "ಈ ತರುಣ ತಂಡವನ್ನು ಆರಾಧಿಸಿ, ಅನಂತರ ನಿಮ್ಮೊಡನೆ ಮಾತನಾಡುವೆನು. ಆಗಬಹುದಷ್ಟೆ!" ಎಂದು ಆರಂಭಿಸಿದರು.

ತರುಣರು ಏನೋ ಜಗತ್ಪಿತನ ಸಾನ್ನಿಧ್ಯದಲ್ಲಿ ಕುಳಿತಿರುವಂತೆ ಸಂತೋಷಪಡುತ್ತಾ ನಿರಾಳವಾಗಿ ಏನೂ ಸೊಕ್ಕು ಸೊಟ್ಟಗಳಿಲ್ಲದ ಪೂರ್ಣಶುದ್ಧಮನಸ್ಸಿನಿಂದ ಮಾತನಾಡಿದರು :

"ತಾವು ಕವಿಗಳು-ಕವಿತೆ ತಮಗೆ ಹೇಗೆ ಬರುತ್ತದೆ?"

"ಕೋಗಿಲೆಗೆ ಹಾಡುವುದು ಗೊತ್ತು. ಹಾಡುವುದು ಹೇಗೆ ಎನ್ನುವುದು ಅದಕ್ಕೇನು ಗೊತ್ತು. ಹಾಗೆ ನನಗೂ ಕವಿತೆ ಕಟ್ಟುವುದು ಗೊತ್ತು: ಅದು ಹೇಗೆ ಬರುತ್ತದೆ ಎನ್ನುವುದು ಗೊತ್ತಿಲ್ಲ. ಕೋಗಿಲೆಯು ಕತ್ತಿನಲ್ಲಿ ಹಾಡುವ ಸಾಧನವನ್ನು ಇಟ್ಟವನು ಅದನ್ನು ವಿವರಿಸಬಲ್ಲ."

"ನಾವು ಕವಿಗಳು ಆಗಬೇಕಾದರೆ ಏನು ಮಾಡಬೇಕು?"

"ಕವಿತೆಯನ್ನು ಅರ್ಥಮಾಡಿಕೊಳ್ಳುವುದೇ ಕಷ್ಟ! ಕವಿಯಾಗುವುದು ಅದಕ್ಕಿಂತ ಕಷ್ಟ!"

"ರಾಧಾಕೃಷ್ಣ ಅವರು ತಮ್ಮ ಕವಿತೆಗಳನ್ನು ಕುರಿತು ಒಂದು ಪುಸ್ತಕ ಬರೆದಿದ್ದಾರೆ. ಅಲ್ಲವೆ?"

"ಹೌದು ಅದರಲ್ಲಿ ನನ್ನ ವೇದಾಂತವನ್ನು ಕುರಿತು ಚರ್ಚಿಸಿದ್ದಾರೆ. ಆದರೆ ಅವರು ವೇದಾಂತಿಗಳು. ಅವರು ತಮ್ಮ ವೇದಾಂತವನ್ನು ನನ್ನಲ್ಲಿ ಕಂಡರು ಎಂದು ನನಗೆ ತೋರುತ್ತದೆ. ಕಬ್ಬಿನಲ್ಲಿ ಸಕ್ಕರೆ

ಎಷ್ಟಿದೆ ? ಆ ಸಕ್ಕರೆ ಎಂಥದು ? ಎಂಬುದನ್ನೆಲ್ಲ ಸೈನ್ಸು ಹೇಳಬಹುದು. ಆದರೆ ಸಕ್ಕರೆಯನ್ನು ತಂದ ಕಬ್ಬಿಗೆ ಅದೆಲ್ಲ ಗೊತ್ತೇನು ? ಹಾಗೆ ನನ್ನ ಪಾಡಿಗೆ ನಾನು ಹಾಡಿಕೊಳ್ಳುತ್ತೇನೆ. ಅದರಲ್ಲಿ ಅವರು ವೇದಾಂತ ಕಾಣುತ್ತಾರೆ. ನಾನು ನಿಮ್ಮನ್ನು ಕೆಲವು ಪ್ರಶ್ನೆಗಳನ್ನು ಕೇಳಲೆ ? "

" ಆಗಬಹುದು."

" ನಿಮ್ಮ ದೇಶದಲ್ಲಿ ಪ್ರಸಿದ್ಧರಾದ ಕಾದಂಬರಿಕಾರರು ಯಾರು ? ಕವಿಗಳು ಯಾರು ?"

ಹುಡುಗರು ಒಬ್ಬರ ಮೇಕ ಒಬ್ಬರು ನೋಡಿಕೊಂಡರು: "ಇನ್ನೂ ನಾವು ಬಂಗಾಳೀ ಮರಾಠೀ ತೆಲುಗು ನಾವೆಲ್ಲಾಗಳ ಕನ್ನಡರೂಪವನ್ನೇ ಓದುತ್ತಿದ್ದೇವೆ ನಮ್ಮಲ್ಲಿ ಕವಿತೆ ಬರೆಯುವುದಕ್ಕಿಂತ ಕಾವ್ಯ ಓದುವ ಪದ್ಧತಿ ಚನ್ನಾಗಿ ಬೆಳದಿದೆ. ಅಭಿನವ ಕಾಲಿದಾಸರು ಇದ್ದರು."

ಟಾಗೋರರು ಒಂದು ಗಳಿಗೆ ಎದುರಿದ್ದ ಮರವನ್ನು ನೋಡುತ್ತಿದ್ದರು.

" ಹೌದು, ಕಾವ್ಯ ಓದುವುದು ಕಾವ್ಯ ಬರೆಯುವುದಕ್ಕಿಂತ ಒಳ್ಳೆಯದು. ಅವರಿ, ಹಣ್ಣು ತಿನ್ನುವುದು ಅನೇಕರು ಬಲ್ಲರು. ಹಾಗೆ ತಿಂದು ಸಂತೋಷಪಡುವುದೂ ಒಂದು ಭಾಗ್ಯ. ಹಾಗೆಂದು ತಿನ್ನುವು ದಕ್ಕೆ ಹಣ್ಣು ಬೆಳೆಯುವವರು ಬೇಡವೆ ? "

" ಬೇಕು. ಆದರೆ ಕವಿಗಳಾಗುವುದು ಹೇಗೆ ?"

" ನಾವು ಕೋಗಿಲೆಯ ಚಿತ್ರ ಬರೆಯ ಬಹುದು. ಕೋಗಿಲೆ ಯನ್ನು ಹುಟ್ಟಿಸುವುದು ಕಷ್ಟ. ಅದನ್ನೂ ನಾನು ಒಪ್ಪುತ್ತೇನೆ. ನೀವೆಲ್ಲರೂ ಪ್ರಯತ್ನಮಾಡಿ. ಕೋಗಿಲೆಗೆ ಕೂಗಬೇಕು ಎನ್ನಿಸುತ್ತದೆ. ನಿಮ್ಮಲ್ಲಿ ನಾಟಕ, ಸಂಗೀತ, ಎರಡರಲ್ಲಿಯೂ ವಿದ್ವಾಂಸರಿದ್ದ ಮೇಲೆ ನಾಟಕ ಬರೆಯುವವರೂ ಇರಬೇಕಲ್ಲವೆ ?"

" ಇದ್ದಾರೆ. ಮೈಸೂರಿನಲ್ಲಿ ರಾಜಕವಿ ತಿರುಮಲೆ ಶ್ರೀನಿವಾಸ ಯ್ಯಂಗಾರ್ಯರು, ಬೆಂಗಳೂರಿನಲ್ಲಿ ವಿದ್ವಾನ್ ವೆಂಕಟಾಚಾರ್ಯರು ಇಬ್ಬರೂ ಸೊಗಸಾಗಿ ನಾಟಕ ಬರೆಯುತ್ತಾರೆ. "

" ಅವರು ಬರೆದಿರುವ ನಾಟಕಗಳು? "

" ಶ್ರೀನಿವಾಸಯ್ಯಂಗಾರ್ಯರು ಬರೆದಿರುವ ಮನ್ಮಥವಿಜಯ ವೆಂಕಟಾಚಾರ್ಯರ ಭೋಜಪ್ರಬಂಧ ಎರಡೂ ಒಳ್ಳೆಯ ನಾಟಕಗಳು."

" ಅದರ ಮೇಲೆ ಯಾರಾದರೂ ವಿಸ್ತಾರವಾಗಿ ವ್ಯಾಖ್ಯಾನ ಬರೆದಿರುವರೆ ? "

"ಇಲ್ಲ "

" ನೀವು ಸಾಹಿತ್ಯ ಪ್ರಿಯರು ಆ ಕೆಲಸಮಾಡಿ. ಸಂಗೀತಗಾರನಿಗೆ ತನ್ನ ಸಂಗೀತ ಕೇಳಿ ತಲೆದೂಗುವವರು ಎದುರಿಗೆ ಇದ್ದಂತೆಲ್ಲ ಉತ್ಸಾಹವು ಬರುವ ಹಾಗೆ, ಸಾಹಿತಿಗೂ ಕವಿಗೂ ತನ್ನನ್ನು ಮೆಚ್ಚುವವರ ಬಳಗ ಇರಬೇಕು. ನಮ್ಮಲ್ಲಿ ಬಹು ಬೇಗ ದೋಷವನ್ನು ತೋರಿಸುವ ಗುಣವಿದೆ. ಆದರೆ ದೋಷವನ್ನು ಹಿಂದಿಟ್ಟು ಗುಣವನ್ನು ಮೆಚ್ಚುವ ಅಭ್ಯಾಸ ಇನ್ನೂ ಬೆಳೆದಿಲ್ಲ. ಅಪೂರ್ಣತೆ ಹೋಗುವುದು ಪೂರ್ಣವಾದಾಗ. ಪೂರ್ಣ ವಾಗುವವರೆಗೂ ಬೆಳೆಯಲಿ. ಸಂಗೀತದಲ್ಲಿ ಬರಿಯ ತಾಳ ಗಮನಿಸಿದರೆ ಸಾಕೆ? ಹೀಗೆ ಇದೆ ಈಗ. ಇದು ತಪ್ಪಲಿ. ಅಗೋ ಐದು ಗಂಟೆ ಯಾಯಿತು. ಇನ್ನು ನನಗೆ ಅವಕಾಶವಿಲ್ಲ. ನಿಮ್ಮಲ್ಲಿ ಯೂನಿವರ್ಸಿಟಿ ಪುಟ್ಟ ಹಾಕಿದ್ದೀರಿ. ಕುಲಕತ್ತೆಯ ಮುಖರ್ಜಿ, ಮದರಾಸಿನ ರಾಧಾಕೃಷ್ಣ, ಬೊಂಬಾಯಿನ ಷಾ, ಆಂಧ್ರದ ಸಿ. ಆರ್. ರೆಡ್ಡಿ ಇವರನ್ನು ನಿಮ್ಮ ಮಹಾರಾಜರೂ ದಿವಾನರೂ ಆಸೆಯಿಂದ ತಂದಿದ್ದಾರೆ. ನಿಮ್ಮ ಎಂ. ಎಸ್. ಸುಬ್ಬರಾಯರು ವಿದ್ಯಾವಂತರು : ಕೀರ್ತಿವಂತರು. ಈ ಮಹನೀಯರು ಗಳಂತೆ ನೀವೂ ವಿದ್ಯಾವಂತರಾಗಿ : ಕೀರ್ತಿವಂತರಾಗಿ. ಎಲ್ಲದಕ್ಕಿಂತ ಹೆಚ್ಚಾಗಿ ವಿದ್ಯಾವಂತರನ್ನೂ ಕೀರ್ತಿವಂತರನ್ನೂ ಕಂಡು ಮೆಚ್ಚಿಕೊಳ್ಳುವ ಭಾವವನ್ನು ಬಳೆಯಿಸಿ ಕೊಳ್ಳಿ. "

ವಿದ್ಯಾರ್ಥಿಗಳು ಕವೀಂದ್ರರ ಆಶೀರ್ವಾದವನ್ನು ಪಡೆದು ಹೊರಟರು. ಅವರು ಮರ್ಯಾದೆಯಾಗಿ ಬೀಳ್ಕೊಂಡ ಆ ಗುಂಪನ್ನು ನೋಡಿ, "ನಿಮ್ಮ ಹುಡುಗರು ತೇಜಸ್ವಿಗಳಾಗಿದ್ದಾರೆ. ಮುಂದಿನ ಭಾರತದಲ್ಲಿ ಮೈಸೂರಿಗೆ ಗಣ್ಯವಾದ ಸ್ಥಾನವಿದೆ. " ಎಂದರು.

ನರಸಿಂಹಯ್ಯನಿಗೆ ಅದನ್ನು ಕೇಳಿ ಆನಂದವಾಯಿತು : ನಾಯಕ

ನನ್ನು ಮಾತಾಡುವಂತೆ ಪ್ರೇರಿಸಿದನು: ಅವನೂ ಅವನ ಸಂತೋಷ ದಲ್ಲಿ ಭಾಗಿಯಾಗಿದ್ದ. "ಮುಂದಿನ ಭಾರತದಲ್ಲಿ ಮೈಸೂರಿಗೆ ಗಣ್ಯವಾದ ಸ್ಥಾನವಿದೆ ಎಂದಿರಿ. ಭಾರತದ ಮುಂದಿನ ಗತಿಯೇನು ?" ಎಂದು ಕೇಳಿದನು.

ಕವೀಂದ್ರರು ನಕ್ಕರು: "ನೀವೂ ನಮ್ಮಂತೆ: ನಾವೂ ನಿಮ್ಮಂತೆ. ಇಬ್ಬರೂ ಬಿರುದು ಪಡೆದವರು. ನಿಮ್ಮ ಕಥೆಯನ್ನು ನರಸಿಂಹಯ್ಯನವರು ಹೇಳಿದರು. ನೀವು ಬೇಟೆಯಲ್ಲಿ ನಿಸ್ಸೀಮರು: ನಾನು ಹಾಡುಕಟ್ಟುವುದರಲ್ಲಿ. ಆಯಿತು. ಈಗ ಮೊದಲನೆಯದಾಗಿ ರಾಜಕೀಯವಾಗಿ ಹೇಳುವುದಾದರೆ, ಮುಂಖಂಡರು ಅನೇಕರಿಗೆ ಈ ಬ್ರಿಟಿಷ್ ಸಿಂಹವನ್ನು ಎದುರಿಸುವ ವಿಧಾನ ತಿಳಿಯದು. ಆ ದಕ್ಷಿಣ ಆಫ್ರಿಕದಿಂದ ಬಂದಿರುವ ಗಾಂಧಿ ಇರುವರಲ್ಲ. ಅವರು ಚಂಪಾರಣ್ಯ ದಲ್ಲಿ ಗೆದ್ದಿದ್ದಾರೆ. ಬಹುಶಃ ಆತನು ಮುಂದಿನ ಲೀಡರ್. ಮಿಕ್ಕವ ರೆಲ್ಲ ಮಾತು, ಮಾತು: ಆತ ಹಾಗಿಲ್ಲ: ಕೆಲಸಕ್ಕೆ ನುಗ್ಗುತ್ತಾರೆ."

"ತಾವು ಏಕೆ ರಾಜಕೀಯಕ್ಕೆ ನುಗ್ಗುವುದಿಲ್ಲ ?"

"ನಾನು ಒಂದು ವಿಧವಾಗಿ ರಾಜಕೀಯದಲ್ಲಿಯೇ ಇದ್ದೇನೆ. ನಮ್ಮ ದೇಶದ ಕಡೆಗೆ ಪ್ರಪಂಚದ ಕಣ್ಣು ತಿರುಗಿದರೆ ಅದೂ ಒಂದು ಗೆಲುವು. ಅದಕ್ಕೆ ನಾನು ಮಾಡಿದ ಪ್ರಯತ್ನ ಅಷ್ಟು ಸಫಲವಾಗಿದೆ. ನಮ್ಮ ಶಾಂತಿನಿಕೇತನ, ವಿಶ್ವಭಾರತಿ, ಎಲ್ಲರಿಂದಲೂ ಮನ್ನಣೆ ಪಡೆಯಲಿ ಎಂದು ನಾನು ಮಾಡುತ್ತಿರುವ ಯತ್ನವೂ ಅದೇ ಗುರಿಯೇ ! ಈಗ ನಾನು ಇಂಡಿಯವನ್ನೆಲ್ಲ ಸುತ್ತಿ ಬರುತ್ತಿರುವುದೂ ಅದಕ್ಕಾಗಿಯೇ ! ಆಗಲಿ. ಇನ್ನು ಹೊತ್ತಾಯಿತಲ್ಲವೆ ?"

ಕವೀಂದ್ರರು ಎದ್ದರು. ಎಲ್ಲರೂ ಅವರನ್ನು ಬೀಳ್ಕೊಂಡರು. ಮಲ್ಲಿಯೂ ಮತ್ತೆ ನಮಸ್ಕಾರ ಮಾಡಿದಳು. ಈಚೆಗೆ ಬರುತ್ತಾ "ಈಗ ಹೇಗಿದ್ದೀರಿ ಮಲ್ಲಮ್ಮಣ್ಣಿ ?" ಎಂದು ನರಸಿಂಹಯ್ಯನು ಕೇಳಿದನು. ಅವಳ ಅರಳಿದ ಮುಖದಲ್ಲಿ ಮಿನುಗಿದ ನಗೆ ಉತ್ತರಕೊಟ್ಟಿತು.

ಮಲ್ಲಿಯು ಇಂಗ್ಲಿಷ್ ಪತ್ರಿಕೆಯನ್ನು ಓದುತ್ತಿದ್ದಾಳೆ. ನಾಯಕನು ಕೇಳುತ್ತಿದ್ದಾನೆ: "ಜನರಲ್ ಡೈಯರ್‌ನು ನಿಷ್ಕರುಣೆಯಿಂದ ಜನಗಳನ್ನು ಮೊಲ ನರಿಗಳನ್ನು ಕೊಲ್ಲುವಂತೆ ಕೊಂದಿದ್ದಾನೆ. ಏಟು ತಿಂದು ನರಳುತ್ತಿದ್ದವರಿಗೆ ನೀರು ಕೊಡದೆ ಸಾಯಿಸಿದ್ದಾನೆ. ಇಂತಹ ರಾಕ್ಷಸ ಕೃತ್ಯ ಇದುವರೆಗೆ ನಡೆದಿರಲಿಲ್ಲ...."

ಇಬ್ಬರೂ ಯೋಚಿಸುತ್ತಿದ್ದಾರೆ: ನಾಯಕನಿಗೆ ಹೆಚ್ಚು ಯೋಚನೆ: "ಸರಕಾರ ಅವನನ್ನು ಬಿಡುವುದಿಲ್ಲ. ನೋಡುತ್ತಿರು ಮಲ್ಲಿ. ನಾಳೆ ನಾಡಿದ್ದಿನ ಪೇಪರ್‌ನಲ್ಲಿ ಅವನನ್ನು ಹಿಡಿದು ಗುಂಡಿನ ಬಾಯಿಗೆ ಕೊಟ್ಟರು ಎಂದು ವರ್ತಮಾನ ಬರದೇ ಇದ್ದರೆ ಕೇಳು?" ಎಂದು ಹೇಳುತ್ತಿದ್ದಾನೆ.

"ನಮಗೆ ಇದೆಲ್ಲ ತಿಳಿಯುವುದಿಲ್ಲ. ಮೇಷ್ಟ್ರು ಬಂದರೆ, ಎಲ್ಲಾ ಹೇಳುತ್ತಾರೆ" ಎಂದು ಮಲ್ಲಿಯೂ ಕಾತರಳಾಗಿ ನುಡಿದಳು.

ಆಳು ಬಂದು ಮೇಷ್ಟರು ಬಂದಿರುವುದನ್ನು ತಿಳಿಸಿದನು.

ಮಲ್ಲಿಯು ಸೆರಗು ಕೂದಲು ಸರಿಮಾಡಿಕೊಂಡು ದೂರ ಸರಿದು ಕೂತಳು.

ನರಸಿಂಹಯ್ಯನು ಬರುತ್ತಿರುವ ಹಾಗೆ ಕಣ್ಣೀರು ಸುರಿಸುತ್ತಿದ್ದಾನೆ. ಎಷ್ಟು ಒರೆಸಿಕೊಂಡರೂ ನಿಲ್ಲದು: ಮೂಗು ಕಣ್ಣು ಕೆಂಪಗೆ ಉರಿಯುವಂತೆ ಕಾಣಿಸುತ್ತಿವೆ.

ಮಲ್ಲಿಯು ಎದ್ದು ಸರ್ರನೆ ಹೋಗಿ ಒಂದು ಚೆಂಬು ನೀರು ಚೌಕ ತಂದುಕೊಟ್ಟು "ಮೊದಲು ಮೊಕತೊಳೆದುಕೊಳ್ಳಿ. ಆಮೇಲೆ ಮಾತು" ಎಂದಳು.

"ಯಾರಮ್ಮಾ? ಮೊದಲು ಟೀ ತತ್ತಾ!" ಎಂದು ಹೇಳಿಬಂದಳು.

ನರಸಿಂಹಯ್ಯನು ಅಳುವುದನ್ನು ಅದುವರೆಗೂ ಯಾರೂ ನೋಡಿರಲಿಲ್ಲ. ನಾಯಕನಂತೂ ಆಶ್ಚರ್ಯದಿಂದ ಅವಾಕ್ಕಾಗಿದ್ದಾನೆ.

ನರಸಿಂಹಯ್ಯನು ಮೊಕವನ್ನು ತೊಳೆದುಕೊಂಡು ಬಂದನು. ಆ ವೇಳೆಗೆ ಟೀ ಬಂತು :

" ಏನಾದರೂ ತಿಂಡಿ ಬೇಕೆ ?"

" ಏನೂ ಬೇಡಿ. "

" ಊಟವಾದ ಹಾಗಿಲ್ಲ. "

" ಇಲ್ಲ. ಇವೊತ್ತು ಊಟ ಸೇರಲಿಲ್ಲ. ನಿನ್ನೆ ಸಾಯಂಕಾಲ ದಿಂದ ನನಗೆ ರೇಗಿಹೋಗಿದೆ. ನನಗೆ ರಿವಾಲ್ವರ್ ಇದ್ದಿದ್ದರೆ ಇಬ್ಬರು ಮೂರು ಜನ ಬ್ರಿಟಿಷರನ್ನು ಕೊಂದು ನಾನೂ ಸಾಯುತ್ತಿದ್ದೆ. ಅಯ್ಯೋ ! ನಮ್ಮ ದೇಶದಲ್ಲಿ ಕೇಳುವವರಿಲ್ಲದಂತಾಯಿತಲ್ಲ. "

ಮತ್ತೆ ನರಸಿಂಹಯ್ಯ ಅಳುವುದಕ್ಕೆ ಆರಂಭಿಸಿದ.

ಮಲ್ಲಿ ಒಂದು ಗಳಿಗೆ ನೋಡಿದಳು : ಗಂಡನ ಮುಖವನ್ನು ನೋಡಿದಳು. ಉತ್ತರ ಕ್ಷಣದಲ್ಲಿ " ಮೇಷ್ಟ್ರೆ ! ಯಾವ ನ್ಯಾಯ ? ನಮ್ಮಮ್ಮ ಸತ್ತಾಗ ನಾನು ಅತ್ತರೆ ನನಗೆ ವೇದಾಂತ ಹೇಳಿದಿರಿ. ಈಗ ನೀವೇ ಅಳುತ್ತಿರುವಿರಲ್ಲಾ !" ಎಂದಳು.

ನರಸಿಂಹಯ್ಯನು ಕಣ್ಣು ಮೂಗು ಒರೆಸಿಕೊಂಡು ಹೇಳಿದನು: " ಮಲ್ಲಮ್ಮಣ್ಣಿಯವರೆ, ಇದು ಕುಟುಂಬದ ವಿಚಾರವಲ್ಲ. ದೇಶದ ವಿಚಾರ. ನಿಮಗೆ ಗೊತ್ತೆ ? ಮುನ್ನೂರು ಜನ ಸತ್ತಿದ್ದಾರೆ. ನೂರಾರು ಜನ ರಾತ್ರಿಯೆಲ್ಲಾ ಒದ್ದಾಡಿ ಸತ್ತಿದ್ದಾರೆ. ಇನ್ನು ಎಷ್ಟು ಜನ ನಾಪತ್ತೆ ಯಾಗಿದ್ದಾರೋ ? ಎಷ್ಟು ಜನರನ್ನು ಪೋಲೀಸಿನವರು ಎಳೆದು ಕೊಂಡು ಹೋಗಿ ಠಾಣಾಗಳಲ್ಲಿ ಹಾಕಿಕೊಂಡಿದ್ದಾರೋ ?"

ಮಾತು ಮಾತಿಗೂ ಬೇಡವೆಂದು ಅಡ್ಡಬರುವಂತೆ ಗಂಟಲು ಕಟ್ಟುತ್ತದೆ : ಬಿಕ್ಕಿ ಬಿಕ್ಕಿ ಅಳುಬರುತ್ತದೆ : ಏನು ಮಾಡಿದರೂ ದುಃಖ ನಿಲ್ಲದು.

ಮಲ್ಲಿಯು ಮೆಲ್ಲಗೆ ಮಾತನಾಡುತ್ತ " ಮೇಷ್ಟ್ರೆ ! ನೀವು ಬಲ್ಲ ವರು. ತಡೆದುಕೊಳ್ಳಿ. ಈ ಟೀ ಕುಡಿಯಿರಿ " ಎಂದು ಸಮಾಧಾನ ಮಾಡಿದಳು. ಅವಳ ಮಾತು ಮೀರಲಾರದೆ ನರಸಿಂಹಯ್ಯನು ಟೀ ಕುಡಿದನು.

ಮಲ್ಲಿಯು ಕೇಳಿದಳು : "ಕುಟುಂಬದ ಸಮಾಚಾರ, ನಿಜ ಅವೊತ್ತು ! ಇವೊತ್ತು ತಾವೂ ಇದನ್ನು ದೇಶದ ಸಮಾಚಾರವೆಂದು ಅನ್ನಿಡಿ.

"ತಾವು ಅಂದು ಹೇಳಿದಂತೆ ಇಂದು ನಾನೂ ಗೀತೆಯನ್ನೇ, ಹೇಳುತ್ತೇನೆ. 'ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ|| ಕ್ಲೈಬ್ಯಂ ಮಾಸ್ಮಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ|| ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ.' ಇದು ಅಳುವ ಸಮಯವೇ ದೇವ ! ಅಳುವುದು ಕೈಲಾಗದಾಗ. ಈಗ ಏನು ಮಾಡಬೇಕೋ ಯೋಚಿಸಿ, ನಿಮ್ಮ ಜೊತೆಗೆ ನಾವೂ ಬುದ್ಧಿಯವರೂ ಸಿದ್ಧವಾಗಿದೇವೆ. ಅಳುವುದು ಬೇಡವೆಂದ ನೀವೇ ಅಳುವುದಾದರೆ, ಕೆತ್ತಬಲ್ಗತ್ತಲೆಗೆ ತರಣಿ ಮುಂಗಾಣದಿರೆ ಪೊತ್ತುವೆಳಗಂ ತೋರ್ಪ ರಾರ್ ಎಂಬಂತಾಗುವುದಲ್ಲವೆ ? ಅಥವಾ ಗುರುಗಳು ತಾವೇ ಅಳುತ್ತಿ ರುವಿರೆಂದು ನಾವೂ ಅಳುವನ್ನು ಆರಂಭಿಸೋಣವೆ? ಅಪ್ಪಣೆಯಾಗಲಿ, ಗುರುವೆ ! ದೇಶದ ಸಮಾಚಾರವೆಂದಿರಿ. ದೇಶವೆಂದರೆ ನಾವೇ ತಾನೇ!"

ನರಸಿಂಹಯ್ಯನಿಗೆ ಏನೋ ಮೂಢ ಭಾವ. ಕೋಪ, ರೋಷ, ಕ್ರೋಧ, ತಾನೆ ತಾನಾಗಿದೆ. ಹೊಡಿ, ಕಡಿ, ತಿವಿ, ಕೊಲ್ಲು, ಎನ್ನುವ ಭಾವ ಬಲಿಯುತ್ತಿದೆ. ಅದನ್ನು ಮುಚ್ಚಿಟ್ಟುಕೊಳ್ಳಲು ಅವನು ಪ್ರಯತ್ನ ಮಾಡುತ್ತಿಲ್ಲ, ಅದನ್ನು ಕಂಡು ಮಲ್ಲಿಯು ನುಡಿದಳು :

"ಗುರುವೇ, ನಮ್ಮ ಮಾತೃ ಭೂಮಿ ಇಂದು ನೊಂದಿದ್ದಾಳೆ. ಸ್ವಾತಂತ್ರ್ಯವು ಬರುವುದು ಎಂದು ನಿರೀಕ್ಷಿಸಿದ್ದಾಗ, ಸಭೆಯನ್ನೂ ಸೇರಿ ಸಲೂ ನಿಮಗೆ ಸ್ವಾತಂತ್ರ್ಯವಿಲ್ಲ ಎಂದು ಸರಕಾರವು ಘೋಷಿಸಿ ದೇಶ ಭಕ್ತರ ಹೃದಯದಲ್ಲಿ ಚೂರಿಯನ್ನು ನೆಟ್ಟಿದೆ. ಇಂದು ನಮ್ಮಲ್ಲಿ ಮದ್ದಿಲ್ಲ ಗುಂಡಿಲ್ಲ. ನಾವೇನು ಮಾಡಬೇಕು? ಅದರಿಂದ, ನಮಗಿರುವುದು ಒಂದೇ ಒಂದು ಜನಬಲ : ಅದನ್ನು ರೂಢಿಸಬೇಕು. ಹಮಾಂ ಕೋಮುಗಳೆಲ್ಲ ಸರಕಾರವನ್ನು ಪ್ರತಿಭಟಿಸುವಂತೆ ಮಾಡಬೇಕು. ಅದರಿಂದ ಅದಕ್ಕಿರು ವುದು ಒಂದೇ ಒಂದು ದಾರಿ. ಗುರುವೇ, ಒಂದೇ ದಾರಿ. ಅದು ಯುಧ್ಯಸ್ವವಿಗತಜ್ವರಃ."

ನಾಯಕನು ವಿಷಯಾಂತರ ಮಾಡಿ ನರಸಿಂಹಯ್ಯನನ್ನು ಸಮಾಧಾನ ಪಡಿಸಲು ಪ್ರಶ್ನೆಯನ್ನು ಕೇಳಿದನು :

"ಅದೆಲ್ಲಿರುವುದು ಆ ಜಲಿಯನ್ ವಾಲ್ ಬಾಗ್ ಎನ್ನುವುದು ?"

"ಅಮೃತಸರದ ಒಂದು ಉಪವನ ಅದು. ಸುತ್ತಲೂ ಗೋಡೆ. ಇರುವುದು ಒಂದು ಬಾಗಿಲು. ಅದರಲ್ಲಿ ಜನ ಸೇರಿದ್ದರು. ರಾಕ್ಷಸ ಡೈಯರ್‌ನು ಆ ಬಾಗಿಲಿನಲ್ಲಿ ಮೆಷೀನ್‌ಗನ್ ಇರಿಸಿ ಜನರನ್ನು ಕೊಲ್ಲಿಸಿದ. ಕಲ್ಕತ್ತೆಯ ಕತ್ತಲೆಯ ಕೋಣೆಯ ಸುಳ್ಳು ಸುದ್ದಿ ಹಬ್ಬಿಸಿ ಆಗ ಇಂಗ್ಲಿಷ್ ಜನಾಂಗವನ್ನು ರೇಗಿಸಿದ ಸಿರಾಜುದ್ದೀನನನ್ನು ಧ್ವಂಸಮಾಡಿಸಿತು ಆಗಿನ ಕುಂಪಣಿಸರಕಾರ. ಈಗ ನೂರಾರು ಜನರನ್ನು ನಿಷ್ಕರುಣೆಯಿಂದ ಕೊಲ್ಲಿಸಿದ ಪಾಪಿ ಇನ್ನೂ ಬದುಕಿದ್ದಾನೆ."

"ನೀವೇನು ಮಾಡಬೇಕೂಂತೀರಿ ? "

"ಮಾಡುವುದೇನು ಸಾರ್ ! ಮಾತಿಗೆ ತಪ್ಪಿರುವ ಸರ್ಕಾರ, ಪ್ರಜಾದ್ರೋಹಿಯನ್ನು ಸಹಿಸುವ ಸರಕಾರ, ಇದಕ್ಕೆ ಧಿಕ್ಕಾರ ಎಂದು ಕೂಗಿಕೊಂಡು ದೇಶವೆಲ್ಲಾ ತಿರುಗಬೇಕು. ಬಂಗಾಳದಲ್ಲಿ ಮಾಡುತ್ತಿರುವ ಹಾಗೆ ಹೆಂಗಸರು ಹುಡುಗರೂ ಸಹ ಬ್ರಿಟಿಷರ ತಲೆ ಕಂಡರೆ ಬಾಂಬು ಹಾಕಬೇಕು."

"ನೀವು ಬಾಂಬು ಮಾಡುವುದು ಹೇಗೆ ಸಾರ್ ? "

"ಹೇಗೇನು ? ಅರವಿಂದರ ವಿಚಾರಣೆ ಆದ ಮೇಲೆ ನಡೆದ ಇನ್ನೊಂದು ವಿಚಾರಣೆಯಲ್ಲಿ ಒಬ್ಬ ಅಪರಾಧಿ ಎನ್ನಿಸಿಕೊಂಡವನು ಬಾಂಬು ಮಾಡುವ ಕ್ರಮವನ್ನು ಹೇಳಿದ್ದಾನೆ. ಇಂಗ್ಲಿಷರೆಲ್ಲ ಇಲ್ಲಿರುವುದು ಸುಮಾರು ಮೂರು ಲಕ್ಷ. ಮೂರು ಲಕ್ಷ ನಮ್ಮ ಜನ ಪ್ರಾಣ ಕೊಟ್ಟರೆ, ಒಂದೇ ಒಂದು ದಿನದಲ್ಲಿ ಇಂಡಿಯಾ ಸ್ವರಾಜ್ಯವನ್ನು ಸ್ಥಾಪಿಸಬಹುದು. "

"ಅವರಲ್ಲಿ ಆಯುಧಗಳಿವೆ. ನಮ್ಮಲ್ಲಿಲ್ಲ. "

"ಆಗಲಿ, ಸಾರ್. ಒಬ್ಬೊಬ್ಬನು ಹತ್ತು ಜನರನ್ನು ಕೊಂದಾನೆ? ನೂರು ಜನರನ್ನು ಕೊಂದಾನೆ ? ನೂರುಜನ ಒಬ್ಬನಿಗೆ ಬಲಿ ಅಂದರೂ ಮೂರು ಕೋಟಿ ಆಯಿತು. ಮೂವತ್ತು ಮೂರರಲ್ಲಿ ಮೂರು ಹೋದರೂ

ಇನ್ನೂ ಮೂವತ್ತು ಕೋಟಿ ಇರುವುದಲ್ಲ? ಈಗೇನಾಗಿದೆ ಗೊತ್ತೆ? ಎಲ್ಲರಿಗೂರೇಗಿದೆ. ಮುಸಲ್ಮಾನರು ತಮ್ಮ ಖಿಲಾಫತ್ ಹೋಯಿತು ಎಂದು ರೇಗಿದ್ದಾರೆ. ರೌಲತ್ ಆಕ್ಟ್ ತಂದಿದ್ದಾರೆ ಎಂದು ಹಿಂದೂ ಮುಸಲ್ಮಾನ್ ಇಬ್ಬರೂ ರೇಗಿದ್ದಾರೆ. ಎಲ್ಲರೂ ಹಿಂದೂ ಮುಸಲ್ಮಾನ್ ಕೀಜೈ, ಡೌನ್ ವಿತ್ ಬ್ರಿಟಿಷ್ ರಾಜ್ ಎನ್ನುತ್ತಿದ್ದಾರೆ. ಆ ಗಾಂಧಿಯವರು ಮಾತ್ರ ಎಲ್ಲರನ್ನೂ ತಡೆಯುತ್ತಿದ್ದಾರೆ."

"ಗಾಂಧೀಗೆ ಎಲ್ಲರನ್ನೂ ತಡೆಯುವ ಶಕ್ತಿ ಇದೆಯೇ?"

"ಅದೇ ಆಶ್ಚರ್ಯ, ತಿಲಕರು ಏನೂ ಇಲ್ಲದೆ ರೇಗುವವರು; ಅವರು ಸುಮ್ಮನಿದ್ದಾರೆ. ಬಿಸೆಂಟರು ಸುಮ್ಮನಿದ್ದಾರೆ. ಈತನ ಮಾತೇ ಮಾತಾಗಿದೆ."

"ಆತನಲ್ಲಿ ಅಂಥಾ ಶಕ್ತಿ ಏನಿದೆ?"

"ಹಿಂದಿನ ಕಾಲದ ಸಾಧುಗಳ ಹಾಗೆ ಮಾತೆತ್ತಿದರೆ 'ನನಗೆ ಅಂತರ್ವಾಣಿ ಹೇಳಿತು' ಎಂದು ಇತರರ ಬಾಯಿ ಮುಚ್ಚಿಸುತ್ತಾನೆ. ಒಂದು ಸಲ ತಿಲಕರು ರೇಗಿ 'ಏನ್ರಿ, ನಿಮಗೆ ಮಾತ್ರವೇ ಏನು ಅಂತರ್ವಾಣಿ ಇರುವುದು? ಇನ್ನು ಯಾರಿಗೂ ಇಲ್ಲವೇ ಇಲ್ಲವೋ?' ಎಂದು ಪ್ರತಿ ಭಟಿಸಿದರು. ಈಗ ಸತ್ಯಾಗ್ರಹವಂತೆ! ಅಹಿಂಸೆಯಂತೆ! ಇನ್ನೊಂದು ವಿಷಯ ಗೊತ್ತೇನು? ನಮ್ಮ ಪ್ರೊಫೆಸರ್ರು ರಾಧಾಕೃಷ್ಣ ಅವರು ಯಾವಾಗಲೂ ನಗುನಗುತ್ತ ಇರುವವರು. ಅವರೂ ಕೂಡ ರೇಗಿದ್ದಾರೆ. ಈ ಗಾಂಧಿ ಸೌತ್ ಆಫ್ರಿಕದಲ್ಲಿ ಹೂಡಿದಂತೆ ಇಲ್ಲಿಯೂ ಸತ್ಯಾಗ್ರಹ ಹೂಡಬೇಕೆಂದಿದ್ದಾರೆ. ಕ್ರಿಸ್ತನು ಹೇಳಿದ ಉಪದೇಶದಂತೆ ಒಂದು ಕೆನ್ನೆಗೆ ಹೊಡೆದರೆ ಇನ್ನೊಂದು ಕೆನ್ನೆಯನ್ನು ತೋರಿಸುವುದಕ್ಕೆ ಸಿದ್ಧರಾಗಿದ್ದಾರೆ. ಅಲ್ಲಿ ಸೋತಿರುವ ಬ್ರಿಟಿಷರು ಇಲ್ಲಿ ಗೆಲ್ಲಬೇಕೆಂದು ಎರಡು ಕೆನ್ನೆ ಹೊಡೆದು ತಲೆಯನ್ನು ಒಡೆಯುವುದಕ್ಕೂ ಸಿದ್ಧವಾಗಿದ್ದಾರೆ. ಅಲ್ಲಿ ಜನವೆಲ್ಲ ಗಾಂಧಿಯ ಮಾತು ಕೇಳಲು ಸಿದ್ಧವಾಗಿತ್ತು: ಒಂದು ಮನಸ್ಸಿನಿಂದ ನಡೆಯಲು ಒಪ್ಪಿತ್ತು. ಇಲ್ಲಿ ಬಂಗಾಳಿಗೆ ಮರಾಠಾ ಕಂಡರೆ ಆಗುವುದಿಲ್ಲ. ಪಂಜಾಬಿಗೆ ಮದರಾಸಿ ಕಂಡರೆ ಆಗುವುದಿಲ್ಲ. ಸಿ. ಪಿ. ಯಲ್ಲಿ ಗಲಾಟೆಯಾದರೆ ಮಲಬಾರಿ ಸಿಪಾಯಿಗಳನ್ನು ಬಿಟ್ಟು ಹೊಡೆಸು

ತ್ತಾರೆ. ಮದರಾಸಿನಲ್ಲಿ ಗಲಾಟೆಯಾದರೆ ಸಿಕ್ಕರನ್ನು ಬಿಡುತ್ತಾರೆ. ಸಿಕ್ಕರೇ ಗಲಾಟೆ ಮಾಡಿದರೆ ಘೂರ್ಕರನ್ನು ಬಿಡುತ್ತಾರೆ. ಹೀಗೆ ದೇಶದ ವಿಶಾಲತೆಯೇ, ನಮಗೆ ಮೃತ್ಯುವಾಗುವಂತೆ ಮಾಡಿದ್ದಾರೆ. ಇಲ್ಲಿ ಸತ್ಯಾಗ್ರಹ ಗೆಲ್ಲುವುದೂ ನಿಜವೇ ? ತಿಲಕರು ಹೇಳುವಂತೆ ಶಠಂ ಪ್ರತಿಶಾಠ್ಯಂ. ಅದೊಂದೇದಾರಿ! ಹೊಡೆತಕ್ಕೆ ಹೊಡೆತ ಎನ್ನುತ್ತಿದ್ದಾರೆ. ಈತ ಅದೇನೋ ವಿಚಿತ್ರ ಪುರುಷನಾಗಿದ್ದಾನೆ. ಅದಿರಲಿ ಮಲ್ಲಣ್ಣ ನಾನಿನ್ನು ಅಳುವುದಿಲ್ಲ. ಆದುದು ಆಗಲಿ. ತಮ್ಮ ಮಾತಿನಂತೆ ಯುಧ್ಯಸ್ವ ವಿಗತಜ್ವರಃ ಎಂದುಕೊಂಡು ಹೊರಡುತ್ತೇನೆ."

ಮಲ್ಲಣ್ಣ ಶಂಭುರಾಮಯ್ಯ ಇಬ್ಬರೂ ಬಂದರು. ಶಂಭು ರಾಮಯ್ಯನು ಪತ್ರಿಕೆಯನ್ನು ಹಿಡಿದಿದ್ದನು. ಏನೋ ಹೇಳುವುದಕ್ಕೇ ಬಂದಂತಿತ್ತು.

ನಾಯಕನೂ ಹೇಳಿದನು : " ಏನು ಸಮಾಚಾರ? "

"ಟಾಗೋರರು 'ಸರ್' ಟೈಟಲನ್ನು ಹಿಂದಕ್ಕೆ ಕೊಟ್ಟುಬಿಟ್ಟಿದ್ದಾರೆ"

ನಾಯಕನಿಗೆ ಏನೋ ಮಧ್ಯಾಹ್ನ ಮೂರು ಗಂಟೆಯಲ್ಲಿ ಸೂರ್ಯನು ಇದ್ದಕ್ಕಿದ್ದಂತೆ ಅಸ್ತಮಯವಾದಂತಾಯಿತು.

" ನಿಜವಾಗಿ!"

ಶಂಭುರಾಮಯ್ಯನು ಪತ್ರಿಕೆಯನ್ನು ಕೊಟ್ಟನು. ಮದರಾಸ್ ಪತ್ರಿಕೆಯೊಂದು ಟಾಗೂರರನ್ನು ವಾಚಾಮಗೋಚರವಾಗಿ ಬಯ್ದಿದೆ. "ಇವರು ಬಿರದುಗಳನ್ನು ಗುಲಾಮಗಿರಿಯ ಗುರುತು ಎಂದು ಹೆಸರಿಟ್ಟುಬಿಟ್ಟಿದ್ದಾರೆ. ಇವರಂತಹವರಿಗೂ ಈ ಭಾವ ಬಂದಿರುವುದು ನಂಬುವುದಕ್ಕಾಗುವುದಿಲ್ಲ. ಈ ಮಾತಿನಿಂದ ಅಳೆಯಬೇಕೆಂದರೆ ಕವೀಂದ್ರರಿಗೆ ಹುಚ್ಚು ಹಿಡಿದಿದೆ ಎನ್ನಬೇಕು. ಆ ಸೌತ್ ಆಫ್ರಿಕ ಕಾಡು ಮನುಷ್ಯನ ಪ್ರಭಾವ ಇದು ಎಂದು ಆದರೆ, ಆ ಮನುಷ್ಯನು ಇತರರಿಗೂ ಹುಚ್ಚು ಹಿಡಿಸುವುದರೊಳಗಾಗಿ ಆತನನ್ನು ವಿಚಾರಣೆ ಮಾಡದೆಯೆ ಗಲ್ಲಿಗೇರಿಸಬೇಕು."

ನಾಯಕನು ಅಸಹ್ಯಪಡುತ್ತಿದ್ದಾನೆ.

ನರಸಿಂಹಯ್ಯನು ತಲೆದೂಗುತ್ತಿದ್ದಾನೆ.

ಮಲ್ಲಿಯು ಏನೋ ಲಾಭವಾದಂತೆ ಥಟ್ಟನೆ ಎದ್ದು "ಮೇಷ್ಟ್ರೆ ಗಾಂಧಿ ಗೆದ್ದರು." ಎಂದಳು.

"ಹಾಗೆಂದರೆ ?"

"ಈ ಮದ್ರಾಸ್ ಪತ್ರಿಕೆ ಸರಕಾರದ ಕಡೆ ಬರೆಯುವ ಪತ್ರಿಕೆ. ಅದು ಟಾಗೂರರನ್ನು ಬಯುತ್ತಾ, ಇವರು ಹೀಗಾದುದು ಗಾಂಧಿಯವರಿಂದ ಎಂದಿದೆ. ಅವರ ಪ್ರಭಾವ ಬೆಳೆಯುತ್ತದೆ ಎಂದು ಹೆದರಿ ಅವರನ್ನು ಗಲ್ಲಿಗೇರಿಸಬೇಕು ಎಂದಿದೆ. ಶತ್ರುಗಳು ರೇಗಿದರಲ್ಲವೆ ನಮಗೆ ಜಯ ? ಇನ್ನು ದಿಗಿಲಿಲ್ಲ."

ತನ್ನ ಬಾಯಿಂದ ತಾನೇ ಉಗುಳಿದ ಎಂಜಲನ್ನೇಹಾರ ಮಾಡಿಕೊಂಡು ಅದರ ಬಲದಿಂದಲೇ ಪತ್ತಿ ಇಳಿಯುವ ಜಾಡನಂತೆ, ಮಲ್ಲಿಯು ಶತ್ರುಗಳ ರೇಗೆಂಬ ಸಣ್ಣ, ಸೂಕ್ಷ್ಮ ತಂತುವನ್ನು ಹಿಡಿದು ಗಾಂಧಿಯುವರ ಜಯವನ್ನು ಕಾಣುತ್ತಿರುವುದನ್ನು ಕಂಡು ನರಸಿಂಹಯ್ಯನಿಗೆ ನಗು ಬಂತು. "ಮಗಳೇ, ಬ್ರಿಟಿಷ್‌ರನ್ನು ಗೆಲ್ಲುವುದು ಅಷ್ಟು ಸುಲಭವಲ್ಲ. ಬ್ರಿಟಿಷ್‌ನೊಬ್ಬನು ಇಂಡಿಯದಲ್ಲಿ ಇರುವವರೆಗೂ ಇಂಡಿಯಕ್ಕೆ ಸ್ವಾತಂತ್ರ್ಯವಿಲ್ಲ. ಏಕೆಂದರೆ ಹಡಗಿನಲ್ಲಿ ಕೂತಲ್ಲಿ, ನಡಗೆಯಲ್ಲಿ ಇಂಗ್ಲೆಂಡಿನಲ್ಲಿರುವವರೆಲ್ಲಾ ಇಂಡಿಯಕ್ಕೆ ಬಂದು ಬಿಟ್ಟಾರು. ಆದರೂ ನೀನು ಹೇಳಿದುದರಲ್ಲಿ ಸತ್ಯವಿಲ್ಲದೆ ಇಲ್ಲ. ಬ್ರಿಟಿಷರೊಡನೆ ಅಸಹಕರಿಸುವುದು ನಮಗೆ ಇನ್ನೊಂದು ನೈತಿಕ ಬಲವನ್ನು ಕೊಡುತ್ತದೆ. ಅಲ್ಲಿಗೆ ಎದುರಾಳಿ ಅಯೋಗ್ಯನೆಂದು ಲೋಕಕ್ಕೆ ತೋರಿಸಿ ಕೊಟ್ಟಂತಾಗುತ್ತದೆ. ಟಾಗೋರರು ಹಾಕಿ ಕೊಟ್ಟಿರುವ ಈ ದಾರಿಯೇ ಗಾಂಧಿಯ ಸತ್ಯಾಗ್ರಹದ ರಥ ಮುಂದೆ ಹೋಗಲು ಹೆದ್ದಾರಿಯಾಗುವುದೇನೋ ? ನಾನು ಇಲ್ಲಿಗೆ ಬಂದಾಗ ಸರ್ವಸ್ವವೂ ಹೋಯಿತು ಎಂದು ಅಳುತ್ತಾ ಬಂದೆ. ನಿನ್ನ ಮಾತು ನನಗೆ ಹೊಸಬೆಳಕನ್ನು ಕೊಡುತ್ತಿದೆ. ಬಹುಶಃ ಗಾಂಧಿಯ ಮಾತೇ ಸರಿಯೇನೋ ? ಆಗಲಿ, ಮಗಳೇ, ನೀನೆ ನನ್ನ ಪಾಲಿನ ಭಾರತಿ. ಕಾಯುತ್ತೇನೆ. 'ಯುಧ್ಯಸ್ವ ವಿಗತಜ್ವರಃ' ಎಂಬ ನಿನ್ನ ಮಾತನ್ನು ಧೇವರಾಣತಿಯಂತೆ ಪಾಲಿಸುತ್ತೇನೆ."

ಮಲ್ಲಿಯು ಏನೋ ಹೇಳ ಹೋದಳು. ನಾಯಕನು ತಡೆದನು.

ಮಲ್ಲಣ್ಣನ ಕಡೆತಿರುಗಿ " ಏನು ? " ಎಂದನು.

ಮಲ್ಲಣ್ಣನು ಏನೊ ಗಂಭೀರವಾದ ಮುಖ ಮುದ್ರೆಯನ್ನು ಪ್ರದರ್ಶಿಸುತ್ತಾ " ಬುದ್ಧಿಯವರಲ್ಲಿ ಏನೋ ಹೇಳಬೇಕೆಂದಿದ್ದೆ. ಸಮಯ ಹೆಂಗೋ ? " ಎಂದನು.

ನಾಯಕನಿಗೆ ವಿಷಯಾಂತರವಾಗುವುದು ಬೇಕಾಗಿತ್ತು. "ಹೇಳಿ" ಎಂದು ಕೂಡಲೇ ಹೇಳಿದನು. ಇಬ್ಬರೂ ಇನ್ನೂ ನಿಂತಿರುವುದನ್ನು ಕಂಡು ಕುಳಿತು ಕೊಳ್ಳಿ ಎಂದನು. ಇಬ್ಬರೂ ಕುಳಿತರು. ಮಲ್ಲಣ್ಣನು ಹೇಳಿದನು.

" ಬುದ್ಧಿಯೋರ ಪಾದದಲ್ಲಿ ಮಲ್ಲಮ್ಮನ ನೋಡಿಕೊಂಡು ಸುಖವಾಗೇ ಇದ್ದೀನಿ. ಅದರೂ ಒಂಟಿ ಹಕ್ಕಿ ಪತರಗುಟ್ಟೋಹಂಗೆ ಜೀವ ಬಾಳಾ ಒದ್ದಾಡುತದೆ. ಅಪ್ಪಣೆಯಾದರೆ ನಾನು ಕಾಸೀ ರಾಮೇಶ್ವರ ತಿರುಗಿಕೊಂಡು ಬರೋವ ಅಂತ ಅನ್ನಿಸ್ತಾ ಅದೆ."

" ಈಗ ಎಲ್ಲೆಲ್ಲೂ ಜನ ಹಿಡಿದು ಜೈಲಿಗೆ ತುಂಬುತ್ತಾ ಅವರಂತೆ. ಈಗಲೇ ಯಾತ್ರೆ ? ಏನು ನರಸಿಂಹಯ್ಯನವರೇ ? "

" ಇಲ್ಲ ಸಾರ್, ಮಲ್ಲಣ್ಣನೋರ ಮಾತಿನಲ್ಲಿ ಒಂದು ಅಂಶವಿದೆ. ಈಗ ಅವರಲ್ಲ. ನಾವೆಲ್ಲ ಯಾತ್ರೆ ಹೋಗೋಣ. ಒಂದು ಸಲ ಪೆಷಾವರ್ ನಿಂದ ಕನ್ಯಾಕುಮಾರಿವರೆಗೆ, ಕರಾಚಿಯಿಂದ ಕಲ್ಕತ್ತವರೆಗೆ ಅಲೆದು ಬರೋಣ. ನೀವು ನಿಮ್ಮ ರಾವ್‌ಬಹದ್ದೂರ್ ಬಿರುದು ಬಿಟ್ಟು ಬಿಡಿ ಎನ್ನುವುದರಲ್ಲಿದ್ದೆ. ಬೇಡಿ. ಅದರ ಆಶ್ರಯದಲ್ಲಿ ಬ್ರಿಟಿಷ್ ಸರಕಾರದ ಭೀತಿಯಿಲ್ಲದೆ ದೇಶವನ್ನು ಅಲೆದು ಈ ಆಂದೋಳನ ಎಲ್ಲಿಯವರೆಗೂ ವ್ಯಾಪಿಸಿದೆ ನೋಡಿಕೊಂಡು ಬರೋಣ."

" ಅಲ್ರೀ ! ಈ ಸಲ ಬಿ. ಎ. ಗೆ ಕಟ್ಟುತ್ತೀರೇನೋ ?"

" ನನಗೆ ಬಿ. ಎ. ಆಗಿ ಆಗಬೇಕಾದ್ದೇನು ಸಾರ್ ! ಅದೊಂದು ಸರಕಾರೀ ನೌಕರಿಗೆ ಒಂದು ಸುಂಕದ ಚೀಟಿ. ಸರಕಾರ ಬೇಡ ಎನ್ನುವವನು ಸರಕಾರದ ನೌಕರಿಗೆ ಏಕೆ ಆಸೆ ಬೀಳಬೇಕು ? ನನಗೆ ಕಾಲೇಜಿನಿಂದ, ಯೂನಿವರ್ಸಿಟಿಯಿಂದ ಆಗಬೇಕಾದ ಪ್ರಯೋಜನವಾಗಿದೆ. ಅಲ್ಲಿರುವ ಮಹಾ ವಿದ್ವಾಂಸರ ಉಪದೇಶಗಳನ್ನು ಕೇಳಿ ಕೃತಾರ್ಥನಾಗಿ

ದ್ದೇನೆ. ಈ ದೇಶಸೇವಾವ್ರತವು ನನ್ನ ಮನಸ್ಸಿಗೆ ಬಂದಿರುವುದು ಅವರ ಕೃಪೆಯಿಂದ. ಈಗ ನನಗೆ ತಿಳಿದಿರುವುದು ಸಾಕು. ಇದನ್ನು ಜನಸಾಮಾನ್ಯಕ್ಕೆ ಹಂಚಬೇಕು. ಆ ಕಾಲವೂ ಬರುತ್ತಿದೆ. ಸಾರ್, ತಮ್ಮ ಅಪ್ಪಣೆಯಾದರೆ ಒಂದು ಕೆಲಸ ಮಾಡಬೇಕು ಎನ್ನಿಸುತ್ತಿದೆ: ಮಾಡುತ್ತೇನೆ."

"ಏನು ಹೇಳಿ ?"

"ಈಗ ವಿದ್ಯಾಭ್ಯಾಸ ಅದರಲ್ಲೂ ಕಾಲೇಜಿನ ವಿದ್ಯಾಭ್ಯಾಸ ನಗರ ವಾಸಿಗಳಿಗೆ ಮಾತ್ರವಾಗಿದೆ. ಇನ್ನೂ ಹಳ್ಳಿಯವರು ಅಷ್ಟಾಗಿ ಬರುತ್ತಿಲ್ಲ. ಅಂಥವರು ಕಾಲೇಜಿಗೆ ಬರುವುದಕ್ಕೆ ಅನುಕೂಲವಾಗಿರುವ ಹಾಗೆ, ಒಂದೆರಡು ಸ್ಕಾಲರ್‌ಷಿಪ್ಸ್ ಕೊಡಬೇಕು. ವರ್ಷಕ್ಕೆ ಒಬ್ಬನಿಗೆ ೬೪ ರೂಪಾಯಿ ಆದರೆ ಸಾಕು. ಅಂಥದು ಎರಡು ಸ್ಕಾಲರ್‌ಷಿಪ್ಸ್ ಕೊಡಲು ತಾವು ಕೊಟ್ಟಿರುವ ಹಣವನ್ನು ಯೂನಿವರ್ಸಿಟಿಗೆ ತಮ್ಮ ಹೆಸರಿನಲ್ಲೇ ಕೊಟ್ಟುಬಿಡೋಣ ಎಂದಿದ್ದೇನೆ. ಅಪ್ಪಣೆಯಾಗಬೇಕು."

"ಆ ಹಣ ನಿಮ್ಮದು. ಅದನ್ನು ನೀವು ಏನು ಬೇಕಾದರೂ ಮಾಡಬಹುದು."

"ನನ್ನದಲ್ಲ. ನಾನು ನ್ಯಾಯವಾಗಿ ಸಂಪಾದಿಸಿರುವುದು ಅದರಲ್ಲಿ ಒಂದೇ ಸಾವಿರ. ಉಳಿದ ನಾಲ್ಕು ಸಾವಿರ, ತಮ್ಮ ಮಲ್ಲಮ್ಮಣ್ಣಿಯವರ ಔದಾರ್ಯದಿಂದ ಬಂದುದು. ಅದರಿಂದ ಅದನ್ನು ತಮ್ಮ ದಂಪತಿಗಳ ಹೆಸರಿನಲ್ಲಿ ದಾನ ಮಾಡಿಬಿಡುತ್ತೇನೆ."

ನಾಯಕನು ಮಲ್ಲಿಯ ಮುಖವನ್ನು ನೋಡಿದನು: ಅವಳು ಅದೇನೋ ಮಲ್ಲಣ್ಣನ ಮುಖವನ್ನು ನೋಡಿದಳು. ಮಗಳು ತಂದೆಯೊಡನೆ ಏನು ಹೇಳಿದಳೋ ? ಅವನು ಎದ್ದುನಿಂತು, "ಕೆಂಪೀ ಒಡವೆ ವಸ್ತ್ರಾ ಎಲ್ಲಾ ನನ್ನ ಅತ್ರಲೇ ಐತೆ. ಅದನೂ ಒಪ್ಪಿಸ್ತೀನಿ. ಎರಡು ಪಾಲು ಮಾಡಿ ಒಂದು ಪಾಲು ಆ ಮಕ್ಕಳಿಗೆ, ಇನ್ನೊಂದು ಪಾಲು ಇವರು ಹೇಳೋಂಗೆ ಕಾಲರ್‌ಷಿಪ್ಪಿಗೆ ಕೊಡಬೋದು ಅಂತ ಕಾಣ್ತದೆ, ಬುದ್ದಿ, ಅದೂ ತಮ್ಮ ಹಣವೇ !"

ನಾಯಕನು ನಕ್ಕನು. "ನಮ್ಮ ಹತ್ತಿರಲೂ ಕೊಂಚ ಹಣ ಇದೆ. ನರಸಿಂಹಯ್ಯನವರೇ, ನಾನು ಮಹಾರಾಜರನ್ನು ಕಂಡು ಈ ಸ್ಕಾಲರ್‌ಷಿಪ್‌ನದು ಗೊತ್ತುಮಾಡುತ್ತೇನೆ. 'ಅಷ್ಟೇ ಅಲ್ಲ. ಹಳ್ಳಿಯವರಿಗೆ ವಿದ್ಯಾಭ್ಯಾಸ ಬೇಕು : ಜ್ಞಾನ ಹಂಚಬೇಕು ಅಂದಿರಿ' ಅದಕ್ಕೂ ಏರ್ಪಾಡು ಮಾಡೋಣ. ಸರಿಯಾದೋರನ್ನ ನೋಡಿ. ಈಗ ಮಜ್ಜಿಗೆಹಳ್ಳಿಯಲ್ಲಿರುವ ಎಲಿಮೆಂಟರಿಸ್ಕೂಲು ಮಿಡಲ್‌ಸ್ಕೂಲ್ ಆಗಲಿ. ಅದಕ್ಕೆ ಬೇಕಾದ್ದನ್ನೆಲ್ಲಾ ಮಾಡಿ ಅಂತ ಒಂದು ಐವತ್ತು ಸಾವಿರ. ಯೂನಿವರ್ಸಿಟಿಗೆ ಹಳ್ಳಿಯವರಿಗೆ ಸ್ಕಾಲರ್‌ಷಿಪ್ಸ್‌ಗೆ ಅಂತ ಒಂದು ಲಕ್ಷ ಕೊಡುವ. ನಿಮ್ಮಲ್ಲಿ ಇರುವ ಹಣ ಇಟ್ಟುಕೊಂಡಿರಿ. ಬೆಟ್ಟ ಹತ್ತುವವನು ನೆಲ್ಲಿಕಾಯಿ ಎಸೆಯಬಾರದು."

ಒಂದು ಗಳಿಗೆ ಯಾರೂ ಮಾತಾಡಲಿಲ್ಲ. ಮಲ್ಲಣ್ಣ "ನನ್ನ ಮಾತು" ಎಂದನು. ನಾಯಕರು, "ಇನ್ನೇನು ಸಂಕ್ರಾಂತಿ ಬಂತು. ರಥಸಪ್ತಮಿ ಆಗಿಹೋಗಲಿ. ಆಮೇಲೆ ಎಲ್ಲರೂ ಹೋಗೋವ" ಎಂದನು.

ಆಳು ಬಂದು "ಹಕೀಂಸಾಬರು ಬಂದಿದ್ದಾರೆ" ಅಂದನು.

ಹಕೀಂ ಒಳಕ್ಕೆ ಬಂದನು. ಅವನು ಅತ್ತು ಅತ್ತು ಕಣ್ಣು ಕೆಂಪಗೆ ಆಗಿಹೋಗಿದೆ : ಊದಿಕೊಂಡಿದೆ. ಹಕೀಂನು ನಾಯಕನನ್ನು ಕಂಡು "ಖಾವಂದ್!" ಎಂದನು. ಮುಂದಕ್ಕೆ ಮಾತನಾಡಲಾಗಲಿಲ್ಲ. ನಾಯಕನು "ಏನು? ಏನು?" ಎಂದು ಆತುರವಾಗಿ ಕೇಳಿದನು.

"ಹೋಗಿಬುಟ್ಟೋ! ಎರಡೂ ಹೋಗಿಬುಟ್ಟೊ! ರಾಣಿ, ಸುಲ್ತಾನ್ ಎರಡೂ ಹೋಗಿಬುಟ್ಟೋ!"

ಎಲ್ಲರೂ ಪೆಚ್ಚಾಗಿಹೋದರು. ನಾಯಕನ ಕಣ್ಣಿಂದ ಎರಡು ತೊಟ್ಟು ನೀರು ಉದುರಿತು. "ನಿಧಾನವಾಗಿ ಅಕ್ಷರ ಅಕ್ಷರವನ್ನೂ ಸೃಷ್ಟಿಮಾಡಿ ಹೊರಕ್ಕೆ ತೆಗೆದಿಡುವನಂತೆ "ಎರಡೂ ಹೋದವಾ! ಬೆಳಿಗ್ಗೆ ಚೆನ್ನಾಗ್ತಾ ಅವೆ ಅಂದೆಯಲ್ಲೋ?" ಎಂದನು.

"ನಾನು ಊಟಕ್ಕೆ ಹೋದಾಗ ನೋಡ್ದೆ. ಎರಡೂ, ಪಾಪ, ಮೊಕದಲ್ಲಿ ಮೊಕ ಇಟ್ಟು ಮೂತಿ ಉಜ್ಜಿದುವು-ಮತ್ತೆ ಮೂರು ಗಂಟೇಲಿ

ಹೋಗಿ ನೋಡ್ಡೆ. ನಾಲ್ಕು ಗಂಟೆಗೆ ಡಾಕ್ಟರು ಬಂದು ನೋಡಿ, ಇನ್ನೇನು ಇಲಾಜೆ ಬೇಕಿಲ್ಲ. ಹುರುಳಿ ಕಟ್ಟಿಸಿ ಅಂದನು. ನಂಗೂ ಧೈರ್ಯ ಆಯಿತು. ಹುರುಳಿ ಕಟ್ಟಿಸಿ ಮೈಯೆಲ್ಲಾ ಸವರಿಬಂದೆ. ಐದು ನಿಮಿಷ ಆಯಿತು: ಆಳು ಬಂದು ಎರಡೂ ಬಿದ್ದುಹೋಗವೆ ಅಂದ. ಹೋಗಿ ನೋಡ್ತೀನಿ. ಎರಡೂ ಸತ್ತು ಮಲಗವೆ."

ಹರ್ಕೇಂನ ದುಃಖ ಹೇಳತೀರದು. ನಾಯಕನು ಎದ್ದು ಕುದುರೆಗಳನ್ನು ನೋಡುವುದಕ್ಕೆ ಹೊರಟನು: ಮಲ್ಲಿಯೂ ಮೊಕ ಪೆಚ್ಚು ಮಾಡಿಕೊಂಡು ಹಿಂದೆ ಹೋದಳು. ಮಿಕ್ಕವರೂ ಅವರ ಹಿಂದೆ ಹೋದರು.

## ೩೮

ನಾಯಕನು ನಾಷ್ಟಾ ಮಾಡುತ್ತಿದ್ದಹಾಗೆಯೇ ಕಾರು ಬಂತು. ರಾಣಿಯು ಒಳಕ್ಕೆ ಸಡಗರದಿಂದ ಬಂದಳು. ಸುಮಾರು ನಲವತ್ತು ಆಗಿರಬಹುದು ಆಕೆಗೆ ವಯಸ್ಸು. ದೇಹದಲ್ಲಿ ಅವಲಕ್ಷಣದ ಬೊಜ್ಜಿಲ್ಲ: ಆದರೆ ಅಂಗಾಂಗಗಳು ಇರಬೇಕಾದ್ದಕ್ಕಿಂತಲೂ ಒಂದು ಸುತ್ತು ಹೆಚ್ಚಾಗಿ ಸೊಂಪಾಗಿ ಬೆಳೆದ ಲತೆಯಂತೆ ದುಂಡು ದುಂಡಾಗಿ, ಮುದ್ದಾಗಿವೆ. ಮುಖದಲ್ಲಿ ತಾನು ಒಡತಿಯೆಂಬ ದರ್ಪವು ತಾನೇ ತಾನಾಗಿದೆ. ಈಗ ನಾಯಕರು ಇಲ್ಲದಾಗ ಅರಮನೆಯ ವ್ಯವಹಾರವನ್ನೆಲ್ಲ ತಾನೇ ನೋಡುತ್ತಾಳೆ. ನಾಯಕನಷ್ಟೇ ವಿಚಕ್ಷಣೆಯಿಂದ ಎಲ್ಲವನ್ನೂ ನಿರ್ವಹಿಸುತ್ತಾಳೆ. ಒಮ್ಮೆ ಮಾದೇಗೌಡನು "ಹೆಂಗಸರು ಅಪ್ಪಣೆ ಮಾಡೋದು: ನಾವು ಮೀಸೆ ಹೊತ್ತ ಗಂಡಸರು ಕೇಳೋದು" ಎಂದು ಏನೋ ಜೋರುಮಾಡಿದ್ದನು. ಕೂಡಲೇ ಅರಮನೆಯಿಂದ ಬುಲಾವ್ ಬಂತು. ರಾಣಿಯು ತೆರೆಯೊಳಗೆ ನಿಂತು, ಮನೆವಾರ್ತೆ ನಂಜಪ್ಪನನ್ನು ಸಾಕ್ಷೀ ಕರಿಸಿಕೊಂಡು ಗದರಿದಳು: "ಅಪ್ಪಣೆ ಬರೋದು ಅರಮನೆ

ಯಿಂದ. ಅಪ್ಪಣೆಮಾಡೋರು ಅಂಗರೇಕು ತೊಟ್ಟಿದ್ದರೇನು ? ಸೀರೆ ಉಟ್ಟಿದ್ದರೇನು ? ಇಷ್ಟ ಇದ್ದರೆ ಅಪ್ಪಣೆ ನಡೆಸಿಕೊಂಡು ಇರಬೇಕು : ಇಲ್ಲದಿದ್ದರೆ ಮೈಸೂರುಸೀಮೆ ದೊಡ್ಡದಾಗಿದೆ" ಎಂದು ಗುಡುಗಿದಳು. ಅರಮನೆಗೆ ಬರುವಾಗ "ಇವೊತ್ತು ಅಮ್ಮನೋರ ಗ್ರಹಚಾರ ಬಿಡಿಸಿ ತೀನಿ" ಎಂದು ಬಂದಿದ್ದವನು ಆ ಗುಡುಗಿಗೆ ಬೆದರಿ ಬಾಲ ಮುದುರಿ ಕೊಂಡು ಓಡುವ ನಾಯಿಮರಿಯಂತೆ ತಪ್ಪಿಸಿಕೊಂಡು ಓಡಿದ್ದನು.

ಮಾದೇಗೌಡನು ಮಜ್ಜಿಗೆ ಹಳ್ಳಿಯನ್ನು ಬಿಡಬೇಕು ಎಂದು ಗೊತ್ತುಮಾಡಿಕೊಂಡು ತನ್ನ ಆಸ್ತಿಯನ್ನೆಲ್ಲಾ ಮಾರಿ ಬೇರೆ ಊರಿಗೆ ಹೋಗಿ ಬಾಳಬೇಕೆಂದು ಮನಸ್ಸುಮಾಡಿಕೊಂಡಿದ್ದನು. ಪ್ರಜಾ ಪ್ರತಿನಿಧಿ ಸಭೆಗೆ ಮೆಂಬರಾಗಬೇಕು. ಇವೊತ್ತು ದಿವಾನರು, ನಾಳೆ ಕೌನ್ಸಿಲ್ಲರು, ನಾಡಿದ್ದು ಡೆಪ್ಯುಟಿ ಕಮೀಷನ್ನರು, ಇನ್ನೊಂದು ದಿನ ರೆವಿನ್ಯೂ ಕಮಿ ಷನ್ನರು, ಹೀಗೆ ತಿರುಗಿಕೊಂಡು ಇರಬೇಕು. ಅದೇ ಗೌರವ ಎನ್ನುವ ಬುದ್ಧಿ ಅವನಿಗೆ ಬಂದಿತ್ತು. ಯಾರೂ ಅವನ ಆಸ್ತಿಯನ್ನು ಕೊಳ್ಳಲು ಮುಂದೆ ಬರಲಿಲ್ಲ. ಅದರಿಂದ ಅರಮನೆಗೇ ಮಾರಿಬಿಡಬೇಕೆಂದು ಹೇಳಿಕಳುಹಿಸಿದ್ದನು. ಆ ವಿಚಾರವನ್ನು ಗಂಡನಿಗೆ ತಿಳಿಸಿ ಇತ್ಯರ್ಥ ಮಾಡಿಕೊಂಡು ಹೋಗಲು ರಾಣಿಯು ತಾನೇ ಬಂದಿದ್ದಳು.

ನಾಯಕನು ನಾಷ್ಟಾ ಮಾಡಿ ಬಂದನು. ಸುದ್ದಿಯಿಲ್ಲದೆ ಬಂದಿರುವ ಹೆಂಡತಿಯನ್ನು ಕಂಡು "ಏನು ಎಲ್ಲಾ ಸರಿಯಾಗಿದೆತಾನೇ ?" ಎಂದು ಮೊದಲು ಗೃಹಕೃತ್ಯವನ್ನು ವಿಚಾರಿಸಿ ಎಲ್ಲವೂ ಭದ್ರವಾಗಿರುವುದನ್ನು ಅರಿತು, ಸಹಜವಾದ ಶೃಂಗಾರ ಚೇಷ್ಟೆಗಿಳಿದನು. "ಏನು ಬಿಟ್ಟಿರ ಲಾರದೆ ಬಂದುಬಿಟ್ಟರೇನೋ ಅಮ್ಮನವರು ?" ಎಂದು ಗಾಢಾಲಿಂಗನ ಮಾಡಿ ಚುಂಬಿಸಿದನು. ಇಬ್ಬರೂ ರತಿಮನ್ಮಥರಂತೆ, ತಮ್ಮ ಏಕಾಂತ ಗೃಹದತ್ತ ತೆರಳಿದರು.

ಅಷ್ಟುಹೊತ್ತು ಬಿಟ್ಟುಕೊಂಡು ಮಲ್ಲಿಯು ಬಂದು ಬಾಗಿಲಲ್ಲಿ ನಿಂತು ಕೆಕ್ಕರಿಸಿದಳು. ನಾಯಕನು ನಡಗೆಯ ಸದ್ದಿನಿಂದಲೇ ಅವ ಳೆಂಬುದನ್ನು ತಿಳಿದು, "ಇಷ್ಟವಿಲ್ಲದಿದ್ದವರು ಒಳಕ್ಕೆ ಬರಕೂಡದು" ಎಂದನು.

ರಾಣಿಯು, "ನೀನಾದರೂ ಬಂದು ಈ ಹುಲಿ ಕೈಯ್ಯಿಂದ ನನ್ನ ಬಿಡಿಸಿಕೋಬಾರದಾ ?" ಎಂದಳು.

ಮಲ್ಲಿಯು ನಗುನಗುತ್ತಾ "ಆ ಹುಲಿಬಾಯಿಗೆ ನನ್ನನ್ನು ದೂಡಿ ಬಿಟ್ಟಿರಲ್ಲಾ ನಾನು ಹೇಗೆ ನಿಮ್ಮನ್ನು ಬಿಡಿಸಿಕೊಳ್ಳಲಿ !" ಎಂದು ಒಳಗೆ ಬಂದಳು.

"ನೋಡವ್ವಾ, ಇವರ ರೀತಿ! ಇನ್ನೂ ನಾನು ಮನೆಒಳಕ್ಕೆ ಬರುತ್ತಿರುವಾಗಲೇ ಇಷ್ಟು ಅವಸರವಾ ? ನೀನಾದರೂ ಸಣ್ಣ ಹುಡುಗಿ. ನನಗೇನು ವಯಸ್ಸು ಕಮ್ಮಿಯಾಯಿತಾ ? ನನ್ನ ಹೀಗೆ ಇವರು ಗೋಳುಹುಯ್ದುಕೊಂಡರೆ ನಾನೇನು ಮಾಡಲಿ ?" ಎಂದು ಏನೋ ನಿಜವಾಗಿ ದೂರು ಹೇಳಿಕೊಳ್ಳುವಳಂತೆ ರಾಣಿಯು ದೂರಿಕೊಂಡಳು.

"ನೋಡು, ಮಲ್ಲಿ, ಇವಳು ಬೇಡ ಎನ್ನಲಿ, ಆಮೇಲೆ ನೋಡು, ಇವಳನ್ನು ಮುಟ್ಟಿದರೆ ನೀನಿಟ್ಟ ಆಣೆ. ಬೇಡ ಅನ್ನು ಮತ್ತೆ" ಅಂದನು.

ರಾಣಿಯು, "ಹೂಂ ಬೇಡ ಅನ್ನೋಕೆ ಏನೋ ಕೈಹಿಡಿದದ್ದು. ತಾಳೆ ಹೂವು ಆದರೂ ಗಂ ಅಂತದೆ. ಏನೋ ಒಂದು ಮುಳ್ಳುಗೀರಿದಾಗ ಅಯ್ಯೋ ಅನ್ನಿಸಿದಂಗೆ, ಆಯ್ತದೆ. ನಿಜ, ಹಾಗಂತ ತಾಳೇ ಹೂವ್ವೇ ಬೇಡ ಅನ್ನಿ. ಈ ಮಾತು ಅಂದರೆ ನನಗೇನು ಅಂತದೆ ಗೊತ್ತಾ ? ತಾಳೇ ಹೂವು ಸಿಗಿದು ದೇವರಿಗೆ ಮುಡಿಸೋ ಹಾಗೆ ಈ ಹುಲಿ ಹಲ್ಲು, ಉಗುರು ತೆಗೆದು ಆಟವಾಡಬೇಕು" ಎಂದು ಹುಸಿಮುನಿಸಿನಿಂದ ನುಡಿದಳು.

ನಾಯಕನು ಅವಳನ್ನು ಬರಸೆಳೆದು ತಬ್ಬಿಕೊಂಡು ಇನ್ನೊಮ್ಮೆ ನೋಯುವಹಾಗೆ ತೋಳುಕಚ್ಚಿ ಅವಳು 'ಅಯ್ಯಯ್ಯೋ' ಎನ್ನುತ್ತಿರಲು, "ತಮಗೇನು ಅಂತದೆಯೋ ಚಿಕ್ಕಮ್ಮನವರಿಗೆ ?" ಎಂದನು.

ಮಲ್ಲಿಯು ತುಂಟತನದ ಪರಮಾವಧಿಯ ನಗುವನ್ನು ನಗುತ್ತಾ ಆ ಇಬ್ಬರ ಮೊಕದ ನಡುವೆ ತನ್ನ ಮೊಕವನ್ನಿಟ್ಟು "ಈ ಹುಲೀನ ದೂರದಿಂದ ಕಂಡಾಗ ಹೆದರಿಕೆಯಾಗ್ತದೆ. ಹತ್ತಿರಕ್ಕೆ ಬಂದಾಗ ಮೈಮರೀತದೆ. ನಾನೇನ ಹೇಳಲಿ ?" ಎಂದಳು.

ನಾಯಕನು ಅವಳನ್ನು ಅನಾಮತ್ತಾಗಿ ಮಂಚದ ಮೇಲಕ್ಕೆಳೆದು ಕೊಂಡು ನಿರ್ದಯವಾಗಿ ಹಿಸುಕಿ ಚುಂಬಿಸುತ್ತಾ, " ಈ ತುಂಟಬಡ್ಡಿ. ಇದಕೇ ನನ್ನ ತಲೇಮೇಲೆ ಹತ್ತಿಕೊಂಡಿರೋದು " ಎಂದನು

ರಾಣಿಯು " ಪಾಪ, ನಂಜುಂಡೇಶ್ವರನಿಗೇ ತಪ್ಪಲಿಲ್ಲ. ಇನ್ನು ನಿಮಗೇನ ಹೇಳ್ಳೋ ?" ಎಂದು ಸೋಟೆ ತಿವಿದಳು.

ನಾಯಕನು ಹುಸಿಮುನಿಸಿಂದ " ಏನಂದೆ ?" ಎಂದು ಕಣ್ಣು ಬಿಟ್ಟನು.

ರಾಣಿಯು ಕೆನ್ನೆಗೆ ಕೆನ್ನೆ ಕೊಟ್ಟು, ಕುಂಕೀ ಆನೆಯು ಕಾಡಾನೆ ಯನ್ನು ಒತ್ತರಿಸುವಂತೆ ಒತ್ತರಿಸಿಕೊಂಡು " ಅದಾ ! ನಂಜುಂಡೇಶ್ವರನ ಜೊತೇಲಿರೋ ಅಮ್ಮನೋರು ಮದುವೆಯಾದೋರು. ಅವರಿರೋದು ನೆಲದ ಮೇಲೆ, ನಂಜುಂಡೇಶ್ವರನ ಗುಡಿ ಮೂಲೇಲಿ. ಅವರೊಲಿದ ಚಾಮುಂಡಮ್ಮ ಇರೋದು ಬೆಟ್ಟದ ಮೇಲೆ " ಎಂದಳು.

" ನೋಡಿದೆಯಾ ಮಲ್ಲಿ ನಿನ್ನ ಸೂಳೆಮಾಡಿದಳು ನಮ್ಮ ರಾಣಿ."

"ಬುದ್ಧಿ, ನಮ್ಮವ್ವ ನನ್ನ 'ಛೀ ನಿನ್ನ ಗಂಡನ ಸೂಳೆ ಅಂತಿದ್ದಳು.' ನಮ್ಮವ್ವನ ಮಾತು ನಿಜವಾಯಿತು. ಅಷ್ಟೇ ತಾನೇ ?"

"ಛೀ ನೀವಿಬ್ಬರೂ ನಾಚಿಕೆ ಕೆಟ್ಟೋರು–ನಾನು ಇನ್ನು ಇರೋಲ್ಲ ಎದ್ದಾದರೂ ಹೋಗ್ತೀನಿ."

" ಏನು ನಮ್ಮಿಬ್ಬರನ್ನೂ ಹೊತ್ತುಕೊಂಡು ?"

" ಎಲ್ಲಿಗೆ ಹೋದರೂ ನೀವಿಬ್ಬರೂ ಇರುತೀರೋ ? ನಾನು ನರಕಕ್ಕೆ ಹೋದರೋ ?"

" ಅಲ್ಲಿ ಗಂಡ ಇದ್ದ ಮೇಲೆ ಅದು ನರಕ ಆಗೋದಾದರೂ ಹೆಂಗೆ ?"

" ಹಂಗಾದರೆ ಎಲ್ಲಿ ಹೋದರೂ ಬರುತೀರಿ ಅನ್ನಿ."

" ತಪ್ಪದೆ "

" ಹಂಗಾದರೆ ನಾನು ಇಲ್ಲೇ ಇದ್ದುಬಿಡುತೀನಪ್ಪ."

" ಅದೀಗ ಸರಿ."

" ನೋಡು, ರಾಣಿ, ಈ ಕಲಕೇತಿ ಬಂದಳು : ನಾನು ಹೊಸದ,

ಹುಡುಕೋದೇ ತಪ್ಪಿಹೋಯಿತು. ಎಂಥಾ ಕೆಟ್ಟ ಹೆಣ್ಣು ನೋಡು."

"ಕಟ್ಟೇ ನೀರುಕಿತ್ತುಕೊಂಡು ಓಡೀತು ಅಂತಲೇ ಕಟ್ಟೆಗೊಂದು ಒತ್ತುಕಟ್ಟೆ ಕಟ್ಟಿದೋರ ಮಾತೇ ಇಲ್ಲವೇನೋ ?"

"ಯಾಕೋ ನಾವು ಇವೊತ್ತು ಗೆಲ್ಲೋಹಂಗಿಲ್ಲ. ಬಿಡು. ಅದೇನು, ನೀನು ಇಷ್ಟು ತರಾತುರಿ ಬಂದುದು ?"

"ನಿಮ್ಮನ್ನ ನೋಡೋಕೆ !"

"ಅದಾಯ್ತಲ್ಲ, ಮುಂದೆ ?"

ರಾಣಿಯು ಮಜ್ಜಿಗೆಹಳ್ಳಿಯಲ್ಲಿ ಮಾದೇಗೌಡನ ಹಾವಳಿ ಹೇಳಿ ಕೊನೆಗೆ ಅವನು ಆಸ್ತಿಮಾರಿ ಆ ಊರೇ ಬಿಟ್ಟು ಹೋಗುವುದಕ್ಕೆ ಸಿದ್ಧವಾಗಿರುವುದನ್ನು ಹೇಳಿದಳು. "ನೀವು ಹೂಂ ಅಂದರೆ ಆ ಆಸ್ತಿ ಮಾಡಿಕೊಳ್ಳೋದು."

"ಶಾನುಭೋಗರು ಏನು ಹೇಳಿದರು ?"

"ಅವರೇ ಬಂದು ಹೇಳಿದೋರು. ಕಟ್ಟೆಯ ಕಲ್ಲು ಕಟ್ಟೆಗೆ ಬಂದಂತಾಯಿತು. ಬುದ್ಧಿಯೋರು ಒಪ್ಪೋದೇ ಸರಿ. ಎಂದರು."

"ಮಾಡಿಬಿಡಿ. ಆಮೇಲೆ ?"

"ಆಮೇಲೆ ಆ ಪಂಚಮರನ್ನು ಸ್ಕೂಲಿಗೆ ಸೇರಿಸಬೇಕು ಅಂತ ಮೇಲಿನಿಂದ ಅಪ್ಪಣೆ ಬಂದದೆಯಂತೆ. ಉತ್ತಮರೆಲ್ಲಾ ಇದೆಲ್ಲಾದರೂ ಉಂಟೆ ಅಂತಿದ್ದಾರೆ."

"ಅದೆಲ್ಲ ನಡೆಯೋಲ್ಲ. ಸೋಸಲೇಲಿ ಮಠದೋರು ಸೋತು ಹೋದರು ಅಂದಮೇಲೆ ಮಿಕ್ಕವರೇನು ಮಾಡಿಯಾರು ?"

"ಪುರೋಹಿತರೂ ಜೋಯಿಸರೂ ಶಾನುಭೋಗರೂ ನಿಮ್ಮನ್ನು ನೋಡೋಕೆ ಬರುತಾರೆ."

"ಇಲ್ಲ ನಾನು ದಿವಾನರ ಹತ್ತಿರವೂ ಮಾತಾಡಿದೆ. ರೆಡ್ಡಿಯವರ ಮಾತು ಅವರಿಗೆ ಬಹಳ ಪಥ್ಯ. ನಿಮಗೆ ರೆಡ್ಡಿಯವರು ಗೊತ್ತಿಲ್ಲವೇನೋ? ರೆಡ್ಡಿಯವರು ನಮ್ಮ ನರಸಿಂಹಯ್ಯನ ಕಾಲೇಜ್ ಪ್ರಿನ್ಸಿಪಾಲರಾಗಿದ್ದರು. ಈಗ ವಿದ್ಯಾಭ್ಯಾಸದ ಇಲಾಖೆ ಮುಖಂಡರಾಗಿದ್ದಾರೆ. ಅವರು ವಿದ್ಯಾವಂತರು. ಇಂಗ್ಲೆಂಡಿಗೆ ಹೋಗಿ ಬಂದವರು. ಅವರು

ಹಿಂದಿನ ದಿವಾನರು ಹೇಳುತ್ತಿದ್ದ ಹಂಗೆ, ದೇಶವೆಲ್ಲ ವಿದ್ಯಾವಂತರಾಗ ಬೇಕು ಅನ್ನೋರು. ಈ ದಿವಾನರು ರೆಡ್ಡಿಯವರ ಮಾತು ಒಪ್ಪಿದ್ದಾರೆ. ಮಹಾರಾಜರು ಆಗಬಹುದು ಎಂದಿದ್ದಾರೆ. ಅವರು ಒಪ್ಪಿದ ಮೇಲೆ ಅದು ಸರಿಯಾಗಿ ಇರಬೇಕು. ಅದರಿಂದ ಅದು ಆಗಲೇಬೇಕು. ಉತ್ತಮರು ಬೇಕು ಅಂದರೆ ಬೇರೆ ಒಂದು ಶಾಲೆ ಕಟ್ಟಿಕೊಳ್ಳಲಿ. ನಾವೂ ಬೇಕಾದರೆ ಒಂದೆರಡು ಸಾವಿರ ಕೊಡೋಣ. ಆಯಿತು, ಇಲ್ಲಿ ನಡೆದದ್ದು ಎಲ್ಲಾ ಗೊತ್ತೋ ?"

"ಹೇಳಿ."

"ಒಂದು ಲಕ್ಷ ರೂಪಾಯಿ ಮಹಾರಾಜರಿಗೆ ಒಪ್ಪಿಸಿದ್ದಾಯಿತು, ಹಳ್ಳಿಯವರಿಗೆ ಸ್ಕಾಲರ್‌ಷಿಪ್ ಕೊಡಿ ಅಂತ. ನಿಮ್ಮಿಬ್ಬರ ಹೆಸರಲ್ಲಿ ಇರಲಿ ಅಂತ ನಾನಂದರೆ, ಈ ಪುಣ್ಯಾತ್ಮಗಿತ್ತಿ 'ದೊಡ್ಡಮ್ಮನೋರ ನೆರಳು ನಾನು : ನನ್ನ ಹೆಸರೇ ಕೂಡದು' ಅಂತಾಳೆ."

"ಅವಳಿಗೆ ಹಣ ಕೊಟ್ಟುಬಿಡಿ. ತನಗೆ ತೋರಿದ್ದು ಮಾಡಲಿ."

"ಹಂಗೂ ಸೈ. ಲೇ ಕಳ್ಳಬಡ್ಡೀ ! ನಾಳೆ ಖಜಾನೆಗೆ ನಿನ್ನ ಹೆಸರಿಗೆ ಎರಡು ಲಕ್ಷ ಜಮಾ ಆಗ್ತದೆ, ಏನಾದರೂ ಮಾಡು."

"ನಾನು ಈಗ ಏನೂ ಮಾಡುವುದಿಲ್ಲ."

"ಏಕೆ ?"

"ಇನ್ನು ಹತ್ತುವರ್ಷ ನಾನು ಬದುಕಿದ್ದರೆ ಆಮೇಲೆ ದಾನ ಧರ್ಮ."

"ಅದುವರೆಗೂ ?"

"ನಾನು ಯಾರದೋ ಪಾದ ಹಿಡಿದಿದ್ದೀನಿ ; ಅವರ ಪೂಜೆ ಯೊಂದೇ ನನ್ನ ಕೆಲಸ.?"

"ಆಮೇಲೆ ಏನುಮಾಡುತೀಯೆ ?"

"ಆಮೇಲೆ ಮನೆಬಾಗಿಲು ಬಿಟ್ಟು ಹೊರಟುಹೋಗುತ್ತೇನೆ."

"ಯಾಕೆ ?"

"ನನಗೆ ಗೊತ್ತಿಲ್ಲ. ಯಾರೋ ಬಂದು 'ಮಲ್ಲಿ, ಬಂದುಬಿಡು' ಅಂದಹಾಗಾಗುತ್ತದೆ. ಆ ಮಾತು ಕಿವಿಗೆ ಬಿದ್ದಾಗ ನನಗೆ ಏನೇನು

ಬೇಕು ಅಂತಿದ್ದೀನೋ ಅದರ ಮೇಲಿನ ಅಭಿಮಾನವೆಲ್ಲ ಕರಗಿ ಹೋಗುತ್ತದೆ. ಅದೊಂದೇ, ಆ ಬಾ ಬಾ ಅನ್ನುವ ಕರೆಯೊಂದೇ ನಿಲ್ಲುತ್ತದೆ. ನಾನು ಅದಕ್ಕೂ ಹೇಳಿದ್ದೀನಿ. ಬುದ್ಧಿಯವರಿಗೆ ಅರವತ್ತು ವರ್ಷದ ಶಾಂತಿಯಾಗುವವರೆಗೆ ಬರೋದಿಲ್ಲ ಅಂತ."

ಅವಳು ಆ ಮಾತನಾಡಿದಾಗ ನಾಯಕನ ತೋಳತೆಕ್ಕೆಯಲ್ಲಿದ್ದಳು. ಇಬ್ಬರ ಮೈಗಳೂ ಒಂದಕ್ಕೊಂದು ಗೋಂದು ಹಾಕಿ ಹಚ್ಚಿದಂತೆ ಹೊಂದಿಕೊಂಡಿದ್ದುವು. ಅವಳ ಉಬ್ಬಿದ, ಕೊಬ್ಬಿದ ಸ್ತನಮಂಡಲವು ನಾಯಕನ ಪಕ್ಕೆಯನ್ನು ತಿವಿಯುತ್ತಿತ್ತು. ಇತ್ತ ರಾಣಿಯು ನಾಯಕನ ಎದೆಯ ಮೇಲೆಮಲಗಿ ಕೆನ್ನೆಯ ಮೇಲೆ ಕೆನ್ನೆಯಿಟ್ಟು ಕೊಂಡು ಕೇಳುತ್ತಿದ್ದಳು. ಅಂತಹ ವಿಚಿತ್ರ ರಸಮಯ ಸಮಯದಲ್ಲೂ ಗಂಭೀರವಾಗಿ, ಆವೇಶವಿಲ್ಲದೆ, ಯಾವಾಗಲೋ ಕೇಳಿದ ಅ-ಶರೀರದ ವಾಕ್ಕುಗಳನ್ನು ಧ್ಯಾನಿಸುತ್ತ, ಸ್ತಿಮಿತವಾಗಿರುವ ತಾರೆಗಳು, ನೋಡಿ ದವರ ಮನಸ್ಸಿನಲ್ಲಿಯೂ ಅವಳಲ್ಲಿದ್ದ ಅಲೌಕಿಕ ಭಾವಗಳನ್ನು ತುಂಬುತ್ತಿರಲು, ಅವರಿಬ್ಬರೂ ಗಾಬರಿಯಾದರು. ಮಲ್ಲಿಯೂ ಆಗಲೇ ಎಲ್ಲಿಯೋ ಹೊರಟೇ ಹೋದಹಾಗೆ ಕನಸುಕಾಣುತ್ತಿದ್ದರೆ ಹೇಗೋ ಹಾಗೆ ಆಯಿತು. ನಾಯಕನ ಮನಸ್ಸಿನಲ್ಲಿದ್ದ ಮೋಹವೆಲ್ಲ ಮಾಯ ವಾಗಿಹೋದಂತೆ ಆಯಿತು. ಅವನಿಗೆ ಪರ್ವತಾಗ್ರದ ಮೇಲಿನಿಂದ ಕೆಳಕ್ಕೆ ಎಸೆದಂತೆ ಆಯಿತು.

ರಾಣಿಯು ಬೆಂಕಿಯ ಮಗ್ಗುಲಲ್ಲಿದ್ದಾಗ ಸೆಕೆಯನ್ನು ಅನುಭವಿಸು ವಂತೆ ನಾಯಕನ ಮನಸ್ಸಿನಲ್ಲಿ ಬಂದುದನ್ನೆಲ್ಲಾ ಅನುಭವಿಸಿದಳು. ರಾಣಿಯು ಸಾಮಾನ್ಯ ಸ್ತ್ರೀಯಲ್ಲ. ಉತ್ತಮವರ್ಗದ ನಾರೀಮಣಿ. ಸಾಹಿತ್ಯದಲ್ಲಿ ಅಂತಹ ನಾರೀಮಣಿಯನ್ನು ಎಲ್ಲೂ ಕಂಡಂತಿಲ್ಲ. ಹಿಂದೆ ಕಾಲಿದಾಸನ ಸ್ತ್ರೀ ಹೃದಯವಿಜ್ಞಾನವು ವಿಕ್ರಮೋರ್ವಶೀಯ ದಲ್ಲಿ ಔಶೀನರಿಯನ್ನು ಸೃಷ್ಟಿಸಿತು. ಮಾಲವಿಕಾಗ್ನಿಮಿತ್ರದಲ್ಲಿ ರಜೋಗುಣದಲ್ಲಿ ನಿಂತು ಗಂಡನು ತನ್ನ ಆಸ್ತಿ : ಅದರ ಮೇಲೆ ಮತ್ತೊಬ್ಬರಿಗೆ ಹಕ್ಕಿಲ್ಲ ಎಂಬ ಚಂಡಿಯೂ, ಅವಳಿಗಿಂತ ಇನ್ನಷ್ಟು ಉತ್ತಮವಾಗಿ ಗಂಡನು ಮತ್ತೊಬ್ಬಳನ್ನು ಮದುವೆಯಾದರೆ ಹೋಗಲಿ

ಏನು ಮಾಡುವುದು, ಎಂದೋ, ಅಥವಾ ತಾನು ಕೊಟ್ಟಿದ್ದ ವರವನ್ನು ಪಾಲಿಸಲೆಂದೋ, ಮಾಲವಿಕೆಯನ್ನು ರಾಜನುಹಿಷಿಯಾಗಿ ಒಪ್ಪಿಸಿ ಕೊಂಡ ಧಾರಿಣೀದೇವಿಯನ್ನು ಸೃಷ್ಟಿಸಿದ ಬುದ್ಧಿ, ಶಾಕುಂತಲದಲ್ಲಿ ಬಹುವಲ್ಲಭನಾದ ರಾಜನನ್ನು ಒಪ್ಪಿದ ಶಕುಂತಲೆಯನ್ನು ಸೃಷ್ಟಿಸಿತು. ಅನನ್ಯಭಾಜನಾದ ಪತಿಯನ್ನು ಪಡೆದ ಪಾರ್ವತಿಯನ್ನೂ ಏಕಪತ್ನಿ ಯಾದ ಯಕ್ಷಿಣಿಯನ್ನು ಸೃಷ್ಟಿಸಿದರೂ ತೃಪ್ತಿಯಾಗದ ಪ್ರತ್ಯುತ್ಪನ್ನಪ್ರಜ್ಞಾನವು ವಿಕ್ರಮೋರ್ವಶೀಯದಲ್ಲಿ ಔಶೀನರಿಯನ್ನು ಸೃಷ್ಟಿಸಿತು. ಅಷ್ಟೇ ಅಲ್ಲ. ಅವಳ ಬಾಯಿಂದ ಹೇಳಿಸಿತು : 'ನನ್ನ ಗಂಡನು ಕಾಮಿಸಿದವಳೊಡನೆಯೂ, ನನ್ನ ಗಂಡನನ್ನು ಕಾಮಿಸಿದವಳೊಡನೆಯೂ ಸೋದರೀ ಭಾವದಿಂದ ವರ್ತಿಸುವೆನು' ಎಂದು.

ನೀರು ಕದಡಿದಾಗ ಕೊಚ್ಚೆಯಾಗಿರುವಾಗ, ಅದನ್ನು ದೂರದಿಂದ ನೋಡಿದರೂ ಆ ಕೊಚ್ಚೆ ಮೈಗೆ ಹತ್ತಿದಂತಾಗುತ್ತದೆ. ಅದು ಕಾಲ ವಶದಿಂದ ತಿಳಿಯಾದರೆ, ಅದರಲ್ಲಿ ಆಕಾಶದ ಪ್ರತಿಬಿಂಬ ಕಾಣುತ್ತದೆ. ಆ ನೀರು ಆಳವಾಗಿ ಪ್ರಸನ್ನವಾಗಿದ್ದರೆ ಸೇವನೆಗೆ ಯೋಗ್ಯವಾಗುತ್ತದೆ. ಅದು ತಾನೇ ತಾನಾಗಿ ಅದರ ಶೈತ್ಯವು ಸುತ್ತಲೂ ಪ್ರಸರಿಸಿದರೆ, ಆ ನೀರು ಕಲ್ಲಾಗುತ್ತದೆ. ಅದರಲ್ಲಿಯೂ ಉತ್ತಮವಾಗಿ ದಿವ್ಯಭಾವವನ್ನು ಪಡೆದರೆ, ಅವರಲ್ಲಿ ಮಣಿಯಾಗುತ್ತದೆ. ನಾವು ನೀರು ಕಲ್ಲಾಗುವ ವರೆಗೂ ಬಲ್ಲೆವು. ಅಲ್ಲಿಂದಾಚೆಗೆ ಅದು ಮಣಿಯಾಗುವುದು ಎಂದು ಇತರರು ಹೇಳಿದರೂ ತಿಳಿಯಲಾರೆವು.

ಮನಸ್ಸಿನಿಂದ ಮಾನವನ ಯೋಗ್ಯತೆ. ಮನಸ್ಸು, ಚಿತ್ತ ಬುದ್ಧಿ ಗಳ ಅಧೀನ. ಬುದ್ಧಿಯಲ್ಲಿ ಸತ್ತ್ವ, ರಜಸ್ಸು, ತಮಸ್ಸುಗಳೆಂಬ ಪ್ರಕೃತಿಯು ನೇಯುವ ಚೌಕಟ್ಟು ಕಾಣುವುದು. ಭೋಗದಲ್ಲಿ ಬಹಳಾಸೆ ಯಿದ್ದು ದೇಹವು ಶಿಥಿಲವಾಗಿ ಭೋಗಕ್ಕೆ ಅಯೋಗ್ಯವಾದಾಗ ಇನ್ನೊಬ್ಬರ ಭೋಗವನ್ನು ನೋಡಿ ತಮ್ಮ ಚಪಲವನ್ನು ತೃಪ್ತಿಪಡಿಸಿಕೊಳ್ಳುವ ಭೋಗಿಗಳು ಮನಶ್ಶಾಸ್ತ್ರಕ್ಕೆ ಗೊತ್ತು. ಆ ಭೋಗವು ತಮಗಿಲ್ಲದಿದ್ದರೂ ತಮಗೆ ಬೇಕಾದವರಿಗೆ ಇರಲಿ ಎಂದು ಬಿಟ್ಟುಕೊಡುವ ತ್ಯಾಗಿ ಗಳೂ ಗೊತ್ತು. ಹಾಗೆಯೇ ಭೋಗದ ಬ್ಯಾಂಕುಗಳನ್ನು

ಅನುಭವಿಸುವ ಭೋಗಿಗಳೂ ಮನಶ್ಶಾಸ್ತ್ರಕ್ಕೆ ಗೊತ್ತು. ಆದರೆ, ತನಗೆ ಬೇಕಾದ ಪ್ರಿಯತಮನಿಗೆ, ಉತ್ತಮವಾದ ಮತ್ತೊಂದು ಹೆಣ್ಣು ತಂದು ಅದನ್ನು ತನಗೆ ಸಮಾನವಾಗಿ ಮಾಡಿಕೊಂಡು ಜೊತೆ ಜೊತೆ ಯಲ್ಲಿ ಸಮಸಮವಾಗಿ ಭೋಗಪಡುವ ಬುದ್ಧಿಗೆ ಅಸೂಯೆಯಿಲ್ಲದ ಭಾವಬೇಕು. ಅದಕ್ಕೇ ಕಾಲಿದಾಸನು ಶಕುಂತಲೆಗೆ ಪ್ರಿಯಂವದೆ, ಅನಸೂಯೆಯರನ್ನು ಸಖಿಯರನ್ನಾಗಿ ಸೃಷ್ಟಿಸಿದುದು. ಭೋಗದ ಅಮೃತದಲ್ಲಿ ಅಪ್ರಿಯಂವಾದಿತೆಯು ಹುಳಿಯಬಿಂದು. ಅಸೂಯೆಯು ವಿಷದಬಿಂದು. ಔಶೀನರಿಯಲ್ಲಿ ಎರಡೂ ತೋರಿತು: ಅದನ್ನು ತುಳಿದು ಪ್ರಿಯಪ್ರಸಾದನವೆಂಬ ಪ್ರೇತ್ರವನ್ನುಮಾಡಿ ದೋಷಗಳನ್ನು ದೋಷಾಕರನೆದುರಿಗೆ ತೊಳೆದುಕೊಂಡು ದೋಷ ಮುಕ್ತಳಾಗಿ, ಗಂಡನಿಗೆ ಸ್ವಾತಂತ್ರ್ಯವನ್ನು ಕೊಟ್ಟಳು. ಕಾಲಿದಾಸನೇಕೆ ಔಶೀನರಿ ಊರ್ವಶಿ ಇಬ್ಬರಿಗೂ ಪುರೂರವನಹೃದಯದಲ್ಲಿ ಸ್ಥಾನವನ್ನು ಕಲ್ಪಿಸಲಿಲ್ಲ? ಬಹುಶಃ ಮೂರನೆಯ ನಾಲ್ಕನೆಯ ಅಂಕಗಳ ನಡುವೆ ಇನ್ನೊಂದು ಅಂಕವನ್ನು ಬರೆದಿದ್ದರೆ, ಹಾರದಲ್ಲಿ ನಾಯಕಮಣಿಯ ಅತ್ತಿತ್ತ ಹಾಕುವ ಒತ್ತುಮಣಿ ಗಳಂತೆ, ಪುರೂರವನಿಗೆ ಅವರೀರ್ವರನ್ನೂ ಕಟ್ಟಿ ತೋರಿಸುತ್ತಿದ್ದನೋ ಏನೋ ?

ರಾಣಿ ನಾಯಕ ಇಬ್ಬರೂ ಮಲ್ಲಿಯಲ್ಲಿ ಇಟ್ಟಿದ್ದ ಅಭಿಮಾನ ಸಾಗರವು ಮಲ್ಲಿಯ ಮಾತುಗಳಿಂದ ಪ್ರಕ್ಷುಬ್ಧವಾಗಿಹೋಯಿತು. ಮೂವರು ಆಗಿದ್ದಹಾಗೆಯೇ ಅದೇ ಸ್ಥಿತಿಯಲ್ಲಿಯೇ ಇನ್ನೂ ಅಷ್ಟು ಹೊತ್ತು ಇದ್ದರು. ಒಂದೇ ಗಳಿಗೆಯಲ್ಲಿಯೇ ರಾಣಿ ನಾಯಕರಿಬ್ಬರಿಗೂ ಇವಳಿಗೆ ಏನಾದರೂ ಗ್ರಹವು ಹಿಡಿದಿದೆಯೋ ಎನ್ನಿಸಿತು. ಬಹುವಾಗಿ ಆಯಾಸಪಟ್ಟುಕೊಂಡು ಬಂದವರು ವಿಶ್ರಾಂತಿಗೆಂದು ಹಾಸುಗೆಯ ಮೇಲೆ ಬಿದ್ದುಕೊಳ್ಳಬೇಕೆಂದು ಹೋದಾಗ ಅದರ ಮೇಲೆ ಮಂಡರ ಗಪ್ಪೆಯನ್ನು ಕಂಡಹಾಗೆ ಆಯಿತು. ಅವರ ಮನೋಭಾವಗಳು, ನೀರು ನೀರು ಎಂದು ನಖಶಿಖಾಂತವಾಗಿ ಮೈಯೆಲ್ಲವೂ ಬಾಯಿ ಬಾಯಿ ಬಿಡುತ್ತಿರುವಾಗ ಎದುರಿಗೆ ನದಿಯು ಸಿಕ್ಕಿ ಅದರಲ್ಲಿ ಧುಡುಮ್ಮನೆ ಧುಮುಕ ಬೇಕೆಂದು ಸಿದ್ಧವಾದಾಗ ದೊಡ್ಡ ಮೊಸಳೆಯು ಕಾಣಿಸಿದಂತಾಯಿತು.

೩೯

೧-೮-೧೯೨೦.

'ತಿಲಕರು ಸ್ವರ್ಗ ವಾಸಿಗಳಾದರು. ಚೌಪಾತಿಯ ಸಮುದ್ರ ತೀರದಲ್ಲಿ ಅವರ ದೇಹಕ್ಕೆ ಸಂಸ್ಕಾರವಾಗಬೇಕೆಂದು ಬೊಂಬಾಯಿಯ ಪುರಜನರು ಸಂಕಲ್ಪಿಸಿದರು. ಸರಕಾರ ಒಪ್ಪಲಿಲ್ಲ. ಜನ ಪ್ರತಿಭಟಿಸಿತು. ಸರಕಾರ ತನ್ನ ಭದ್ರ ಮುಷ್ಟಿಯನ್ನು ಪ್ರದರ್ಶಿಸಲು ರಿಸರ್ವ್ ಪೋಲೀಸ್, ಬ್ರಿಟಿಷ್ ಸೋಲ್ಜರಿ, ಎರಡನ್ನೂ ಕಳುಹಿಸಿತು. ಗಾಂಧಿಯವರು ಪ್ರತಿಭಟಿಸಿದ ಜನಸ್ತೋಮದ ನಾಯಕರಾಗಿ ತಿಲಕರ ದೇಹವನ್ನು ತೆಗೆದುಕೊಂಡು ಹೊರಟರು. ಸರಕಾರಕ್ಕೆ ಏನೋ ಎಂತೋ ಬುದ್ಧಿ ತಿಳಿಯಾಗಿ ಅವಿವೇಕವು ಏನೋ ಆಗದೆ, ಗಾಂಧಿಯವರಿಗೆ ಹಾದಿ ಬಿಟ್ಟುಕೊಟ್ಟಿತು.'

ಪೇಪರಿನಲ್ಲಿ ಈ ಸುದ್ದಿಯನ್ನು ಓದಿದಾಗ ನಾಯಕನ ಮನೆಯಲ್ಲಿ ಸಿಡಿಲು ಬಿದ್ದಂತಾಯಿತು. ಮಲ್ಲಿಯು ಏಕೆ ಏನು ಎಂಬುದನ್ನು ಅರಿಯದೆ ತನ್ನದೇನೋ ಗಂಟು ಹೋದಂತೆ ಅತ್ತಳು. ತಾವು ಯಾತ್ರೆ ಹೋಗಿದ್ದಾಗ ಪೂನಾದಲ್ಲಿ ಆ ಮಹಾರಾಷ್ಟ್ರಸಿಂಹದ ದರ್ಶನಕ್ಕೆ ಹೋದಾಗ, ಅವರ ಮನೆಯಲ್ಲಿ ಅವರು ಪಾರಾಯಣ ಮಾಡುತ್ತಿದ್ದುದು ಜ್ಞಾಪಕಕ್ಕೆ ಬಂತು : ಆ ಕೇಸರಿ ಪ್ರೆಸ್, ಕೇಸರಿ ಎಂದರೆ ಮಹಾರಾಷ್ಟ್ರರು ಪಡುವ ಅಭಿಮಾನ, ಎಲ್ಲವೂ ನೆನೆಪಾಗಿ ಅವಳಿಗೆ ದುಃಖವಿಮ್ಮಡಿಸಿತು. ರಾಣಿಯು 'ಆತನೊಬ್ಬ ಮಹಾಪುರುಷ'. ಆತನ ಮೃತಿಯಿಂದ ರಾಷ್ಟ್ರಕ್ಕೆ ವಿಘಾತವಾಯಿತು. ಎಂದು ಶೋಕಿಸಿದಳು. ನಾಯಕನಿಗೆ ಏನಾದರೂ ಮಾಡಬೇಕು: ಸುಮ್ಮನಿರುವ ಸಮಯವಲ್ಲ ಎನ್ನಿಸಿತು. ಕಾರು ಹಾಕಿಕೊಂಡು ನರಸಿಂಹಯ್ಯನನ್ನು ಹುಡುಕಿಕೊಂಡು ಹೋದನು.

ನರಸಿಂಹಯ್ಯನು ತಾತಯ್ಯನವರ ಕಚೇರಿಯಲ್ಲಿದ್ದನು. ನಾಯಕನು ಬಂದುದನ್ನು ಕೇಳಿ ತಾತಯ್ಯನವರು 'ಬನ್ನಿ ಬನ್ನಿ' ಎಂದರು.

ಅವರ ಕಣ್ಣೂ ಅಳುವಿನಿಂದ ಊದಿಕೊಂಡಿತ್ತು. ಅವರನ್ನು ನೋಡಿ ನಾಯಕನಿಗೂ ಕಣ್ಣಲ್ಲಿ ನೀರೂರಿತು: ತಾತಯ್ಯನವರು ಒರಗುದಿಂಬು ಒರಗಿಕೊಂಡು ಕಂಬಳಿಯನ್ನು ಕಾಲುಮೇಲೆ ಎಳೆದುಕೊಂಡು ಕೂತಿದ್ದರು. ಅಲ್ಲಿ ಒಳಕ್ಕೆ ಹೋಗುತ್ತಿದ್ದ ಹಾಗೆಯೇ ಏನೋ ಶೂನ್ಯತೆಯು ಬಂದು ಆವರಿಸಿದಂತಾಗುತ್ತಿತ್ತು.

ನಾಯಕನು ಆಗಮನದಿಂದ ಕೊಂಚ ತಡೆದಿದ್ದ ಮಾತು ಮುಂದು ವರಿಯಿತು: ತಾತಯ್ಯನವರು ಹೇಳಿದರು:

"ತಿಲಕರು ಸತ್ತುದು ದೇಶದ ದುರದೃಷ್ಟ. ನಿಷ್ಠನಾಗಿ ವಿದ್ವಾಂಸನಾಗಿದ್ದ ಮಹಾಪುರುಷನು ಹೋಗಿ ಇಂದು ವೈದಿಕ ಸಂಸ್ಕೃತಿಯೇ ಅಂತರ್ಧಾನವಾಯಿತು. ಇನ್ನು ಉಳಿದವರಲ್ಲಿ ಬೆಸೆಂಟ್ ಒಬ್ಬಳು. ಆಕೆ ಜಗದ್ಗುರು ತಯಾರಿಸುವುದರಲ್ಲಿ ಕುಳಿತಿದ್ದಾಳೆ. ಆಕೆಗೆ ಇಂಡಿಯದ ಮೇಲಿನ ಅಭಿಮಾನಕ್ಕಿಂತ ಇಂಟರ್ ನ್ಯಾಷನಲ್ ಮಠದ ಕಡೆ ಹೆಚ್ಚು ಅಭಿಮಾನ. ಅರವಿಂದರು ಬಾಯಿ ಮುಚ್ಚಿಕೊಂಡು ಪಾಂಡಿಚೇರಿ ಸೇರಿದ್ದಾರೆ. ಮಿಕ್ಕವರೆಲ್ಲ ಆಯಾ ಪ್ರಾವಿನ್ಸ್‌ನವರೇ ಹೊರತು ಆಲ್ ಇಂಡಿಯದವರಲ್ಲ. ನೋಡಿದರೆ, ಸತ್ಯಾಗ್ರಹದ ಕೀರ್ತಿ ಗಾಂಧಿಯನ್ನು ಮುಂದೂಡಬಹುದು. ಆತನು ಚಂಪಾರಣ್ಯದಲ್ಲಿ ಗೆದ್ದಿದ್ದಾನೆ. ಆತನಿಗೆ ಗ್ರಹಬಲ ಚೆನ್ನಾಗಿರುವ ಹಾಗಿದೆ. ಹಿಂದೂ ಮುಸಲ್ಮಾನ ಎಂಬ ಭೇದವಿಲ್ಲದೆ ಹೊಡೆದಾಡಿದನೆಂದು ಉತ್ತರ ಭಾರತ ಒಪ್ಪುತ್ತದೆ: ಬ್ರಾಹ್ಮಣೇತರನೆಂದು ದಕ್ಷಿಣ ಭಾರತ ಒಪ್ಪುತ್ತದೆ. ಆದರೇನು? ಆಗಲೆ ಬ್ರಿಟಿಷ್ ಸರಕಾರ ಡೈಯಾರ್ಕಿ ತಂದಿದೆ. ದೇಶಾಭಿಮಾನಿಗಳೆಲ್ಲ ಗಾಂಧಿಯವರ ಮಾತಿನಂತೆ ಸತ್ಯಾಗ್ರಹ, ಅಸಹಕಾರ, ಎಂದು ಕೈಕಟ್ಟಿಕೊಂಡು ಕುಳಿತರೆ, ಸ್ವಾರ್ಥಿಗಳ ಗುಂಪನ್ನು ಹಿಡಿದು ತಮ್ಮ ಕಡೆ ಮಾಡಿಕೊಂಡು, ಅವರನ್ನು ಮಂತ್ರಿಗಳನ್ನು ಮಾಡಿ, ಸರಕಾರ ಬೊಂಬೆಯಾಟ ಆಡುತ್ತದೆ."

"ನಮ್ಮ ನಾಯಕರಂಥವರು ಮಂತ್ರಿಗಳಾದರೋ ಸಾರ್!?"

"ನಿಮ್ಮ ನಾಯಕರಂಥವರು ಅವರಿಗೆ ಬೇಕಿಲ್ಲ. ಇವರಂಥಾವರು ಮಂತ್ರಿಗಳಾದರೆ ಮೂರು ದಿನಕ್ಕೆ ಬ್ರಿಟಿಷರು ಇಂಡಿಯ ಬಿಟ್ಟು

ಪೇರಿ ಹೊಡಿಯಬೇಕಾಗುತ್ತದೆ. ಅವರಿಗೆ ಬೇಕಾದ್ದು ಸ್ವಾಭಿಮಾನದ ಜನ ಅಲ್ಲ: ದೇಶಾಭಿಮಾನದ ಜನ ಮೊದಲೇ ಅಲ್ಲ. ಅವರಿಗೆ ಬೇಕಾದ್ದು, ತಾವು ಹೇಳಿದ ಹಾಗೆ ಕುಣಿಯೋ ಸಣ್ಣ ಜನ."

"ಹಾಗಾದರೆ ಮುಂದಿನ ಗತಿಯೇನು ?"

"ಮುಂದಿನ ಗತಿ ಗೊತ್ತೇಇದೆ. ಸಣ್ಣ ಜನ ತಾನು ಮೆರೆಯುವಾಗ ಸರಕಾರದ ಶಕ್ತಿಯನ್ನು ದುರುಪಯೋಗ ಮಾಡುತ್ತದೆ. ಅದರಿಂದ ಅಸಮಾಧಾನ ಪಟ್ಟ ಜನ ಎದುರುಬೀಳುತ್ತದೆ. ಬ್ರಿಟಿಷ್ ಸರಕಾರದಲ್ಲಿ ಜನರಲ್ ಡೈಯರ್‌ಗಳಿಗೇನೂ ಕಡಿಮೆಯಿಲ್ಲ. ಏನಾದರೂ ಬ್ರಿಟಿಷರು ಇಲ್ಲಿಂದ ದೂರದಲ್ಲಿ ಇದ್ದಾರೆಯಾಗಿ ಏಟು ತಿನ್ನುವುದು ನಾವು. ದೈವವಶಾತ್ ಇಂಗ್ಲೆಂಡಿಗೆ ಏಟು ಬಿದ್ದು, ಬ್ರಿಟನ್ನರ ದೃಢಮುಷ್ಟಿ ಸಡಲಿದರೆ ಭಾರತದ ಭಾಗ್ಯ ಫಲಿಸುವುದು."

"ಅದುವರೆಗೂ ?"

"ಗಾಂಧಿಯವರ ದಕ್ಷಿಣ ಆಫ್ರಿಕದ ಹೋರಾಟ ಇಲ್ಲಿ ಇನ್ನೂ ವಿಸ್ತಾರವಾಗಿ ನಡೆಯುತ್ತದೆ- ಶತ್ರುವಿನ ಮನಸ್ಸು ಕರಗಿಸಿ ಗೆಲ್ಲಬೇಕೆಂಬ ಅವರ ಮತ ಜೈನರ ಅಹಿಂಸೆಯ ಅಪ್ಲಿಕೇಷನ್ – ಕ್ರಿಶ್ಚಿಯನ್ನರ ಗುರು ಹೇಳಿರುವ ಮಾತು ಆತ ಗೆಲ್ಲಲಿ ಸೋಲಲಿ ಇನ್ನೊಂದು ಹೊಸ ಯುಗ ಆರಂಭಿಸುತ್ತದೆ."

"ಅದೇನು ಗುರುಗಳೇ ! ಹೊಸ ಯುಗ ಅನ್ನುತ್ತೀರಿ ?"

"ಹೋಗೋ ಫೂಲ್, ನಿನಗೆ ಮಾತು ಆಡುವುದಕ್ಕೆ ಬರದು. ಕೇಳುವುದಕ್ಕೆ ಮೊದಲೇ ಬರದು. ಮಹಾಯುದ್ಧಗಳು ಒಂದೊಂದು ನಡೆದರೆ ಒಂದೊಂದು ಹೊಸ ಯುಗ ಆರಂಭವಾಗುತ್ತದೆ. ಈಗ. ನೋಡು ಗಂಡಿನ ಯುಗಮುಗಿಯಿತು. ಇನ್ನು ಹೆಣ್ಣಿನಯುಗ ಜಗತ್ತಿನಲ್ಲಿ ನೋಡು, ನಮ್ಮ ದೇಶ ಎಂಬ, ಅಭಿಮಾನ, ನಮ್ಮ ಹಣವಾಗಿರಬೇಕೆಂಬ ಸಿದ್ಧಾಂತ ಮಾತ್ರ ಭಾಷೆಗಳ ಮಹತ್ವ. ಇವೆಲ್ಲ ಏನು ? ಭೂಮಿ ಹೆಣ್ಣು, ಲಕ್ಷ್ಮಿ ಹೆಣ್ಣು, ವಾಣಿ ಹೆಣ್ಣು, ನನಗೆ ಇನ್ನೂಒಂದು ಸಂಶಯ. ಈ ಮಾತೃಭಾಷೆಯ ಮೇಲಿನ ವ್ಯಾಮೋಹ ಕೂಡ, ಇಂಪೀರಿಯಲ್ ಡಿಸೈರ್ ಅಂದರೆ ಬ್ರಿಟಿಷರ ಕೈವಾಡವೋ

ಅಂತ ! ಆದರೆ, ಇಂಡಿಯದಲ್ಲಿ ಇದು ಬೇಕು. ಹಳ್ಳಿಹಳ್ಳಿಗೂ ಸ್ವಾತಂತ್ರ್ಯದ ಸಂದೇಶ ಒಯ್ಯುವುದು ಇಂಗ್ಲಿಷಿಗೆ ಸಾಧ್ಯವಿಲ್ಲ. ಭಾರತವು ಗೆಲ್ಲಬೇಕಾದರೆ, ಮಾಸ್ ಮೂವ್‌ಮೆಂಟ್ ಬೇಕು. ಅದಾಗಲು ಎಚ್ಚರವಾಗಬೇಕು. ಅದರಿಂದಲೇ ಈ ಮಾತೃ ಭಾಷೆ ಬೆಳೆಯಬೇಕು. ಯುದ್ಧಕ್ಕೆ ಮುಂಚೆ ಪೇಪರ್ ಓದುವವರು ಸಾವಿರಕ್ಕೆ ಒಬ್ಬರು ಇರಲಿಲ್ಲ. ಈಗ ನಾಲ್ಕೈದು ಆಗಿದ್ದಾರೆ. ಬಹುಶಃ ಇನ್ನೊಂದು ಯುದ್ಧ ಇದಕ್ಕಿಂತ ಭಾರಿಯಾದ ಯುದ್ಧ ಬಂದೇ ಭಾರತದ ಸ್ವಾತಂತ್ರ್ಯ ಬರುವುದೋ ಏನೋ ?"

ಒಂದುಗಳಿಗೆ ಯಾರೂ ಮಾತಾಡಲಿಲ್ಲ. ಮತ್ತೆ ತಾತಯ್ಯನವರೇ ಮಾತನಾಡಿ ಮೌನವನ್ನು ಒಡೆದರು : "ಆಗಲಿ. ಬ್ರೌನಿಂಗ್ ಹೇಳಿದ ಹಾಗೆ, 'ಜಗತ್ತಿನಲ್ಲಿ ಎಲ್ಲಾ ಸರಿಯಾಗಿದೆ'. ಆದರೆ ಕೆಟ್ಟಿರುವುದು ನಮ್ಮ ಬುದ್ಧಿ. ಆಗುವುದೆಲ್ಲಾ ಒಳಿತೇ ಆಯಿತು ಎಂದು ಮಾನವ ಸುಮ್ಮನಿರಲಾರ."

## ೪೦

ತಿಲಕರ ಜಯಂತಿಯದಿನ ಹುಡುಗರು ತಿಲಕರ ಪಟ ಮೆರವಣಿಗೆ ಮಾಡಬೇಕೆಂದಿದ್ದಾರೆ. ಅದಕ್ಕೆ ಎಲ್ಲಾ ಸಿದ್ಧತೆಗಳೂ ನಡೆದಿದೆ.

"ತಿಲಕರ ಪಟವೊಂದೇ ಸಾಕೇನೋ ?" ಒಬ್ಬ ಕೇಳಿದ.

"ಉಂಟೇ ? ಇಲ್ಲಿಂದ ಹತ್ತು ಹೆಜ್ಜೆ ಹೋಗುವುದರೊಳಗಾಗಿ ಪೋಲೀಸಿನವರು ಬಂದು ನಮ್ಮನ್ನು ರಾಜದ್ರೋಹಿಗಳು ಎಂದು ಹಿಡಿದುಹಾಕಿಬಿಡುತ್ತಾರೆ."

"ಓ ಬಿಟ್ಟೆ ! ಹಾಗೇನಾದರೂ ಆದರೆ, ನಮಗೆ ಎರಡು ಮದ್ದಾನೆಗಳಿವೆ ಹೋರಾಡುವುದಕ್ಕೆ."

"ಯಾರಪ್ಪಾ ! ಕಾಂಗ್ರೆಸ್ ಅನ್ನುವುದಕ್ಕೆ ಮೈಸೂರಿನಲ್ಲಿ ಇನ್ನು

ಕಾಂಗ್ರೆಸ್ ಬಂದಿಲ್ಲ. ಬೆಂಗಳೂರಿನಲ್ಲಿ ಹುಟ್ಟಿದ ಕಾಂಗ್ರೆಸ್ ಕೆಂಪಾಂಬುಧಿಯಲ್ಲಿ ಹತ್ತು ಸಾವಿರ ಜನದ ಕೈಲಿ ತಿಲಕರಿಗೆ ಧರ್ಮೋದಕ ಕೊಡಿಸಿತು. ತಾನೂ ಧರ್ಮೋದಕ ತೆಗೆದುಕೊಂಡಿತು. ಇನ್ನು ಯಾವುದು ?"

" ಅಲ್ಲಯ್ಯಾ, ನಮ್ಮಲ್ಲಿ ಹತ್ತು ಜನಕ್ಕಾಗಿ ಹೋರಾಡುವ ಸಂಘಗಳು ಯಾವವೂ ಇಲ್ಲ. ಆದರೆ, ಅದೃಷ್ಟ ಇಬ್ಬರು ಗಂಡುಗಳು ಇದ್ದಾರೆ."

"ಒಂದು ತಾತಯ್ಯ, ಇನ್ನೊಂದು ರಾವ್‌ಬಹದ್ದೂರ್ರೋ ?"

"ಮತ್ತೆಯಾರು ? ಹೌದು. ಇನ್ನೊಂದು ಗೊತ್ತೇನು ? ಮಿಲ್ಲರ್ ಕಮಿಟಿ ರಿಪೋರ್ಟ್ ಬಂತಲ್ಲಾ ! ಆಗಲೂ ಆತ ಇದು ಬೇಡ ಅಂದನಂತೆ. ಚಾಕರಿ ಅಂದರೆ ಕೂಲಿ. ಕೂಲಿ ಮಾಡೋಕೆ ಜಾತಿ ಏನು ಎಂದನಂತೆ. ಆದರೆ ಆತನಮಾತು ನಡೆಯಲಿಲ್ಲವಂತೆ. ಆಗಿನಿಂದ ಆತ ಹಿಂದೆ ಹಿಂದೆ ಇದ್ದಾನೆ ಅಂತಾರೆ."

"ಡಯಾರ್ಕಿ ಬಂತು ಸಜ್ಜನರೆಲ್ಲ ಹಿಂದೆ ಬಿದ್ದರು. ನೋಡು. ಕಾಂಗ್ರೆಸ್ಸಿನವರಂತೂ ಸರಕಾರಕ್ಕೆ ವಿರುದ್ಧ. ಲಿಬರಲ್ಸ್‌ನಾದರೂ ಮಾಡರೇಟ್ಸನಾದರೂ ಮಂತ್ರಿಗಳನ್ನು ಮಾಡಬಾರದಾಗಿತ್ತೇ ? ಎಲ್ಲಾ ಬಿಟ್ಟು, ಔಟ್ ಅಂಡ್ ಔಟ್ ಕಮ್ಯೂನಲಿಸ್ಟನೇ ಮಂತ್ರಿಗಳನ್ನು ಮಾಡಬೇಕಾಗಿತ್ತೇ ?"

"ಬಿಡೋ ಹುಚ್ಚ. ಇವೆಲ್ಲ ಡಿವೈಡ್ ಎಂಡ್ ರೂಲ್ ಪಾಲಿಸಿಯ ಪ್ರಭಾವ."

"ಅದೆಲ್ಲ ಇರಲಿ. ಸಧ್ಯದ ಕೆಲಸ ಹೇಳಯ್ಯ !"

"ನಾವು ಬರಿಯ ತಿಲಕರ ಫೋಟೋ ತೆಗೆದುಕೊಂಡು ಹೋದರೆ ಆಗುವುದಿಲ್ಲ. ಮಹಾರಾಜರ ಫೋಟೋನೂ ತೆಗೆದುಕೊಂಡು ಹೋಗಬೇಕು."

"ಅಷ್ಟೇ ಅಲ್ಲ ಸಾರ್. ಬೆಂಗಳೂರು ಹುಡುಗರು ಗಾಂಧಿಯವರ ಫೋಟೋನೂ ತೆಗೆದುಕೊಂಡು ಹೋಗುವರಂತೆ. ನಾವೂ ಹಾಗೇ ಮಾಡೋಣ."

"ಸರಿ, ಸರಿ. ಒಂದು ಸತ್ತವರಿಗೆ ಭಕ್ತಿ. ಇನ್ನೊಂದು ಮೈಸೂರಿನ ರಾಜಭಕ್ತ: ಮತ್ತೊಂದು ಮುಂದಿನ ಇಂಡಿಯದ ಭಕ್ತಿ."

"ಆಯಿತು ಒಂದು ಫೋಟೋಗೆ ನಮ್ಮಲ್ಲಿ ದುಡ್ಡಿಲ್ಲ. ಇನ್ನು ಮೂರು ಫೋಟೋ ಎಲ್ಲಿಂದ ತರುವುದು?"

"ಒಂದು ಜಾಗಾ ಇದೆ."

"ನಾಯಕರ ಚಿಕ್ಕ ಹೆಂಡತಿ ಮಲ್ಲಮ್ಮಣ್ಣಿ ಇದ್ದಾರಲ್ಲ. ಅವರು ಈಚೆಗೆ ಸಾರ್ವಜನಿಕ ಚಳುವಳಿಯೆಂದು ಯಾರು ಹೋದರೂ ಇಲ್ಲ ವೆನ್ನುವುದಿಲ್ಲ. ಅದರಲ್ಲೂ ತಾತಯ್ಯನವರು ಹೇಳಿದರು ಎಂದರೆ ಕೈ ತುಂಬಾ ಕೊಡುತ್ತಾರೆ."

"ತಾತಯ್ಯ ಊರಲ್ಲಿಯೇ ಇಲ್ಲವಲ್ಲ?"

"ಅದಕ್ಕೇನು? ತಾತಯ್ಯನವರು ಬರುತ್ತಾರೆಂದು ಇದುವರೆಗೂ ಕಾದೆವು. ಅವರು ಬರಲಿಲ್ಲ. ನಾವೇ ಬಂದಿದ್ದೇವೆ. ಅನ್ನೋಣ. ಅದೃಷ್ಟವಿದ್ದಂತೆ ಆಗಲಿ."

"ಅದೀಗ ಸೈ!"

## ೪೧

ಮಲ್ಲಿಯು ನಡುಮನೆಯಿಂದ ಕಿರುಮನೆ: ಕಿರುಮನೆಯಿಂದ ನಡುಮನೆಗೆ ಅಲೆಯುತ್ತಿದ್ದಾಳೆ. ಕಾತರವಾಗಿ ಏನೋ ನಿರೀಕ್ಷೆಯಲ್ಲಿ ಇರುವಂತಿದೆ. ಗಳಿಗೆ ಗಳಿಗೆಗೂ ಬಾಗಿಲಿಗೆ ಬಂದು ನೋಡು ತ್ತಿದ್ದಾಳೆ. ಕ್ಯಾಲೆಂಡರಿನಲ್ಲಿ ನಾಲ್ಕನೆಯ ತಾರೀಖು: ಗಡಿಯಾರದಲ್ಲಿ ಹತ್ತು ಗಂಟೆ.

ನಡುಮನೆಯ ನಡುವೆ ಇದ್ದ ಟೇಬಲಿನ ಮೇಲೆ ಇದ್ದ ಮದರಾಸ್ ಮೆಯಿಲ್ ತೆಗೆದು ನೋಡುತ್ತಾಳೆ. ಅಲ್ಲಿ ಚೆನ್ನಾಗಿ ಬರೆದಿದೆ: 'ಆಗಸ್ಟ್ ೧ ಮೆರವಣಿಗೆಯಲ್ಲಿ ನಡೆದ ಗದ್ದಲದ ಸಂಬಂಧವಾಗಿ ಅನೇಕ

ವಿದ್ಯಾರ್ಥಿಗಳನ್ನು ಬಂಧಿಸಬೇಕಾಗಿದೆಯೆಂದೂ ಅದಕ್ಕಾಗಿ ಐಡೆಂಟಿಫಿ-ಕೇಷರ್ ಪೆರೇಡ್ ನಡೆಸಬೇಕೆಂದು ಕಾಲೇಜಿನ ಪ್ರಿನ್ಸಿಪಾಲರು ಮಿ|| ಎನ್. ಎಸ್. ಸುಬ್ಬರಾಯರನ್ನು ಪ್ರಾರ್ಥಿಸಲಾಯಿತು. ಆ ಪ್ರಾರ್ಥನೆಯನ್ನು ತಂದಿದ್ದ ಅಧಿಕಾರಿಯನ್ನು ಮಿ|| ರಾಯರು ಧಿಕ್ಕರಿಸಿದರು. ಯೂನಿವರ್ಸಿಟಿಯ ವಿದ್ಯಾರ್ಥಿಗಳನ್ನು ಯೂನಿವರ್ಸಿಟಿಯ ಅಪ್ಪಣೆ ಇಲ್ಲದೆ ಯಾರೂ ಮುಟ್ಟಕೂಡದು ಎಂದು ಗದರಿಸಿದರು. ವಿದ್ಯಾರ್ಥಿ-ಗಳೆಲ್ಲ ಮಿ|| ರಾಯರನ್ನು ದೇವರು ಎನ್ನುವಷ್ಟು ಗೌರವಿಸುತ್ತಿದ್ದಾರೆ. ಈ ಸಂಬಂಧವಾಗಿ ವಿದ್ಯಾರ್ಥಿವೃಂದದ ಆಚಿನ ಕೆಲವರನ್ನು ಬಂಧಿಸುವಂತಿದೆ.'

ಪತ್ರಿಕೆಯು ಮೊಗುಂ ಆಗಿ ಹೇಳಿರುವುದನ್ನು ಮೈಸೂರು ಸ್ಪಷ್ಟವಾಗಿ ಹೇಳುತ್ತಿದೆ. ವಿದ್ಯಾರ್ಥಿವೃಂದದ ಆಚಿನ ಕೆಲವರು ಎನ್ನುವುದು ನರಸಿಂಹಯ್ಯನನ್ನು. ವಿದ್ಯಾರ್ಥಿಗಳ ಶಾಂತಿಯ ಮೆರವಣಿಗೆಯನ್ನು ಮುರಿದ ಅಧಿಕಾರಿಗಳನ್ನು ಸುಬ್ಬರಾಯನಕೆರೆಯ ಮೈದಾನದಲ್ಲಿ ಧಿಕ್ಕರಿಸಿ ಮಾತನಾಡಿದ ನರಸಿಂಹಯ್ಯನೇ ಆ ಕೆಲವರು. ಆ ಸುದ್ದಿ ಕೇಳಿ ಮಲ್ಲಿ ಕಂಗಾಲಾದಹಾಗೆ ಆಗಿದ್ದಾಳೆ. ನಾಯಕನಿಗೆ ಮುದ್ದಾಂ ಸುದ್ದಿ ಕಳುಹಿಸಿದ್ದಾಳೆ. ಆತನೂ ಈ ವೇಳೆಗೆ ಬರಬೇಕಾಗಿತ್ತು ಬಂದಿಲ್ಲ.

ಹತ್ತೂ ಕಾಲು ಆಯಿತು. ಇನ್ನೂ ಬಂದಿಲ್ಲ. 'ತಾನೇ ಟ್ಯಾಕ್ಸಿ ಮಾಡಿಕೊಂಡು ಹೋಗಿದ್ದರೆ ಆಗಿತ್ತಲ್ಲಾ!' ಎಂದು ಅವಳಿಗೆ ಯೋಚನೆ. ಹತ್ತೂವರೆ ಆಯಿತು. ಆ ವೇಳೆಗೆ ಮದರಾಸು ಮೇಯಲ್ ಮೂರು ಸಲ ನೋಡಿದ್ದಳು. ಆಳನ್ನು ಕರೆದು "ಹೋಗು, ಅಯ್ಯನವರನ್ನು ಕರೆದುಕೊಂಡು ಬಾ" ಎಂದು ಕಳುಹಿಸಿದಳು.

ಮಲ್ಲಣ್ಣ ಯಾತ್ರೆ ಹೊರಟು ಹೋದ ಮೇಲೆ ಆನಂದಮ್ಮ ಶಂಭುರಾಮ್ಯಯನವರು ಅವರ ಮನೆಯಲ್ಲಿದ್ದರು. ಆಳು ಬಾಗಿಲು ದಾಟಿ ಹೋಗುತ್ತಿದ್ದ ಹಾಗೇ "ಬೇಡ. ಅವರನ್ನು ಕರೆಸಬಾರದು. ಎಷ್ಟೇ ಆಗಲಿ ದೊಡ್ಡವರು" ಎಂದು ತಾನೇ ಅಯ್ಯನವರನ್ನು ಹುಡುಕಿಕೊಂಡು ಹೋದಳು.

ಆನಂದಮ್ಮ ಅಡುಗೆ ಮಾಡಿ ಮುಚ್ಚಿಟ್ಟು ಧ್ಯಾನದಲ್ಲಿ ಕುಳಿತಿದ್ದಾಳೆ.

ಶಂಭುರಾಮಯ್ಯ ಅನುಭವಾಮೃತ ನೋಡುತ್ತ ಸೋಫಾದ ಮೇಲೆ ಕುಳಿತಿದ್ದಾನೆ. ಮಲ್ಲಿಯು "ಅಯ್ಯ!" ಎಂದು ಒಳಗೆ ಬಂದಳು. ಅವನು "ಯಾರು ಮಲ್ಲಮ್ಮನೇ ?" ಎಂದು ಎದ್ದನು.

"ಮಲ್ಲಮ್ಮ ಅಲ್ಲ! ಮಲ್ಲಿ" ಎಂದು ಒಳಗೆ ಬಂದಳು.

"ಏನವ್ವಾ ? ಇದೇಕೆ ಹೀಗಿದ್ದೀಯೆ ?"

"ಬುದ್ಧಿಯೋರಿಗೆ ನೆನ್ನೆಯೇ ಹೇಳಿಕಳುಹಿಸಿದೆ. ಅವರು ಇನ್ನೂ ಬಂದಿಲ್ಲ."

"ಏನು ಸುದ್ದಿ ?"

"ಅದೇನೋ ಮೇಷ್ಟ್ರನ್ನ ಅರೆಸ್ಟ್ ಮಾಡುತ್ತಾರಂತೆ. ತಾತಯ್ಯನವರು ಊರಲ್ಲಿ ಇಲ್ಲವಂತೆ!"

"ಅದೇನು ಅಷ್ಟು ಸುಲಭ ಅಲ್ಲ. ನಾನು ಕೇಳಿದ್ದರಲ್ಲಿ ವೈಸ್ ಛಾನ್ಸೆಲ್ಲರ್ ಡಾ|| ಶೀಲರು ಮಹಾರಾಜರು ಬರುವವರೆಗೂ ಏನೂ ಮಾಡಕೂಡದು. ಮೈಸೂರಿನ ವಿದ್ಯಾರ್ಥಿಗಳು ಮಾತ್ರವಲ್ಲ: ಬೆಂಗಳೂರಿನ ವಿದ್ಯಾರ್ಥಿಗಳೂ ರೇಗಿದ್ದಾರೆ. ಈಗ ಅಧಿಕಾರಿಗಳು ದುಡುಕಿದರೆ ಇದು ಇನ್ನೊಂದು ಹೊಸ ಆಂದೋಲನಕ್ಕೆ ಕಾರಣವಾಗಬಹುದು. ಮೈಸೂರಲ್ಲಿ ಆರಂಭವಾದ ಚಳುವಳಿ ಆಲ್ ಇಂಡಿಯ ವಿದ್ಯಾರ್ಥಿ ಚಳುವಳಿಯ ಮೊದಲನೆಯ ಅಂಕವಾದೀತು, ಎಂದು ದಿವಾನರಿಗೆ ಕಾಗದ ಬರೆದಿದ್ದಾರಂತೆ. ಅಲ್ಲದೆ ತಾತಯ್ಯನವರೂ ಊರಲ್ಲಿ ಇಲ್ಲ: ನಾಯಕರೂ ಇಲ್ಲ. ಇವರೆಲ್ಲ ಬರುವವರೆಗೂ ಏನೂ ಆಗುವುದಿಲ್ಲ. ಆಯಿತು. ನೀನೇ ಅಂತೆ ಈ ಸರ್ವಕ್ಕೂ ಮೂಲ ?"

"ನಾನೇನು ಮಾಡಿದೆ? ವಿದ್ಯಾರ್ಥಿಗಳು ಬಂದು ತಿಲಕರಜಯಂತಿ ಮಾಡುತ್ತೇವೆ ಎಂದರು. ಅವರು ಹತ್ತು ರೂಪಾಯಿ ಕೇಳಿದರು. ಬುದ್ಧಿಯವರ ಹೆಸರಿನಲ್ಲಿ ಇಪ್ಪತ್ತು ರೂಪಾಯಿ ಕೊಟ್ಟೆ, ಅಷ್ಟೆ! ನಾನು ಸರಕಾರದವರನ್ನು ಆ ಹುಡುಗರ ಮೇಲೆ ಬಿದ್ದು ಹೊಡೆದು ಪಟಕಿತ್ತು ಹಾಕಿ ಅಂದನೇ? ಅವರೇನು ಮಾಡುತ್ತಿದ್ದರು ಮಹಾ! 'ತಿಲಕ್ ಮಹರಾಜ್ ಕೀ ಜೈ! ಗಾಂಧೀ ಮಹಾರಾಜ್‌ಕೀ ಜೈ, ಮೈಸೂರ್ ಮಹಾರಾಜ್ ಬಹದ್ದೂರ್ ಕೀ ಜೈ' ಎಂದು ಕೂಗಿಕೊಂಡು ಸಂಜೆಯ

ವರೆಗೂ ತಿರುಗಿ ಮನೆಗೆ ಹೋಗುತ್ತಿದ್ದರು. ಕೋತಿಯ ಹುಣ್ಣು ಬ್ರಹ್ಮರಾಕ್ಷಸ ಮಾಡಿ ಎಲ್ಲರ ಮನಸ್ಸನ್ನೂ ಕಳವಳಪಡಿಸುವುದಕ್ಕೆ ಕಾರಣರಾದ ಅಧಿಕಾರಿಗಳನ್ನು ಡಿಸ್ಮಿಸ್ ಮಾಡುತ್ತಿದ್ದೆ."

ಹೊರಗೆ ಕಾರಿನ ಸದ್ದಾಯಿತು. ಮಲ್ಲಿಯು ಓಡಿಬಂದಳು. ಆಳು ಇಳಿದು ಬಂದು ಬಾಗಿಲು ತೆಗೆಯುವುದರೊಳಗಾಗಿ ತಾನೂ ಅಲ್ಲಿಗೆ ಬಂದು ನಿಂತಳು. ನಾಯಕನು ಇಳಿಯುತ್ತಿದ್ದ ಹಾಗೆಯೇ ಮಲ್ಲಿಯು ಮುಂದೆ ಬಂದು "ಬುದ್ಧಿ, ಮೇಷ್ಟ್ರನ್ನು ಅರೆಸ್ಟ್ ಮಾಡುವಗಂತೆ!" ಎಂದಳು.

ನಾಯಕನು ಮೆಟ್ಟಿಲನ್ನು ಹತ್ತುತ್ತಿದ್ದವನು ಹಾಗೆಯೇ ನಿಂತು ಕೇಳಿದನು: "ಏನು?"

"ಹೌದು ಬುದ್ಧಿ, ಮೊದಲನೆಯತಾರೀಖು ಇಲ್ಲಿ ಗಲಾಟೆ ಆಯಿತು. ವಿದ್ಯಾರ್ಥಿಗಳದ್ದು ತಪ್ಪಿಲ್ಲ. ಅಂಥಾದ್ದರಲ್ಲಿ ತಮಗೆ ಅಧಿಕಾರ ಇದೆ ಅಂತ ಎಲ್ಲರನ್ನೂ ಅರೆಸ್ಟ್ ಮಾಡೋದೆ ಬುದ್ಧಿ."

ಮಲ್ಲಿಯ ಕೋಪವನ್ನು ಕಂಡೇ ನಾಯಕನಿಗೆ ಸೋಜಿಗ ವಾಯಿತು. ಅವಳು ಯಾವಾಗಲೂ ಇಷ್ಟು ಕೋಪಮಾಡಿದವಳಲ್ಲ. ಈಚೆಗೆ ಆಲ್ ಇಂಡಿಯಾ ಟೂರ್ ಮಾಡಿಕೊಂಡು ಬಂದಾಗಿನಿಂದ ಅವಳಿಗೆ ರಾಷ್ಟ್ರೀಯ ಭಾವನೆ ಹೆಚ್ಚುತ್ತಿದೆ. ಅಧಿಕಾರಿಗಳ ಮೇಲೆ, ಅದರಲ್ಲೂ ಸರಕಾರದ ಅಧಿಕಾರಿಗಳ ಮೇಲೆ ಅವಳಿಗೆ ಕೋಪ. ಅವ ರೆಲ್ಲ ಬ್ರಿಟಿಷ್ ಸರಕಾರಕ್ಕೆ ತಮ್ಮನ್ನು ಮಾರಿಕೊಂಡವರು. ಸ್ವಜನ ಅಭಿಮಾನವಿಲ್ಲದ ಮೃಗಗಳು ಎಂಬ ಭಾವನೆ ಬೆಳೆಯುತ್ತಿದೆ.

ನಾಯಕನು ಸಮಾಧಾನವಾಗಿ "ಆಗಲಿ, ಬನ್ನಿ. ಹಾಗಾಗದಂತೆ ಮಾಡೋವ. ಬೇಕಾದರೆ ದಿವಾನರು, ಮಹಾರಾಜರವರೆಗೂ ಹೋಗೋದಲ್ವಾ?" ಎಂದು ಅವಳನ್ನು ಒಳಕ್ಕೆ ಕರೆದುಕೊಂಡು ಹೋದನು.

ಮರುದಿನ ಸುಮಾರು ಎಂಟು ಗಂಟೆಯಿರಬಹುದು. ದಿವಾನರು ಯಾವುದೋ ಪತ್ರಗಳನ್ನು ನೋಡುತ್ತಾ ಕುಳಿತಿದ್ದಾರೆ. ನಾಯಕನು ಬಂದಿರುವುದು ಅವರಿಗೆ ತಿಳಿಯಿತು. ಕೂಡಲೆ ಕರೆಸಿಕೊಂಡರು.

"ಏನು ರಾವ್ ಬಹದ್ದೂರರ ಸವಾರಿ ಇಲ್ಲಿಯವರೆಗೆ ಬಂದುದು ?"

"ತಮಗೊಂದು ಅರಿಕೆಮಾಡಲು ಬಂದಿದ್ದೇನೆ."

"ಅಪ್ಪಣೆಯಾಗಲಿ."

"ಮೈಸೂರಿನ ವಿದ್ಯಾರ್ಥಿಗಳ ಸಮಾಚಾರವಾಗಿ ತಮಗೆ ಏನು ವರದಿ ಬಂದಿದೆ ?"

"ಅದೇ ! ಈಚೆಗೆ ನಮ್ಮ ಸಂಸ್ಥಾನದಲ್ಲಿ ಬ್ರಾಹ್ಮಣ ಬ್ರಾಹ್ಮಣೇತರ ಭಾವನೆ ಹೆಚ್ಚುತ್ತಿದೆ. ಇದರಿಂದ ಅಸಮಾಧಾನಗೊಂಡ ಬ್ರಾಹ್ಮಣರು ಸರಕಾರಕ್ಕೆ ಅವಮಾನ ಮಾಡಬೇಕೆಂದು ಇಷ್ಟು ಮಾಡಿದ್ದಾರೆ. ಮಹಾರಾಜಾ ಸರಕಾರದವರು ಇದನ್ನು ಹೀಗೇ ಬಿಟ್ಟರೆ, ಇದು ಕಾಡುಕಿಚ್ಚಿನಂತೆ ಹಬ್ಬಬಹುದು."

"ತಮಗೆ ಬಂದಿರುವ ಸುದ್ದಿ ಸುಳ್ಳು. ತಾವು ಊಹಿಸಿರುವುದರಲ್ಲಿ ಅರ್ಧ ನಿಜ."

"ಹಾಗೆಂದರೆ ?"

"ಹೌದು. ಇದು ಸರಕಾರಕ್ಕೆ ಅವಮಾನ ತರಬೇಕೆಂದು ಮಾಡಿದ್ದಾರೆಎನ್ನುವುದು ಅಧಿಕಾರಿಗಳ ಸೃಷ್ಟಣೆ. ಕಾಡುಕಿಚ್ಚಿನಂತೆ ಅಧಿಕಾರಿಗಳ ಮೇಲಿನ ಅಸಮಾಧಾನ ವಿದ್ಯಾರ್ಥಿ ವರ್ಗಕ್ಕೆಲ್ಲಾ ಹಬ್ಬಿರುವುದು ನಿಜ. ತಾವೇನಾದರೂ ಮಾಡಿದರಂತೂ ಅದು ಅನರ್ಥಕಾರಿಯಾಗುವುದು ತಪ್ಪಿದ್ದಲ್ಲ."

"ಸರಕಾರದ ಅಧಿಕಾರಿಗಳು ಬಳೆ ತೊಟ್ಟಿಲ್ಲ."

"ಬುದ್ಧಿ, ನಾನು ಸರಕಾರದ ಮಿತ್ರ, ಶ್ರೀಮನ್ಮಹಾರಾಜರ ಭಕ್ತ, ನನ್ನಲ್ಲಿ ಮಾತನಾಡುವಾಗ ತಾವು ಈರೀತಿಯಾಗಿ ಮಾತನಾಡುವುದಾದರೆ, ನನಗೆ ಇರುವುದು ಎರಡೇ ದಾರಿ. ತಮ್ಮಂತೆಯೇ ನಾನೂ ಬಿಗಿಯಾಗಿ ಮಾತನಾಡುವುದು : ಅಥವಾ ಸುಮ್ಮನಾಗಿ ಹೊರಟು ಹೋಗುವುದು. ಎರಡನೆಯದು ನನಗೆ ಅಭ್ಯಾಸವಿಲ್ಲ. ಹುಲಿ ಭುಜ ತಟ್ಟಿ ಎಬ್ಬಿಸಿ ಹೊಡೆಯುವ ನಾಯಕ, ದಿವಾನರ ಆರ್ಭಟಕ್ಕೆ ಹೆದರಿ ಹೊರಟು ಹೋದ ಎಂದರೆ, ಅವನು ಬದುಕಿರುವ ಬದಲು ನೇಣು ಹಾಕಿಕೊಂಡು ಸಾಯುವುದು ಒಳ್ಳೆಯದು. ಅದರಿಂದ ಒಂದೇ ದಾರಿ

ಉಳಿದಿರುವುದು. ಆದರೂ ನಾನು ವಿಹಿತವಾಗಿ ಹೇಳುತ್ತೇನೆ. ತಾವು ದುಡುಕಬೇಡಿ. ತಾತಯ್ಯನವರನ್ನು ಕೇಳಿದಿರಾ ? ”

“ ಅವರು ಬ್ರಾಹ್ಮಣರ ಕಡೆ.”

“ ಬುದ್ಧಿಯವರೆ, ಅವರು ಬ್ರಾಹ್ಮಣರು ನಿಜ. ಆದರೆ ಬ್ರಾಹ್ಮಣರ ಕಡೆಯಲ್ಲ : ಅವರು ಯಾವಾಗಲೂ ಸತ್ಯದ ಕಡೆ. ಅವರನ್ನು ಕೇಳದೆ ಏನೂ ಮಾಡಬೇಡಿ. ವೈಸ್ ಛಾನ್ಸೆಲ್ಲರು, ಪ್ರಿನ್ಸಿಪಾಲ್ ಸುಬ್ಬರಾಯರು ಅವರನ್ನು ಕೇಳಿದಿರಾ ? ನಮ್ಮ ಡಿ. ಸಿ. ಯವರನ್ನೇ ಕೇಳಿದಿರಾ ? ಇಕೋ, ನಾನು ಆಣೆಯಿಟ್ಟು ಹೇಳುತ್ತೇನೆ. ನಾನು ಇವರನ್ನೆಲ್ಲಾ ಕೇಳಿದ್ದೇನೆ. ತಮ್ಮ ಡಿ. ಸಿ. ಬೌರಿಂಗ್ ಸಾಹೇಬರು ಹುಡುಗರ ಜೊತೆ ಸೇರಿ ಅವರು ಹಿಡಿದಿದ್ದ ಪಟಗಳಿಗೆ ಒಂದು ಸಲ ಟೋಪಿಯೆತ್ತಿ ಹೊರಟು ಹೋದರು. ಹಾಗೆ ಮಾಡಿ, ಹುಡುಗರ ಮೇಲೆ ಕೈ ಮಾಡಿದರೆ, ಎರಡು ಅನರ್ಥ. ಒಂದು ಅವರ ತಂದೆತಾಯಿಗಳ ಮನಸ್ಸಿಗೆ ನೋವು : ಇನ್ನೊಂದು ಆ ಹುಡುಗರು ತಪ್ಪದೆ ಸರಕಾರದ ವಿರೋಧಿಗಳಾಗುವರು.”

“ ಹಾಗೆಂದು ನಾವು ಮಾಡುವಕೆಲಸ ಬಿಡುವುದೇ ? ”

“ ಹಾಗಾದರೆ ಈಗೇನು ಮಾಡಬೇಕು ಎಂದಿದ್ದೀರಿ ? ”

“ ತಪ್ಪು ಮಾಡಿದವರನ್ನು ಅರೆಸ್ಟ್ ಮಾಡುವುದು.”

“ ರಕ್ತಪಾತವಿಲ್ಲದೆ ಅರೆಸ್ಟ್ ಮಾಡಬಲ್ಲಿರಾ ? ”

“ ಅರೆಸ್ಟ್ ಮಾಡಬೇಕು ಎಂದಾದರೆ ಮಾಡಿಯೇ ಬಿಡುವುದು. ರಕ್ತಪಾತವಾದರೆ ಆಗುತ್ತದೆ ಅಷ್ಟೆ ! ”

“ ಮಹಾಸ್ವಾಮಿ, ನಾಯಕನ ಮಾತು ಮನಸ್ಸಿನಲ್ಲಿರಲಿ. ಪ್ರಜೆಗಳ ಹಿತವನ್ನು ಗಮನಿಸದೆ ತನ್ನ ಪ್ರತಿಷ್ಠೆಯನ್ನು ಮಾತ್ರ ಕುರಿತು ಚಿಂತಿಸುವ ಸರಕಾರದ ಆಯುಸ್ಸು ಮುಗಿದಂತೆಯೇ ಸರಿ. ಆದರೆ, ನೆನೆಪಿರಲಿ, ಇದು ಶ್ರೀಮನ್ಮಹಾರಾಜರ ಸರಕಾರ. ಈಗ ತಾವು ಯಾರನ್ನು ಅರೆಸ್ಟ್ ಮಾಡಬೇಕೆಂದಿರುವಿರೋ ಅವರೆಲ್ಲ ಶ್ರೀಮನ್ಮಹಾರಾಜರ ಪ್ರಜೆಗಳು. ಅವರಲ್ಲಿ ಎಷ್ಟು ಜನ ದಿವಾನರಾಗುವವರು ಇರುವರೋ ? ಎಚ್ಚರಿಕೆ, ಶ್ರೀಮನ್ಮಹಾರಾಜರು ಬಂದು ಈ ವಿಷಯ

ತಿಳಿಯುವವರೆಗೂ ತಾವು ದುಡುಕಕೂಡದು."

"ನಾವು ಯಾರು ಎಂದು ತಾವು ಮಾತನಾಡುತ್ತಿದ್ದೀರಿ?"

"ತಾವು ಈಗ ಸದ್ಯದಲ್ಲಿ ರೆಸಿಡೆಂಟರ ಏಜಂಟರಾಗಿದ್ದೀರಿ, ಎಂದು ನನ್ನ ಭಾವನೆ."

ದಿವಾನರು ಉತ್ಸಾಹದ ಭರದಲ್ಲಿ ಮುಂದೆ ಕತ್ತು ಚಾಚಿಕೊಂಡಿದ್ದವರು ಥಟ್ಟನೆ ಬಾಗಿ ಸೋಫಾ ಒರಗಿಕೊಂಡರು. ತಲೆಯಮೇಲೆ ಕೈ ಇಟ್ಟುಕೊಂಡರು. ಕನ್ನಡಕವನ್ನು ತೆಗೆದು ಒರಸಿ ಹಾಕಿಕೊಂಡರು. ಮುಖ, ಕೆನ್ನೆ, ಮೀಸೆ ಒರಸಿಕೊಂಡರು. ಏನೋ ಹೇಳಬೇಕೆಂದು ಮೂರುಸಲ ಪ್ರಯತ್ನಪಟ್ಟು ಪಟ್ಟು, ಕೊನೆಗೆ, "ಈದಿನ ಮಹಾರಾಜರ ಸವಾರಿ ಮೈಸೂರಿಗೆ ಚಿತ್ತೈಸಿದೆ. ತಾವು ಹೋಗಿ ಅವರ ಭೇಟಿಮಾಡಿ ಎಲ್ಲಾ ಸುಲಾವಣೆ ಮಾಡಿ. ಮಹಾರಾಜರ ಅಪ್ಪಣೆಯಾಗುವವರೆಗೆ ಏನೂ ಮಾಡದಂತೆ ಅಧಿಕಾರಿಗಳಿಗೆ ಅಪ್ಪಣೆಮಾಡುತ್ತೇವೆ."

"ಅಪ್ಪಣೆ."

"ಇವೊತ್ತು ತಾವೇಕೆ ಇಷ್ಟು ರೇಗಿದ್ದೀರಿ?"

"ನಾವು ಹಳ್ಳಿಯ ಜನ ಮಹಾಸ್ವಾಮಿ. ನಾವು ಯಾವಾಗಲೂ ರೇಗಿಯೇಇರುತ್ತೇವೆ; ನಾವು ಬಂದಾಗ ತಾವು ನಕ್ಕರೆ, ತಮ್ಮ ನಗು ನಮ್ಮನ್ನು ನಗಿಸುತ್ತದೆ. ತಾವು ಕೊಂಚ ಬಿಗಿಯಾದರೆ ನಮ್ಮಂತೆ ಮಾತನಾಡುತ್ತೇವೆ. ನಾವು ಮಿತ್ರರಂತೆ ಎರಡು ಮಾತನಾಡೋಣ. ತಿಲಕರನ್ನು ಇಂಡಿಯವೆಲ್ಲ ಗೌರವಿಸುತ್ತಿತ್ತು. ಅವರ ಪಟಹಿಡಿದುಕೊಂಡು, ತಿಥಿಯ ದಿವಸ ಹುಡುಗರು 'ತಿಲಕ್ ಮಹಾರಾಜಕಿ ಜೈ' ಎಂದು ತಿರುಗಿದರೆ ಏನಂಥಾ ಅಪರಾಧ? ಸಾಲದೆ, ಈ ಕಾರ್ಯ ಮಾಡಬೇಡಿ ಎಂದು ತಾವು ಅಪ್ಪಣೆ ಮಾಡಿಲ್ಲ. ಹೊರಗಿನ ಗಾಳಿ ಸುದ್ದಿ ತಂದು ಎಲ್ಲರ ತಲೆಗೂ ತುಂಬುತ್ತಿದೆ. ಆ ಗಾಳಿಯನ್ನು ತಡೆಯಲು ತಾವು ಮೈಸೂರಿನ ಸುತ್ತ ಗೋಡೆಯನ್ನೂ ಕಟ್ಟಿಲ್ಲ. ನಮ್ಮ ಕಾಲೇಜುಗಳ ಹುಡುಗರು ಇತರ ಬೊಂಬಾಯಿ, ಮದರಾಸು ಕಾಲೇಜುಗಳ ಹುಡುಗರ ಹಾಗೆ ನಡೆದರೆ ತಪ್ಪೇನು?"

"ನಿಜ. ತಮ್ಮ ಮಾತು ಒಪ್ಪಬೇಕಾದ್ದೇ! ಆದರೆ, ಈ ಡೆಲ್ಲಿ

ಸರಕಾರಕ್ಕೆ ಬಗ್ಗಬೇಕಾಗಿದೆಯಲ್ಲ ? ”

“ ನಾನು ಆಗಲೇ ಅರಿಕೆಮಾಡಿಕೊಂಡಿದ್ದೇನೆ. ಡೆಲ್ಲಿಗೆ ಹೇಳಿ ಮೈಸೂರಲ್ಲಿರುವುದು ಮಹಾರಾಜರ ಸರಕಾರವೇ ಹೊರತು ಡೆಲ್ಲಿಯ ಸರಕಾರವಲ್ಲ ಎನ್ನಿ. ಅವರು ತಲೆ ತೆಗೆಯಲಾರರು.''

“ ಆಗಲಿ, ನೋಡೋಣ.''

“ ಮತ್ತೆ ಹೇಳುತ್ತೇನೆ, ಮಹಾಸ್ವಾಮಿ, ತಾವು ಚಿನ್ನದ ಗಣಿ ಮಾರಿಬಿಡಿ. ಮಹಾರಾಜರ ಪಾದಹಿಡಿದು ಒಪ್ಪಿಸಿಬಿಡುತ್ತೇವೆ ; ಆದರೆ ಒಂದು ಜೀವ ಕಳೆಯಬೇಡಿ.''

'' ಆಗಲಿ, ನಾಯಕರೆ, ಮಹಾರಾಜರ ಅಪ್ಪಣೆಯಾಗುವ ತನಕ ನಾವು ಏನೂ ಮಾಡುವುದಿಲ್ಲ.''

“ ಮಹಾರಾಜರು ಯೂನಿವರ್ಸಿಟಿಯ ಛಾನ್ಸೆಲ್ಲರು. ಹುಡುಗರು ಯೂನಿವರ್ಸಿಟಿಯವರು. ಅವರೆಂದಿಗೂ ತಮ್ಮ ಯೂನಿವರ್ಸಿಟಿಯ ಹುಡುಗರನ್ನು ಬಿಟ್ಟುಕೊಡುವುದಿಲ್ಲ.''

'' ಏನೇ ಹೇಳಿ. ಹುಡುಗರದೇ ತಪ್ಪೋ ? ಅಧಿಕಾರಿಗಳದೇ ತಪ್ಪೋ ? ಅಂತೂ ಇಂಡಿಯ ಎಲ್ಲಾ ಮೈಸೂರು ಕಡೆ ನೋಡುವಂತೆ ಆಯಿತು.''

“ ಇಲ್ಲ ಮಹಾಸ್ವಾಮಿ ಮೈಸೂರಿಗೆ ಕೀರ್ತಿ ತಂದುದು ನಮ್ಮ ಮಹಾರಾಜರು. ಕನ್ನಂಬಾಡಿ, ಭದ್ರಾವತಿ, ಯೂನಿವರ್ಸಿಟಿಗಳನ್ನು ಸ್ಥಾಪಿಸಿ ಮಾಲವೀಯರ ಹಿಂದೂ ಯೂನಿವರ್ಸಿಟಿಗೆ ಮೊದಲನೆಯ ಛಾನ್ಸೆಲ್ಲರ್ ಆದಾಗ ಮೈಸೂರಿನ ಕಡೆ ಎಲ್ಲರ ಕಣ್ಣೂ ಬಿತ್ತು. ಚಿನ್ನದ ಗಣಿ, ಆನೆಯಕಾಡು, ಗಂಧದ ಗೂಡು, ಮೈಸೂರಿನ ಹೆಸರು ಎಲ್ಲರಿಗೂ ತಿಳಿಸಿತ್ತು. ಅದಿರಲಿ. ಅಪ್ಪಣೆಯಾದರೆ ಬರುತ್ತೇನೆ.”

“ ನಮ್ಮ ಮಾತು ತೀವ್ರವಾಗಿತ್ತು. ಮನಸ್ಸಿಗೆ ಕಹಿಯಾಯಿತೇನೋ ? ”

“ ಇದೆಲ್ಲ ಕಾಫಿಯ ಕಹಿಯ ಹಾಗೆ ಹಿತ, ಪ್ರಿಯ, ಮಹಾಸ್ವಾಮಿ. ಎಷ್ಟಾಗಲಿ ನಾವೆಲ್ಲ ತಮ್ಮ ಪ್ರಜೆಗಳು : ತಾವು ನಮ್ಮ ಧಣಿಗಳು. ಧಣಿವರೆಗೆ ದೂರು ಎಂದು ತಮ್ಮ ಬಳಿ ಬಂದುದು.”

“ ದೂರು ದೊರೆಗಳವರೆಗೂ ಹೋಗಲಿ. ಆಯಿತು. ನಿಮ್ಮ ರಾಜ್ಯದಲ್ಲಿ ಪಂಚಮರ ಸ್ಕೂಲುಗಳು ಹೇಗಿವೆ ? ”

“ ನಾನೂ ಮೊನ್ನೆ ತಾನೇ ನೋಡಿಕೊಂಡು ಬಂದೆ. ಚೆನ್ನಾಗಿದೆ.”

“ ಅವರಿಗೆ ಸ್ಕಾಲರ್ ಷಿಪ್ ಕೂಡ ಕೊಡುತ್ತೀವಿ, ತಾವೂ ಅವರಿಗೆ ಪ್ರೋತ್ಸಾಹ ಕೊಡಿ ”

“ ಅಪ್ಪಣೆ. ಬುದ್ಧಿ ”

೬೨

ರಾಣಿಗೆ ಮಲ್ಲಿಯನ್ನು ಕಂಡು ಪರಮಾನಂದ. ಅವಳಿಗೆ ಪ್ರಸ್ತವಾಗಿ ಹತ್ತು ವರುಷವಾಗಿದೆ. ಈಗ ದೇವರು ಕಣ್ಣು ಬಿಟ್ಟು ನೋಡಿದ್ದಾನೆ. ಮಲ್ಲಿಗೆ ತಾಯಿಯಾಗುವ ಯೋಗ ಬಂದಿದೆ.

“ ಸುದೀರ್ಘ ಕಾಲವಾದಮೇಲೆ ಗರ್ಭ ನಿಂತಿದೆ. ದೇವರೇ ! ಸುಖವಾಗಿ ಮೈ ಬಿಟ್ಟು ಕಳೆಯಲಿ. ಅಗಳೂ ಗಂಜಿ ಎರಡೂ ಉಳಿದು ಬೇರೆ ಬೇರೆಯಾಗಿ ಶುಭವಾಗಲಿ ” ಎಂದು ದಿನ ದಿನವೂ ಹರಕೆ ಹೊರುವಳು ಆ ಪುಣ್ಯಾತ್ಮಗಿತ್ತಿ.

ಈಗ ಮೂವರೂ ಮೈಸೂರಿನಲ್ಲಿಯೇ ಇದ್ದಾರೆ. ನಾಯಕನು ವಾರಕ್ಕೆ ಎರಡುದಿವಸ ಕಾರಿನಲ್ಲಿ ಮಜ್ಜಿಗೆಹಳ್ಳಿಗೆ ಹೋಗುತ್ತಾನೆ. ಹೋದರೂ ಬೆಳಿಗ್ಗೆ ಹೋಗುವುದು : ಸಂಜೆಯವರೆಗೂ ಇದ್ದು ಬಂದು ಬಿಡುವುದು. ಲೇಡಿಡಾಕ್ಟರ್ ವಾರಕ್ಕೆ ಒಂದು ಸಲ ಬಂದು ಮಲ್ಲಿಯನ್ನು ನೋಡಿಕೊಂಡು ಹೋಗುತ್ತಾಳೆ. ಪ್ರತಿ ಶುಕ್ರವಾರ ಮಂಗಳವಾರ ನಾಯಕನ ಮನೆಯಲ್ಲಿ ರಾಣಿಯು ತಾನೇ ನಿಂತು ಸುವಾಸಿನಿ ಪೂಜೆ ಮಾಡಿಸುತ್ತಾಳೆ. ಮಂಗಳವಾರ ಇಬ್ಬರು, ಶುಕ್ರವಾರ ಐವರು, ಸುವಾಸಿನಿಯರು ಮಲ್ಲಿಯಿಂದ ಪೂಜೆಯನ್ನು ಪಡೆದು ಆಶೀರ್ವಾದ

ಮಾಡಿ ಹೋಗುತ್ತಾರೆ. ಸುವಾಸಿನಿ ಪೂಜೆಯು ನಡೆದ ದಿನ ಮನೆಯಲ್ಲಿ ಪಾಯಸದ ಊಟ.

ಮೂರನೆಯ ತಿಂಗಳಲ್ಲಿ ಮೊದಲನೆಯ ಬಯಕೆ ಊಟ ನಡೆಯಿತು. ಆನಂದನ್ನು ಮಾತೃಸ್ಥಾನದಲ್ಲಿದ್ದು ಎಲ್ಲವನ್ನೂ ನಡೆಯಿಸಿದಳು. ಅಂದಿನರಾತ್ರಿ ಒಂದು ಆರತಕ್ಷತೆ.

ಆ ರಾತ್ರಿ ಮಲಗುವ ಮನೆಯಲ್ಲಿ ರಾಣಿಯು ನಾಯಕನ ಎದುರಿನಲ್ಲಿ ಮಲ್ಲಿಯನ್ನು "ಏನಮ್ಮ ನಿನ್ನ ಬಯಕೆ ?" ಎಂದು ಕೇಳಿದಳು.

ಮಲ್ಲಿಯು "ನನಗೆ ಇರುವ ಆಸೆ ದೊಡ್ಡದೂ ಅಲ್ಲ : ಚಿಕ್ಕದಂತೂ ಅಲ್ಲವೇ ಅಲ್ಲ" ಎಂದಳು.

"ಹಂಗಂದರೇನೇ ?"

"ಹೌದು ಬುದ್ಧಿ. ದೇವರು ಮನಸ್ಸು ಮಾಡಿ ತಮಗೊಂದು ಗಂಡು ಆಗಬೇಕು."

"ನನಗೆ ? ಈಗ ?"

"ಯಾಕೋ ಯಾಕಾಗಬಾರದು ? ಏನು ನಿನುಗೆ ಋಷಿಪಂಚಮಿ ಆಗದೆಯಾ ? ದೇವರ ಮನಸ್ಸಿಗೆ ಬಂದರೆ ಅದೇನೂ ದೊಡ್ಡದಲ್ಲ. ನಾನು ಇವೊತ್ತು ಹರಸಿಕೊಂಡಿದ್ದೀನಿ. 'ನಮ್ಮ ದೊಡ್ಡಮ್ಮನೋರೂ ಹೀಗೆ ಆರ್ತಿ ಮಾಡಿಸಿಕೊಳ್ಳಲಿ. ಬಸವೇಶ್ವರ, ನಿನಗೆ ಚಿನ್ನದ ಕಲಶ ಹಾಕಿಸಿತೀನಿ ಅಂತ.' ನಮ್ಮ ಮಜ್ಜಿಗೆ ಹಳ್ಳಿ ಬಸವಣ್ಣ ಸತ್ಯವಂತ. ಚಿನ್ನದ ಕಲಶ ಹಾಕಿಸಿಕೊಳ್ಳುತ್ತಾನೆ".

"ಆಯಿತು, ಆಮೇಲೆ ?"

"ಒಂದು ಸಲ ಗಾಂಧಿಯವರನ್ನು ನೋಡಿ ಬರಬೇಕು."

"ಅದೇನು ದೊಡ್ಡದಲ್ಲ : ಯಾವಾಗಲಾದರೂ ಆಗಬಹುದು."

"ಅದಷ್ಟು ಸುಲಭಾನೇ ?"

"ಅದೇನು ಕಷ್ಟಾನೇ ?"

"ಇದೇನು ಅಕ್ಕಯ್ಯ, ಹಿಂಗಂತೀರಿ ? ಬುದ್ಧಿಯೋರು ಬರದೆ ನಾವು ಹೋಗೋ ಹಂಗಿಲ್ಲ. ಬುದ್ದಿಯೋರು ಬಂದರೆ ಅವರ ಮೇಲೆ ಬ್ರಿಟಿಷ್ ಸರ್ಕಾರಕ್ಕೆ ಬಂತು ಸಂಶಯ. ಅವರು ಅದೇನು ಕಿರುಕುಳ

ಕೊಟ್ಟಾರೋ? ಯಾಕೆ ಮೇಷ್ಟ್ರರು ಅಂದು ನಿಮ್ಮೆದುರಿಗೇ ಹೇಳ ಲಿಲ್ಲವಾ? ನಾನು ಹೋಗಿ ಬಂದ ಕಡೇಲೆಲ್ಲಾ ಸಿ. ಐ. ಡಿ. ಗಳು. ನಾನು ಇನ್ನುಮೇಲೆ ನಿಮ್ಮ ಮನೆಗೆ ಬರೋದಿಲ್ಲ ಅಂತ? ಹೀಗಿರು ವಾಗ ಏನು ಹೇಳಬೇಕು? ಜೊತೆಗೆ ಅವರನ್ನು ನೋಡಬೇಕಾದರೆ, ಚರಕಾ ಹಿಡಿದು ನೂಲಬೇಕು. ಖಾದಿ ಸೀರೆ ಉಟ್ಕೊಕೋಬೇಕು. ಬುದ್ಧಿಯೋರು ಈ ಸೂಟುಗೀಟು ಎಲ್ಲಾ ಬಿಟ್ಟು ಖಾದಿ ಹಾಕಿಕೊಳ್ಳ ಬೇಕು. ಇವರು ರಾವ್‌ಬಹದ್ದೂರ್ರು. ಇವರು ಖಾದಿ ಹಾಕಿ ಕೊಂಡರೆ ನಾಳೆ ಎಲ್ಲರ ಕಣ್ಣೂ ಇವರ ಮೇಲೆ."

"ಏನು ಬುದ್ಧಿ, ನಮ್ಮ ಮಲ್ಲಮ್ಮನ ಬಯಕೆಗೆ ಏನು ಹೇಳು ತೀರಿ?"

"ನಿಮ್ಮ ಮಲ್ಲಮ್ಮ ಯಾವಾಗಲೂ ನಮ್ಮ ಪ್ರಾಣಕ್ಕೆ ತರುತ್ತಾಳೆ. ಅವೊತ್ತು ದಿವಾನರ ಕೈಲಿ, ಜಗಳಾ ಆಡಿಸಿಬಿಟ್ಟಳು. ಇಂಡಿಯದಲ್ಲಿ ಎಷ್ಟು ಜನ ಅರೆಸ್ಟ್ ಆಗೋದಿಲ್ಲ? ಆಗಿಲ್ಲ? ಅಂಥಾದ್ದರಲ್ಲಿ ಇವರ ಮೇಷ್ಟ್ರನ್ನ ಅರೆಸ್ಟ್ ಮಾಡುತ್ತಾರೆ ಅಂತ ಹಾರಾಡಿಬಿಟ್ಟಳು. ಶಿವನೇ! ನಮ್ಮಪ್ಪ! ಮೂರು ದಿನ ನನ್ನ ಒದ್ದಾಟ ಆ ನಮ್ಮಪ್ಪನಿಗೇ ಪ್ರೀತಿ."

"ಬುದ್ಧಿ, ನಿಜ ಹೇಳಿ, ಆ ಮೂರು ದಿನವೂ ನಾನು ನಿಮ್ಮ ಸೇವೆ ಮಾಡಿದೆನೋ ಇಲ್ಲವೋ? ನೀವೇ ಮನಸ್ಸೊಪ್ಪಿ, ಕಳ್ಳ ಹೆಣ್ಣೆ, ದುಡಿಸಿದರೂ ಕೈತುಂಬಾ ಫೀಸ್ ಕೊಟ್ಟೆ, ಅಂತ ಅನ್ನಲಿಲ್ಲವಾ?

"ನೋಡಿದರೇನ್ರಿ: ದೊಡ್ಡಮ್ಮನೋರೆ, ಈ ಕಲಕೇತಿ ವಿದ್ಯೆ ನೀವೂ ಕಲಿತುಕೊಳ್ಳಿ – ಇದಕ್ಕಿನ್ನೂ ಪೈಲೇ ಪಂಚಮಿಸೆ, ಆಗಲೇ ಹತ್ತಿದರೊಂದು; ಇಳಿದರೊಂದು. ನಮ್ಮ ದೊಡ್ಡಮಣ್ಣಿ ಈಗ ಚಿನ್ನ ಕಣಪ್ಪ; ಯಾವಾಗಲೂ ರಾಜಧಾನಿ. ಎಷ್ಟಾಗಲೀ ತುಂಬಿದ ಕೊಳ."

"ಬುದ್ಧಿ, ಬುದ್ಧಿ, ಹುಷಾರಾಗಿರಿ. ಈ ಕಳ್ಳ ಬುದ್ಧಿ ಏನೋ ಪಂದೆ ಮಾಡವರೆ, ನಿಮ್ಮನ್ನ ತೂಕ ಏರಿಸ್ತವರೇ. ಏನೋ ಅದೆ. ನಾವು ಕಲಿತಿರೋ ಬುದ್ಧಿಯಲ್ಲ ಇವರೇ ಕಲಿಸಿ ಕೊಟ್ಟದ್ದು. ಇವರ ಮುಂದೆ ಕೂತುಕೊಳ್ಳುವಾಗ ಸಟೀಕೆ ಓರೆಯಾಗಿ ಕುಂತುಕೊಂಡರೆ

ಅದಕೇನಾದರೂ ಅಂತಾರೆ. ನಾವು, ಪಾಪ, ನಮ್ಮ ಬುದ್ಧಿಯೋರು ಆಯಾಸ ಪಟ್ಟರಲ್ಲ ಅಂತ ಕೊಂಚ ಒದ್ದಾಡಿಕೊಂಡರೆ, ಆಗಲೇ ಬಂತು ನಮಗೆ, ಕಲಕೇತಿ, ಕಳ್ಳ ಹೆಣ್ಣು, ಮಾವಿನ ಹಣ್ಣು, ಸೀಬೇ ಹಣ್ಣು, ಇನ್ನೂ ಏನೇನೋ ? ಶಿವನೆ ! ಏನು ಹೇಳಲಿ ?"

ರಾಣಿಯು ಕಿಲಕಿಲನೆ ನಕ್ಕಳು.

ಮಲ್ಲಿಯು ಕೇಳಿದಳು : " ಏನು ಬುದ್ಧಿ ? "

" ಇಲ್ಲಿ ನೋಡವ್ವಾ, ಮೊಣಕೈಲಿ ತಿವೀತಿರೋದಾ ! "

" ನಾನು ಇತ್ತಕಡೆ ತಿರುಗಿಕೊಂಡು ಮಲಕ್ಕೋತೀನಿ ಬಿಡಿ."

" ಅದೇನು ? "

" ನೋಡಿ ಮತ್ತೆ ; ನೀವು ಕೇಳಿದರಿ ನಿಂಗೇನಾಸೆ ಅಂತ. ನಾನು ಹೇಳಿದೆ. ಬುದ್ಧಿಯೋರು ಆಯಿತದೆ ಇಲ್ಲ ಅಂತ ಹೇಳದೆ, ನಿಮ್ಮ ಕಡೆ ತಿರಿಕ್ಕೊಂಡ ಮೇಲೆ ನಮ್ಮದೇನು ಉಳೀತು "

" ಇಲ್ಲಿ ನೋಡು ಪಾಪ, ಬುದ್ಧಿಯೋರಿಗೆ ಆಯಾಸವಾಗದೆ ನಿದ್ದೆ ಬಂದಿದೆ. ಗೊರಕೆ ಹೊಡೀತಿದ್ದಾರೆ."

" ಈ ಕಳ್ಳ ನಿದ್ದೆ ನಾನು ಕಾಣದ್ದಾ. ಮೇಲೆ ಬಿದ್ದು ಎಬ್ಬಿಸಲಿ ಅಂತ. ನಾನು ನನ್ನ ಮಾತಿಗೆ ಉತ್ತರ ಬರೋತಂಕಾ ನಾನು ಇತ್ತಲಾ ಕಡೆ ಮಲಗಿಕೊಂಡು ನಾನೂ ಗೊರಕೆ ಹೊಡೀತೀನಿ "

" ನಿಮ್ಮಿಬ್ಬರ ಜಗಳದಲ್ಲಿ ನಾನೇನು ಮಾಡಲಿ ? "

" ನಮ್ಮಿಬ್ಬರ ಹೊದಿಕೇನೋ ಕಿತ್ತುಕೊಂಡು ಬಿಡಿ."

" ಲೇ. ನಾನು ಸುಮ್ಮನಿರೋಕಿಲ್ಲ. ನಾ ಚಳಿ ತಡೀಲಾರೆ."

" ನೋಡಿದಿರಾ ನಿಮ್ಮ ಬುದ್ಧಿಯೋರ ನಿದ್ದೆ. "

" ನಮ್ಮ ಬುದ್ಧಿಯೋರು ನಿಮ್ಮ ಬುದ್ಧಿಯೋರಲ್ವಾ ? "

" ಇವೊತ್ತು ನಿಮ್ಮ ಬುದ್ಧಿಯೋರು. ನಮ್ಮೋರಾಗಿದ್ದರೆ ನಮ್ಮ ಮಾತಿಗೆ ಉತ್ತರ ಬರುತ್ತಿತ್ತು ?"

" ನ್ಯಾಯ, ಬುದ್ಧಿ, ಮಲ್ಲಮ್ಮನ ಮಾತಿಗೆ ಉತ್ತರ ಹೇಳಿದಿರಾ?"

ನಾಯಕನು " ನನಗೆ ನಿದ್ದೆಕಣಪ್ಪಾ ! ಯಾವ ಮಾತೂ ಕಿವೀಗೆ ಬೀಳಲ್ಲೊ !" ಎಂದು ಗೊರಕೆ ಹೊಡೆದನು.

"ಮಲ್ಲವ್ವಾ, ನಿನ್ನ ಮಾತು ಅವರ ಕಿವೀಗೇ ಬೀಳೋಕಿಲ್ಲವಂತೆ, ಕಿವೀಲೇ ಹೇಳಬಾರದಾ !"

"ಅವರೇ ಹೇಳು ಅನ್ನಲಿ."

"ಹೋಗಲಿ. ನಾವೇ ಸೋಲೋವ. ನೀನೇ ಹೇಳು."

"ಆಗಲಿ. ನೀವು ದೊಡ್ಡೋರು. ನಿಮ್ಮ ಮಾತೂ ಕೇಳೋವ."

ಮಲ್ಲಿಯು ಹಾಗೆಯೇ ಪಕ್ಕವಾಗಿ ಗಂಡನ ಭುಜ ಹಿಡಿದು ಎದ್ದು ಕಿವಿಯ ಹತ್ತಿರ ಬಾಯಿಟ್ಟು ಕೆನ್ನೆಗೆ ಕೆನ್ನೆ ತಗಲುತ್ತಿರಲು, ಮೀಸೆ ಕೆನ್ನೆಯ ಮೇಲೆ ಉಜ್ಜಿ ಮುಲುಮುಲು ಎನ್ನುತ್ತಿರಲು, ಹೇಳಿದಳು: "ಬುದ್ಧಿ, ನನಗೆ ಗಾಂಧಿಯವರನ್ನು ನೋಡಬೇಕು ಅಂತ ಆಸೆ. ಯಾವಾಗ ಕರೆದುಕೊಂಡು ಹೋಗ್ತೀರಿ ?"

ನಿದ್ದೆ ಬಂದಿದ್ದ ನಾಯಕನು ಅವಳನ್ನು ಹಾಗೆಯೇ ಎತ್ತಿ ತನಗೂ ರಾಣಿಗೂ ನಡುವೆ ಇಟ್ಟುಕೊಂಡು, ಅವಳ ಮಾತನ್ನೇ ಗಮನಿಸದಿದ್ದವನಂತೆ, ರಾಣಿಯನ್ನು ಕೈಯ್ಯಿಂದ ಅಲ್ಲಾಡಿಸಿ, "ನೋಡಿದರೇನ್ರಿ, ನಿಮ್ಮವಳು ಮಾಡಿದ ಪಿತೂರಿ ? ಅವಳು ನಮ್ಮ ಬಿರುದಿಗೆ ಸಂಚಕಾರ ತರೋಕೆ ಹಾದಿಹಾಕಿರೋದು ? ಈಗ ನಾನ್ ಕೋ ಆಪರೇಷನ್ ಕಾಲ. ರಾವ್ ಬಹದ್ದೂರ್ ನಾಯಕ ಗಾಂಧಿಯವರನ್ನು ನೋಡೋಕೆ ಹೋಗಿದ್ದ ಅಂದರೆ, ಬಂತು ಪ್ರಾಣಸಂಕಟ. ಒಂದು ಸಲ ನನ್ನ ಕೈಲಿ ಖಾದಿ ಹಾಕಿಸಿಬಿಟ್ಟರೆ, ಆಮೇಲೆ ಬೊಡ್ಡೀಮಗ ಆ ಹಡಿಭಾರದ ಬಟ್ಟೆ ಹಾಕ್ಕೊಂಡು ತಿರುಗಲಿ ಅಂತ."

"ಪಾಪ, ಈಗ ಬುದ್ಧಿಯೋರು ಹಾಕ್ಕೊಳ್ಳೋ ಬಟ್ಟೆ ಏನಾದರೂ ತೂಕವಾ ? ಚಳಿ ಬಂದೋರ ಮೈಮೇಲೆ ಇವರದೊಂದು ಸೂಟ್ ಹಾಕಿಬಿಟ್ಟರೆ ಚಳಿಯೇ ಬಿಟ್ಟುಹೋಗ್ತದೆ !"

"ನಾನು ಮಾತಿಗೆ ಮಾತು ಜೋಡಿಸಿದರೆ, ಬಯ್ತೀರಿ. ಇಲ್ಲದೆ ಸುಮ್ಮಕಿದ್ದರೆ, ಅದಕೂ ಬಯ್ತೀರಿ. ಏನು ಮಾಡಬೇಕು ನಿಮ್ಮ ?"

"ಮಾತಿಗೆ ಮಾತು ಜೋಡಿಸಲೂ ಬೇಕು : ಬಯ್ಯಿಸಿಕೊಳ್ಳಲೂ ಬೇಕು."

"ಇದೀಗ ಇಲ್ಲದ್ದು ಕೊಬ್ಬು"

"ಆದಿರಲಿ, ಏನು ಹೇಳ್ತೀರೋ ಹೇಳಿ. ನಾನು ಜಡ್ಜಿ, ಕೇಳಿ ಜಡ್ಜ್‌ಮೆಂಟ್ ಹೇಳ್ತೀನಿ."

"ಮೊದಲನೇದು ಮೈತುಂಬಾ ಬಟ್ಟೇದು. ನಿಜ. ನಮ್ಮ ಬಟ್ಟೆ ಬಹಳ ಭಾರ...."

"ಬರಿಯ ಭಾರ ಅಲ್ಲ. ಕುದುರೆ ಕೂಡ ಜಗ್ಗೋಷ್ಟು ಭಾರ."

"ಅದಕ್ಕೆ ನಮ್ಮ ಉತ್ತರ ಬೇಕೋ ?"

"ಬ್ಯಾಡಿ. ಇನ್ನು ಗೂಳಿ, ಹಸ, ಅಂತ ಏನೇನೋ ಹೇಳಿ ನಮ್ಮ ನಾಚಿಸಬ್ಯಾಡಿ."

"ಇಲ್ಲಿ ಇರೋರು ನಾವು ನಾವು ತಾನೆ ? ಇನ್ಯಾರೂ ಇಲ್ಲವಲ್ಲ."

"ಅವಳ ಮಾತಿರಲಿ ಬುಡಿ ಬುದ್ಧಿ. ನೀವು ನನಗೆ ಹೇಳಿ. ಅವಳು ಕೇಳೋದೇ ಬ್ಯಾಡ ನೀ. ಕಿವಿಮುಚ್ಚಿಕೊಳ್ಳಮ್ಮಿ."

"ನೋಡಿ, ರಾಣಿಯವರೇ" ನಾಯಕನು ಪರುಶವಣೆಯಾಗಿ ಹೇಳಲಾರಂಭಿಸಿದನು.

"ಹೇಳಿ, ಬುದ್ಧಿಯವರೆ !" ಎಂದು ರಾಣಿಯು ಉತ್ತರ ಕೊಟ್ಟಳು.

"ಯಾಕೋ ಶಕುನ ಸರಿಹೋಗಲಿಲ್ಲ–ನಾ ಹೇಳೊಲ್ಲ."

"ಕೇಸು ನಿಮ್ಮ ಕಡೆ ಆಗೋಕಿಲ್ಲ."

"ಹಂಗಾದರೆ, ಈ ತುಂಟಮಲ್ಲಿ ಹೇಳಿದಂಗೆ ರಾವ್ ಬಹದ್ದೂರ್ ರಾಜಸೇವಾಪರಾಯಣ ಪುಟ್ಟಸಿದ್ದಪ್ಪನಾಯಕ ಕೇಳಬೇಕೋ ?"

"ಹೌದು. ಅದೇ ಈ ಕೋರ್ಟಿನ ಆರ್ಡರ್."

"ಚೆನ್ನಾಯ್ತಪ್ಪ. ದಂಡಿಗೆ ಹೆದರಲಿಲ್ಲ ; ದಾಳಿಗೆ ಹೆದರಲಿಲ್ಲ. ಈ ಬಾರುದ್ದ ಮುಂಡೆಗೆ ಹೆದರಬೇಕು."

"ಎಚ್ಚರಿಕೆ. ಕೋರ್ಟಿಗೆ ಅವಮಾನ ಮಾಡಕೂಡದು. ನಾವು ಹದಿನಾರು ಮೊಳ : ನೀವು ಎಂಟು ಮೊಳ. ಇನ್ನೂ ಹೆಚ್ಚು ಮಾತಾಡಿದರೆ ನಾವು ಮುಪ್ಪತ್ತೆರಡು ಮೊಳ : ನೀವು ಎಂಟು ಮೊಳ."

"ಗಾಂಧಿಯವರು ಬಂದಮೇಲೆ ನಮಗೆ ಮೊಳ ಕಮ್ಮಿಯಾಯಿತು."

ಮಲ್ಲಿಯು " ಹಾಲ್ಟ್ " ಎಂದಳು.

" ಏನೇ ಅದು ?"

" ನಮ್ಮ ಮಾತಿಗೆ ಉತ್ತರ ಕೊಟ್ಟು ಮುಂದಲ ಮಾತು."

" ದೊಡ್ಡಮ್ಮನೋರ ಕೋರ್ಟಿನಲ್ಲಿ ಆರ್ಡರ್ ಆಗಿಹೋಗದೆ. ನಾವು ಒಪ್ಪಲೇಬೇಕು. ಆದರೆ ಈಗ ನೋಡು. ಅವರ ಮನಸ್ಸು ನೊಂದಿದೆ. ಈ ಹಿಂದೂ ಮುಸಲ್ಮಾನ್ ಜಗಳಗಳು, ಈ ಸ್ವರಾಜ್ಯ ಪಾರ್ಟಿ, ಇವೆಲ್ಲ ಅವರ ಮನಸ್ಸು ಕಲಕಿವೆ. ಈಗ ಹೋಗೋದಾ ?"

" ಅವೆಲ್ಲ ಇರಲಿ. ನಿಮ್ಮ ಗತಿ ಹೇಳಿ. ನಿಮ್ಮ ಮನಸ್ಸು ಹೆಂಗೆ ಹೇಳಿ."

" ನಾನೂ ಅದೇ ಯೋಚನೆ ಮಾಡುತಿದ್ದೆ. ನರಸಿಂಹಯ್ಯನ್ನೂ ಆನಂದಮ್ಮ ಶಂಭುರಾಮಯ್ಯನ್ನೂ ಕರಕೊಂಡು ಕಾಶೀಗೆ ಹೊರಡುತೀವಿ ಅಂತ ಹೇಳಿ ಹೊರಟುಬುಡೋದು. ದಾರೀಲಿ ಅವರನ್ನು ನೋಡಿಕೊಂಡು ಬಂದುಬುಡೋದು. ಸರಕಾರ ಕೇಳಿದರೆ, ನನ್ನ ಹೆಂಡತಿ ಬಯಕೆ ಅನ್ನೋದು."

" ನೋಡಿ ಅಕ್ಕಯ್ಯ. ಹುಲಿ ಹೊಡೆಯೋ ಗಂಡಿಗೂ ಸರಕಾರ ಅಂದರೆ ಹೆದರಿಕೆ. ಯಾಕೆ ನೇರವಾಗಿ ಹೋಗಬಾರದು ?"

" ಇನ್ನೇನು ಜಿನ್ನಾ ಸಾಹೇಬರು ಕೇಳಿದ್ದಾರೆ: ನಿಮ್ಮ ಕೈಲಿ ರಾಜ್ಯ ಆಳೋಕಾಗದೇಹೋದರೆ ನಮ್ಮ ಕೈಗೆ ಕೊಡಿ, ನಿಮಗಿಂತ ಚೆನ್ನಾಗಿ ಆಳ್ತೀವಿ ಅಂತ. ಕೊಂಚ ದಿನ ತಡಕೊಳ್ಳಿ. ಆಗ ನಾನೇ ನಿಂತು 'ಸಾಕು ನಿಮ್ಮ ರಾಜ್ಯ ಹೊರಡಿ' ಅಂತೀನೋ ಏನೋ ?"

" ನೀವು ಹೊರಡೋದಾದರೆ ನಾನು ಚರಕಾ ಕಲಿತುಕೊಳ್ಳಬೇಕು "

" ನೀವು ಕಲಿತುಕೊಳ್ಳಿ: ಪರವಾಯಿಲ್ಲ. ಗಾಂಧಿಯವರು, 'ನಾಯಕ ನಿನಗೇನು ಮಹಾ ಕೆಲಸ, ಕೊಳ್ಳೆ ಹೋಗೋದು ? ನೀನೂ ಚರಕಾ ತಕೋ' ಅಂದ್ರೆ ?"

" ಆಗ ಹೇಳೋದು, 'ಮಹಾಸ್ವಾಮಿ, ತಮಗೆ ಇರೋ ಒಬ್ಬ ಹೆಂಡಿತಿಯೂ ಭಾರವಾಗವ್ಳೆ. ನನಗೂ ಖಾಯಂ ಆಗಿ ಇಬ್ಬರು ಹೆಂಡಿ

ತೀರು ಇದ್ದಾರೆ. ಖರ್ಚಿಗಳೆಷ್ಟೊ ಲೆಕ್ಕವಿಲ್ಲ,' ಅನ್ನೋದು"

"ಥೂ ತುಂಟಬಡ್ಡಿ. ಯಮುನ ಹತ್ರಾದರೂ ಆ ಮಾತು ಅಂದೇನು ? ಆ ಮಹಾತ್ಮನ ಹತ್ರಾ ಈ ಮಾತು ಎತ್ತೋದಾ ? ಅವರ ಹತ್ರಾ ಹೋದಾಗ, ದೇವರ ಹತ್ರ ಹೋದಹಾಗೆ ಹಣ್ಣು ಕಾಯಿ ತಕೊಂಡು ಹೋಗಿ ಆರತಿ ಮಾಡಿಕೊಂಡು ಬರಬೇಡವಾ ? ಶಿವಶಿವಾ ! ಅಂಥಾ ಪುಣ್ಯಾತ್ಮನ ಹತ್ರ ನುಂಚದ ಮಾತೂ ಎತ್ತಬೋದಾ !"

"ಇನ್ನು ಹದಿನೈದು ದಿನ ಟೈಂ ಕೊಡಿ ಖಾವಂದ್ ! ನಾವು ಮಹಾರಾಜರ ಹತ್ತರ ಹೋಗಿ ಅಪ್ಪಣೇ ಕೇಳಿ ಬರ್ತೇವೆ, ಅವರು ಆಗಬೋದು ಅಂದ್ರೆ ನಮ್ಮದೇನೂ ಅಡ್ಡಿ ಇಲ್ಲ."

"ಮಹಾರಾಜರು 'ಅಲ್ಲಿಗೇಕೆ ಹೋಗೋದು : ಇಲ್ಲೇ ನಮ್ಮ ರಾಜ್ಯಕ್ಕೆ ಬನ್ನಿ ' ಅಂದ್ರೆ ?"

"ಅದೂ ನಿಜ ಕಣ್ರಿ. ಮಹಾಪಾದದಲ್ಲಿ ಹೇಳಿ. ಬುದ್ಧಿ, ಅವರಿಗೆ ಈ ಎಲೆಕ್ಷನ್ ಆದಮೇಲೆ ಏನೋ ವ್ಯೈ ಸರಿಯಾಗಿಲ್ಲವಂತೆ. ಅವರು ಯಾಕೆ ಬಂದು ನಂದೀಲಿ ಇರಬಾರದು ?"

"ಸರಿ. ಸಾರ್. ನಾಳೆಯೇ ತಲಪಿಸುತೀವಿ ಈ ಸುದ್ದೀನ ಮಹಾರಾಜಾ ಸಾಹೇಬರಿಗೆ. ಅಲ್ಲಿ ಅಪ್ಪಣೆ ಆದುದನ್ನು ರಾಣೀ ಸಾಹೇಬರ ಕೋರ್ಟಿಗೆ ತಿಳಿಸತೀವಿ. ಅದುವರೆಗೂ ನಾವು ಸುಮ್ಮ ನಿರಬೇಕಾ ?"

"ಏನಿಲ್ಲ. ಪಾರ್ಟಿಗಳ ಸಮ್ಮತಿಯಿಂದ ಏನುಬೇಕಾದರೂ ಮಾಡಿಕೊಳ್ಳಬಹುದು."

"ಥ್ಯಾಂಕ್ ಯು. ಯುವರ್ ಆನರ್ !"

## ೪೩

ಮಲ್ಲಿಯು ಗಾಂಧಿಯವರ ದರ್ಶನಮಾಡಿಕೊಂಡು ಬಂದಳು ಅವರು ದರಿದ್ರ ನಾರಾಯಣನ ಪ್ರತಿನಿಧಿಯೆಂದು ಮೊಳಕಾಲುಮೇಲಕ್ಕೆ

ಪಂಚೆಯುಟ್ಟು ಅರೆಮೈ ಮುಚ್ಚುವಷ್ಟು ಬಟ್ಟೆಯುಟ್ಟು ಹಗಲೂ ರಾತ್ರಿ ರಾಮ ರಾಮ ಎನ್ನುತ್ತ ಕುಳಿತಿರುವುದು ಅವಳ ಮನಸ್ಸಿಗೆ ಬಹಳ ಹಿಡಿಯಿತು. ಹಿಂದಿನ ಕಾಲದ ಯಾವನೋ ಜ್ಞಾನಿಯೊಬ್ಬನು ಭರತಖಂಡದ ದಾಸ್ಯವಿಮೋಚನಕ್ಕಾಗಿ ಮತ್ತೆ ಅವತರಿಸಿಬಂದಿರುವ ನೆಂದು ಅವಳಿಗೆ ತೋರಿತು. ಆ ಆಶ್ರಮದ ಜೀವನ ಅವಳಿಗೆ ಬಹಳ ಮೆಚ್ಚುಗೆಯಾಯಿತು.

ಅವಳು ಇಂಗ್ಲಿಷ್ ಓದಿದವಳು. ಬ್ರಿಟಿಷರು ಎಂತಹ ಕಪಿ ಮುಷ್ಟಿಗಳು ಎಂಬುದನ್ನು ಬಲ್ಲಳು. ಗಾಂಧಿಯವರು ನಿರಸ್ತ್ರರು. ಸುಲಭ ಜೀವನರು. ಇನ್ನೊಬ್ಬರಿಗೆ ಹಿಂಸೆಯನ್ನು ಮಾಡದವರು. ಸತ್ಯಸಂಪನ್ನರು. ಇವರೆಂತು ಸಶಸ್ತ್ರರಾದ, ಸಮ್ರಾಟ್ ಪದಸ್ಥಿತರನ್ನು ಎದುರಿಸುವರು ? ಎಂದು ಅವಳಿಗೆ ಭಾರಿ ಯೋಚನೆ.

ಅವಳ ಮನಸ್ಸು ಇದು ಸಾಧ್ಯವೇ ಎಂದು ಪುರಾಣ ಇತಿಹಾಸ ಗಳನ್ನು ಹುಡುಕಿತು. 'ಸಾಮ್ರಾಜ್ಯಗಳು ಹಿಂದೆ ಎಷ್ಟೋ ಆಗಿವೆ. ಆದ ಸಾಮ್ರಾಜ್ಯಗಳಲ್ಲಿ ಯಾವುದೂ ಇಲ್ಲ ಅನ್ಯಾಯವಾಗಿದ್ದವು ಹೋದುವು ಎಂದರೆ ನ್ಯಾಯವಾಗಿದ್ದವೂ ಹೋಗಿವೆ. ಹಾಗಾದರೆ ಜಗತ್ತಿನಲ್ಲಿ ಎಲ್ಲವೂ ನ್ಯಾಯ ಅನ್ಯಾಯ ಎಂಬ ಹಂಗಿಲ್ಲದೆ ಹಾಳಾಗ ಬೇಕೇನು? ಯಾವುದೂ ಶಾಶ್ವತವಲ್ಲ ಎಂಬುದೊಂದೇ ನಿಜವೇನು ? ಅದೇ ಸಿದ್ಧಾಂತವೇನು ? ಎದುರಿಗಿರುವ ಹೊಳೆಯನೀರು ಗಲಗಲ ಎಂದು ಸದ್ದು ಮಾಡುತ್ತ ಹೊರಟುಹೋಗುತ್ತಿದೆ. ಹಾಗೆಯೇ ಕಳೆದುಹೋಗು ತ್ತಿರುವ ಕಾಲದೊಡನೆ ನಮ್ಮ ಆಯುಷ್ಯೂ ಕಳೆಯುತ್ತಿದೆ. ಅದರಂತೆಯೇ ಪ್ರತಿಯೊಂದಕ್ಕೂ ಆಯುಸ್ಸು ಜಾರುತ್ತಿದೆ: ಹೌದೇನು ? ಹಾಗಾದರೆ ಬೆಟ್ಟವೂ ಒಂದು ದಿವಸ ಪುಡಿಪುಡಿಯಾಗುವುದೇನು ? ಆಗುತ್ತಿಲ್ಲವೇನು? ಗಾಳಿ, ಮಳೆ, ಬಿಸಿಲು, ಇವೆಲ್ಲವೂ ಕಲ್ಲು ಬಂಡೆಗಳಮೇಲೆ ತಮ್ಮ ಪ್ರಭಾವವನ್ನು ಬೀರುತ್ತಿವೆ. ಎಲ್ಲವೂ ಸವೆದುಹೋಗುತ್ತಿವೆ. ಸವೆದು ಸಣ್ಣವಾಗಿ ಕೊನೆಗೆ ಇಲ್ಲವಾಗುತ್ತಿವೆ. ಹಾಗೆಯೇ ಬ್ರಿಟಿಷ್ ಸಾಮ್ರಾಜ್ಯವೂ ಸವೆಯುತ್ತಿದೆಯೇ ? ಸಣ್ಣವಾಗುತ್ತಿದೆಯೇ ? ಸಾಯು ತ್ತಿದೆಯೇ ?

'ಅದು ಏನೂ ಕಾಣಿಸದಲ್ಲ ? ಹೇಗಾಗುತ್ತದೆ ? ಭಾರತಿಯನ್ನು ಕಟ್ಟಿರುವ ದಾಸ್ಯಶೃಂಖಲೆ ಮುರಿಯುವುದೇ ? ಸಂಕಲೆ ಕಳಚುವುದೇ ? ಅಯ್ಯೋ ! ಪುರಾತನ ವೈಭವಸಂಪನ್ನಳಾದ ಮಹಾದೇವಿಯಿಂದು ಬ್ರಿಟಿಷ್ ಸಿಂಹದ ಕಬಳವಾಗಿ ಮೂದೇವಿಯಾಗಿರುವಳಲ್ಲ !'

ಮಲ್ಲಿಗೆ ಅಳು ಬಂತು : ಅತ್ತಳು.

ಮತ್ತೆ ಯೋಚನೆ ಬಂತು : ' ಗಾಂಧಿಯವರು ಧೈರ್ಯವಾಗಿದ್ದಾರೆ. ಅಳುವುದಿಲ್ಲ : ನಮ್ಮ ಜನ ಒಂದಾದರೆ ಬ್ರಿಟಿಷರು ಬಿಟ್ಟೋಡುವರು ಎನ್ನುತ್ತಾರೆ. ಒಂದು ವರ್ಷದಲ್ಲಿ ಸಾಮ್ರಾಜ್ಯ ಹೋಗಿ ಸ್ವಾರಾಜ್ಯ ಬರುವುದು ಎನ್ನುತ್ತಾರೆ. ಅವರು ಮಾಡಿದ ಕೆಲಸವೆಲ್ಲ ಮರಳಿನ ಮನೆಯ ಹಾಗೆ ಕುಸಿಯುತ್ತಿದೆ. ಹಿಂದೂ ಮುಸಲ್ಮಾನರ ಐಕ್ಯ ವೆಂದರು. ಜೊತೆಜೊತೆಯಲ್ಲಿ ದುಡಿದವರು ಇಂದು ಬಿಟ್ಟು ಬೇರೆ ಯಾಗಿದ್ದಾರಲ್ಲ ? ಗಾಂಧಿಯವರು ರೈಲಿನ ಹಾಗೇನು ? ಬಂದವರು ಬನ್ನಿ ! ಹೋದವರುಹೋಗಿ. ನಾನಂತೂ ಸ್ವರಾಜ್ಯ ಬರುವವರೆಗೂ ಬಿಡುವುದಿಲ್ಲ ಎಂದಿರುವುದರ ಅರ್ಥ ಅದೇ ಏನು ?'

' ನಮ್ಮ ಪುರಾಣಗಳಲ್ಲಿ ಏನೋ ಇಂತಹ ಪವಾಡಗಳು ಆಗಿವೆ. ಪರಶುರಾಮನು ವೀರಕ್ಷತ್ರಿಯರನ್ನು ಇಪ್ಪತ್ತೊಂದುಸಲ ಮಾರಣ ಹೋಮ ಮಾಡಿದ್ದಾನೆ. ಆದರೆ, ಅವನ ಕೈಯಲ್ಲಿ ಗಂಡುಗೊಡಲಿ ಯಿತ್ತು. ಇವರ ಕೈಯಲ್ಲಿ ಹತ್ತಿ, ರಾಟೆ, ಹೌದು ನಿರಸ್ತ್ರನಾದ ಅಗಸ್ತ್ಯರು ವಿಂಧ್ಯಪರ್ವತವನ್ನು ಮಲಗಿಸಿದರು : ಸಮುದ್ರವನ್ನು ಕುಡಿದರು. ಹಾಗೆಯೇ ಈತನೂ ಮಾಡುವನೋ ? ಬ್ರಿಟಿಷ್ ಸಾಮ್ರಾಜ್ಯವೆಂಬ ಕಡಲನ್ನು ಕುಡಿದು ಅದನ್ನು ನಿರ್ನಾಮಮಾಡು ವನೋ ? ಸೂರ್ಯನನ್ನು ಅಡ್ಡಗಟ್ಟುವಷ್ಟುಮಟ್ಟಿಗೆ ಬೆಳೆದ ವಿಂಧ್ಯ ಪರ್ವತವನ್ನು ಅಗಸ್ತ್ಯರು ಮಲಗಿಸಿದಂತೆ, ಈ ತಪಸ್ವಿಯು ಮಹಾ ಬಲಶಾಲಿಯಾದ ಬ್ರಿಟಿಷ್ ಸಿಂಹವನ್ನು ಗೆಲ್ಲುವನೋ ?' ಎಂದು ಎಷ್ಟೆಷ್ಟೋ ಯೋಚನೆಗಳು ಬಂದುವು. ಮಲ್ಲಿಯು ಅದೆನ್ನೆಲ್ಲಾ ಒಂದೇ ಮಾತಿನಲ್ಲಿ ಉಪಸಂಹಾರ ಮಾಡಿದಳು. ಯುಗಯುಗಾಂತರಗಳಿಂದ ಜನಾಂಗದ ಹೃದಯದಲ್ಲಿ ವಜ್ರವನ್ನು ಹಾಕಿ ಅಗಿಸಿದಂತೆ, ಕುಂದಣ

ದಲ್ಲಿ ಕೆತ್ತಿದಂತೆ, ಬೆರೆತುಹೋಗಿರುವ ರಾಮಧ್ಯಾನವನ್ನು ಆತನ ಬಾಯಿಂದ ಕೇಳಿದಮೇಲೆ ಅವಳಿಗೆ ಆತನ ವಿಜಯದಲ್ಲಿ ಎಳ್ಳಷ್ಟೂ ಸಂಶಯವುಳಿಯಲಿಲ್ಲ.

ಮಲ್ಲಿ ಅಲ್ಲಿಂದ ಬಂದಮೇಲೆ ಅವಳಲ್ಲಿ ಅಪಾರವಾದ ಬದಲಾವಣೆಗಳಾಗಿಹೋಗಿವೆ. ನಾಯಕನ ಶೃಂಗಾರವನ್ನು ಸಹಿಸಿ, ಸಹನೆಯಿಂದ ಸಹಕರಿಸುವದು ಪತಿದೇವನ ಪೂಜೆಯೆಂದು. ದಿನದಿನವೂ ತಾನು ಖಾದಿ ಉಡುವ ಬದಲು ರೇಶಿಮೆಯ ಕೈಮಗ್ಗದ ಸೀರೆ ಉಡುತ್ತಿರುವುದು ರಾಣಿಯ ಮನಸ್ಸಿನ ತೃಪ್ತಿಗಾಗಿ. ನಾಯಕನು ರಾಣಿಯೂ, ತಿಂಗಳು ಎರಡು ತಿಂಗಳಿಗೆ ಜವಳಿ ಅಂಗಡಿಗೆ ಹೋಗುವುದು ವಾಡಿಕೆ. ಹೋದಾಗ ಒಂದಾದರೂ ಕಲಾಪತ್ತು ಸೀರೆ ಇವಳಿಗೆಂದು ತರಬೇಕು. ಈಗ ಮಲ್ಲಿ ತಿಂಗಳು ತಿಂಗಳಿಗೆ ತನ್ನ ತಾಯಿ ಸತ್ತ ದಿವಸ ಎಂದು ಎಂಟು ಹತ್ತು ಸಾಮಾನ್ಯ ಸೀರೆಗಳನ್ನು ತರಿಸಿ ಬಡವರಿಗೆ ಕೊಡುತ್ತಾಳೆ. ಹುಣ್ಣಿಮೆಯ ದಿನ ತಪ್ಪವೆ ಸತ್ಯನಾರಾಯಣ ಪೂಜೆಮಾಡಿ, ರಾಣಿಗೆ ಗಂಡು ಮಗುವಾಗಲೆಂದು ಹರಕೆ ಕಟ್ಟಿ, ಗಂಡನ ಕೈಯ್ಯಿಂದ ಗಂಡು ಮಕ್ಕಳಿಗೆ, ರಾಣಿಯ ಕೈಯಿಂದ ಹೆಣ್ಣು ಮಕ್ಕಳಿಗೆ ವಸ್ತ್ರದಾನ ಮಾಡಿಸುತ್ತಾಳೆ. ಆ ದಾನದಲ್ಲಿ ಅವಳದು ಒಂದೇ ಹಟ. ಪರದೇಶೀ ಬಟ್ಟೆ ಕೂಡದು. ನಾಯಕನು ತನ್ನ ಖರ್ಚಿಗೆಂದು ಕೊಡುವ ಒಂದು ಸಾವಿರ ರೂಪಾಯಿಯಲ್ಲಿ ಗಾಂಧಿಯವರ ಹೆಸರಲ್ಲಿ ಸುಮಾರು ಐನೂರು ರೂಪಾಯಿ ಪಂಚಮರಿಗೆ ದಾನವಾಗುತ್ತದೆ. ಆಗಾಗ ಹೋಗಿ ಆಸ್ಪತ್ರೆಗಳಲ್ಲಿ ಹಣ್ಣು ಹೂವು ಔಷದದ ಖರ್ಚುಗಳನ್ನು ಕೊಟ್ಟು ಬರುತ್ತಾಳೆ. ಎಲ್ಲದಕ್ಕಿಂತಲೂ ಒಂದರಲ್ಲಿ ಆದ ಬದಲಾವಣೆ ಮಾತ್ರ ನಾಯಕನಿಗೂ ಇಷ್ಟವಿಲ್ಲ: ರಾಣಿಗಂತೂ ಒಪ್ಪಿಗೆಯೇ ಇಲ್ಲ: ಅದು ಮಾಂಸ ಭೋಜನ. ಅವಳು ಶುದ್ಧವಾಗಿ ಮಾಂಸವನ್ನು ಬಿಟ್ಟಿದ್ದಾಳೆ. ಮಾಂಸವನ್ನು ಬಿಟ್ಟುದು ಮಾತ್ರವಲ್ಲ: ಅದರ ಸಂಪರ್ಕವೇ ಇಲ್ಲದಂತೆ, ತಾನೇ ಈಗ ಬೇರೆ ಅಡುಗೆ ಮಾಡಿಸುತ್ತಾಳೆ. ಹಾಲು, ಹಣ್ಣು, ಮದ್ಯ, ಯಥೇಚ್ಛವಾಗಿ ಸೇವಿಸುತ್ತಿದ್ದವಳು ಇಂದು ಹಾಲು ಹಣ್ಣು ಬಿಟ್ಟು ಹೆಚ್ಚಾಗಿ ಕರಿದ ತಿಂಡಿಯನ್ನೂ ತಿನ್ನುವುದಿಲ್ಲ.

ನಾಯಕನು ಎಷ್ಟೋ ಸಲ "ಮಲ್ಲೀಗೆ ದೆವ್ವ ಹಿಡೀತು." ಎಂದರೆ ಮಲ್ಲಿ "ಬುದ್ಧಿಯವರ ಮಾತು ಸಟಿಯಲ್ಲ. ಆದರೆ ಆ ದೆವ್ವದ ಹೆಸರು ಗಾಂಧಿ" ಎನ್ನುತ್ತಾಳೆ. ರಾಣಿ "ನಮ್ಮ ಮಲ್ಲಮ್ಮ ಬೈರಾಗಿ ಯಾಗತಾಳೇನೋ ?" ಅಂದರೆ, "ಹೌದು ಬುದ್ಧಿ, ತಮ್ಮ ಮಗನ್ನ ಎತ್ತಿಕೊಂಡು ಮುದ್ದಾಡಿ, ನಮ್ಮವಂಶದ ಬೆಳಕು ಅವನಲ್ಲಿ ಕಂಡ ಮೇಲೆ" ಎನ್ನುತ್ತಾಳೆ.

ಈಗ ಮಲ್ಲಿಗೆ ಆನಂದಮ್ಮನ ಜೊತೆ ಹೆಚ್ಚುಬೇಕಾಗಿದೆ. ಗಂಡನು ಮನೆಯಲ್ಲಿದ್ದಾಗ ಆತನ ಜೊತೆ, ಹೊರಗಿನವರು ಎಂದರೆ ನರಸಿಂಹಯ್ಯ – ಆತನು ದಿನವೂ ಬರುತ್ತಾನೆ. ಆತನ ಜೊತೆಯಲ್ಲಿ ಗಂಡಹೆಂಡಿರೂ ಇಬ್ಬರೂ ಹರಟೆ ಹೊಡೆಯುತ್ತ ಕುಳ್ಳಿರುತ್ತಾರೆ – ದಿನವೂ ಒಂದು ಗಂಟೆಯ ಹೊತ್ತು ಭಗವದ್ಗೀತೆ ಒಂದು ಅರ್ಧ ಗಂಟೆಯ ಹೊತ್ತು ಲೋಕಾಭಿರಾಮದ ಮಾತುಗಳು ಉಳಿದ ಅರ್ಧ ಗಂಟೆ ಗಾಂಧಿಯವರ ವಿಚಾರ.

ನರಸಿಂಹಯ್ಯ ಈಗ ಮನೆಯವರಲ್ಲಿ ಒಬ್ಬ. ಆತನಂತೂ ಹುಚ್ಚಾಗಿ ಹೋಗಿದ್ದಾನೆ. ಈಗ ಒಂದು ದಟ್ಟಿ ಒಂದು ಜುಬ್ಬಾ, ಮೈಮೇಲೊಂದು ಚೌಕ. ಶುಭ್ರವಾಗಿರುವ ಆ ಬಟ್ಟೆಗಳಲ್ಲಿ ಏನೋ ಒಂದು ರಮ್ಯತೆಯಿದೆ. ಸೌಮ್ಯತೆಯಿದೆ. ಶಾಂತಿಯಿದೆ. ಆತನ ಮುಖದ ವರ್ಚಸ್ಸೂ ಬದಲಾಯಿಸಿದೆ. ಮಲ್ಲಿಯಂತೂ ಮೊದಲಿನಿಂದ ಆತನ ಭಕ್ತಳು. ಅವಳು ಇರಲಿ. ರಾಣಿಯಂತೂ ಮಲ್ಲಿಗಿಂತ ಭಕ್ತಳಾಗಿದ್ದಾಳೆ. 'ಅವರು ಬಿಡಿ ಬುದ್ಧಿ. ಛೋಟಾ ಗಾಂಧಿಯಾಗಿದ್ದಾರೆ. ಒಳ್ಳೆ ತಾಯಿ ಹೆತ್ತ ಮಗ. ಅವರು ಕೂತುಕೊಳ್ಳೋ ಸೋಫಾದಲ್ಲಿ ಇನ್ನು ಯಾರಾದರೂ ಕೂತರೆ ನಮಗೆ ಕೋಪ ಬರುತ್ತದೆ' ಎನ್ನುತ್ತಾಳೆ.

ನಾಯಕನೂ ತನಗೆ ತಿಳಿಯದಂತೆಯೇ ಬದಲಾವಣೆಯಾಗುತ್ತಿದ್ದಾನೆ. ಮೊದಲಿನ ಹಾಗೆ ಸೂಟು ಹಾಕುವುದು ಅಪರೂಪವಾಗುತ್ತಿದೆ. ನಾಲ್ಕು ಬೆರಳಿನ ಕಲಾಪತ್ತಿನ ಅಂಚಿನ ಪಂಚೆ ಉಡುತ್ತಿದ್ದವನು, ಈಗ ಯಾವುದಾದರೇನು ಮಹಾ ! ಎನ್ನುತ್ತಾನೆ. ಮನೆಯಿಂದ ಹೊರಗೆಯೂ ಯಾರಾದರೂ ಗಾಂಧಿಯವರ ವಿಚಾರದಲ್ಲಿ ಸಣ್ಣ

ಮಾತು ಆಡಿದರೆ ರೇಗಿಬೀಳುತ್ತಾನೆ.

ಒಂದು ದಿನ ಕ್ಲಬ್ಬಿನಲ್ಲಿ ಯಾರೋ ಬ್ರಿಟಿಷರ ಸೂಪರ್ ಭಕ್ತರು ಗಾಂಧಿಯನ್ನು "ಅರೆಬೆತ್ತಲೆ ಫಕೀರ" ಎಂದರು. ನಾಯಕನು ಇಸ್ಪೀಟ್ ಆಡುತ್ತಿದ್ದವನು ಎದ್ದು ಕೈಯಲ್ಲಿದ್ದ ಇಸ್ಪೀಟ್ ಹರಿದು ಅವನ ತಲೆಯ ಮೇಲೆ ಹಾಕಿ "ಎಚ್ಚರಿಕೆ, ಮಿಕ್ಕ ದೇಶಗಳಲ್ಲಿ ಫಕೀರರು ಭಿಕಾರಿಗಳು. ಇಂಡಿಯದಲ್ಲಿ ಕಿರೀಟಧಾರಿಗಳು ಫಕೀರರ ಗುಲಾಮರು. ತಿಲಕ್ ಫಂಡಿಗಾಗಿ ಕೋಟಿ ರೂಪಾಯಿ ಕೇಳಿದ ಕೂಡಲೇ ದೇಶ ಕೊಟ್ಟಿತು. ಅಂಥವನು ಫಕೀರ! ಅವನಿಗೆ ಇಲ್ಲ. ನಿಮಗೆ ಇದೆ. ನಿಮ್ಮಂಥವರು ಸಾವಿರ ಜನರನ್ನು ಮೇಯಿಸುವ ಯೋಗ್ಯತೆಯಿದೆ ಆತನಿಗೆ. ವೈರಾಗ್ಯಶೇಖರನಾದ ಪರಮೇಶ್ವರ ಬೂದಿ ಬೊಳಿದುಕೊಂಡು, ಚರ್ಮತೊಟ್ಟು, ಸ್ಮಶಾನದಲ್ಲಿ ಇರುವಹಾಗೆ ಆತ ಎಲ್ಲ ಬೇಡವೆಂದು ಕೊಂಡಿದ್ದಾನೆ. ನಿಮ್ಮಹಾಗೆ ಬ್ರಿಟಿಷರ ಬೂಟ್ಸ್ ಕಾಲು ತೊಳೆದು ಆತ ಬದುಕಬೇಕಾಗಿಲ್ಲ. ಈಗಲೂ ಆತನು ಕಾಂಗ್ರೆಸ್ ಬಿಡುವನೆಂದರೆ, ಉಗ್ರವಾದವನ್ನು ಬಿಟ್ಟು ಸೌಮ್ಯನಾದರೆ, ಬ್ರಿಟಿಷ್ ಸರಕಾರ ಆತನಿಗೆ ತಿಂಗಳಿಗೊಂದುಸಾವಿರ ಪೌಂಡ್ ಕೊಟ್ಟೀತು. ಮರಿಯಬೇಡಿ ಸರ್! ಆತನೂ ಕೈಸರ್ ಇ ಹಿಂದ್ ಮೆಡಲ್ ತೆಗೆದುಕೊಂಡು ಇದ್ದವನು. ನಿಮ್ಮಹಾಗೆ ಹೊಟ್ಟೆಗಿಲ್ಲದೆ ನೌಕರಿ ಹಿಡಿದವನಲ್ಲ" ಎಂದು ಝಾಡಿಸಿ ಬಿಟ್ಟ. ಅಷ್ಟೇ ಅಲ್ಲ. ಕ್ಲಬ್ಬಿನ ಸೆಕ್ರೆಟರಿಯನ್ನು ಕರೆದು "ಇವರು ಅಪಾಲಜಿ ಕೊಡಬೇಕು. ಇನ್ನು ಮುಂದೆ ಈ ಕ್ಲಬ್ಬಿನ ವಾತಾವರಣ ದಲ್ಲಿ ಆ ಮಹಾತ್ಮರನ್ನು ಯಾರೂ ಕೀಳು ನುಡಿಯಕೂಡದು. ಹಾಗೆಂದು ನೀವು ನನಗೆ ಭರವಸೆ ಕೊಟ್ಟರೆ, ನಾನು ಮೆಂಬರಾಗಿರುತ್ತೇನೆ. ಇಲ್ಲ ದಿದ್ದರೆ ಇದೋ ಹೊರಟೆ. ನೀವು ಜನರಲ್ ಬಾಡಿ ಮೀಟಿಂಗ್ ಕರೆದು ಇದನ್ನು ಗೊತ್ತುಮಾಡಿ" ಎಂದು ಹೊರಟೇಬಿಟ್ಟನು.

ದಾರಿಯಲ್ಲಿ ಕಾರಿನಲ್ಲಿ ಬರುತ್ತಾ, "ಅವನಂದದ್ದೂ ಒಳ್ಳೆಯದೇ ಆಯಿತು. ಅವನು ಅಪಾಲಜಿ ಕೊಟ್ಟರೆ ಅವನಿಗೆ ಒಂದು ನೂರು ರೂಪಾಯಿನ ಸೂಟ್ ಕೊಡೋದು. ಅದೆಲ್ಲ ಇರಲಿ. ಮಲ್ಲೀ, ನರಸಿಂಹಯ್ಯ ಇದನ್ನು ಕೇಳಿದರೆ ಎಷ್ಟು ಸಂತೋಷಪಟ್ಟು

ಕೊಂಡಾರೋ ! ಆದರೆ ನಾನು ಹೇಳಬಾರದು." ಎಂದುಕೊಂಡನು.

ಮನೆಯಲ್ಲಿ ಮಲ್ಲಿಯ ಮುಂದೆ ಹೇಳದಿರಲು ಸಾಧ್ಯವಾಗಲಿಲ್ಲ. ಮಲ್ಲಿ ಇವೊತ್ತು ಮನೆಯ ಮಹಾಲಕ್ಷ್ಮಿ. ಮಿಕ್ಕವರೆಲ್ಲ ಅವಳ ಪ್ರಸಾದಕ್ಕಾಗಿ ಅವಳನ್ನು ಪ್ರದಕ್ಷಿಣೆ ಮಾಡುವ ಭಕ್ತಸಂತತಿ.

ನಾಯಕನು ಕ್ಲಬ್ಬಿನ ಸಂಗತಿಯನ್ನು ಹೇಳಿದಾಗ ಮಲ್ಲಿ ಎದ್ದು ಬಂದು ಗಂಡನನ್ನು ತಬ್ಬಿಕೊಂಡು ಮುತ್ತಿಟ್ಟುಬಿಟ್ಟಳು. ಅವಳ ಮನಸ್ಸು ಕೊರಕೊರನೆ ಕೊರಗಿತು. "ದೇವರೇ, ಇಂಥಾ ಗಂಡನನ್ನು ಬಿಟ್ಟು ಹೇಗೆ ಹೋಗಲಿ ? ಆ ಪುಣ್ಯಾತ್ಮನ ಪಾದಸೇವೆ ಬಿಟ್ಟು ಬದುಕ ಲಾರೆನಲ್ಲಾ !" ಎಂದು ಬಲುನೊಂದಿತು.

ಮರುದಿನ ನರಸಿಂಹಯ್ಯನಿಗೆ ಎಲ್ಲವೂ ಸುಲಾವಣೆಯಾಯಿತು. ಆತನು ಎಲ್ಲವನ್ನೂ ಕೇಳಿ, "ನಾಯಕರೆ, ನಾನು ನಿಮ್ಮ ಮನೆಗೆ ವಾರ ನಡೆದುದು ಸಾರ್ಥಕವಾಯಿತು." ಎಂದು ಎದ್ದು ಹೋಗಿ ಕೈ ಕುಲುಕಿ ದನು. ನಾಯಕನು ಆ ಕೈ ಕುಲುಕಿನಿಂದ ತನ್ನ ಜನ್ಮ ಸಾರ್ಥಕವಾ ಯಿತು ಎಂದುಕೊಂಡನು. ಅರಿಯದೆ ಕಣ್ಣು ನೀರುಕರೆಯಿತು.

## ೪೪

ಮಲ್ಲಿಯು ಏನು ಮಾಡಿದರೂ ಪುಂಸವನವನ್ನು ಒಪ್ಪಳು. "ಹುಂ ! ಆಗಲಿ, ಪುಂಸವನಮಾಡಿ, ಆಮೇಲೆ ನನ್ನ ಗರ್ಭದಲ್ಲಿ ರುವ ಮಗು ಗಂಡಾಗಿಹೋಗಲಿ. ಅದೆಲ್ಲಾ ಕೂಡದು. ನನಗೆ ಹೆಣ್ಣೇ ಆಗಬೇಕು." ಎನ್ನುವಳು.

ನಾಯಕನು "ಶಾಸ್ತ್ರ ಅಂದರೆ ಶಾಸ್ತ್ರ. ಮಾಡಿಕೊಳ್ಳಲಿ ಹೋಗು, ಹೆಣ್ಣೇ ! ನಿನಗೆ ಅದರಿಂದ ನಷ್ಟವೇನು ?" ಎಂದು ಒಂದು ಸಲ ಗದರಿಸಿಕೊಂಡನು.

ಮಲ್ಲಿಯು ಶಾಂತಚಿತ್ತಳಾಗಿ, "ಗಂಡು ದೊಡ್ಡಮ್ಮನವರ

ಹೊಟ್ಟೇಲೇ ಆಗಬೇಕು." ಎಂದಳು. ಅವಳು ಸಮಾಧಾನವಾಗಿ ಹೇಳಿದ ಉತ್ತರ ನಾಯಕನನ್ನು ಸುಮ್ಮನೆ ಇರುವಂತೆ ಮಾಡಿತು.

ಮಲ್ಲಿಗೆ ಆರುತಿಂಗಳು ತುಂಬಿತು : ಸೀಮಂತವಾಯಿತು : ಬಳೆ ತೊಡಿಸುವ ಶಾಸ್ತ್ರವಾಯಿತು. ಮೊಗ್ಗು ಮುಡಿಸಿಯಾಯಿತು : ಆನಂದಮ್ಮನು ಚಿನ್ನದ ಮೊಗ್ಗು ಮಾಡಿಸಿಕೊಟ್ಟಳು. ಆ ದಿನ ರಾತ್ರಿ ಹುರುಕಲು ಚಕ್ಕುಲಿ ಆರತಿಯೂ ಆಯಿತು.

ಮಲ್ಲಿ ತೆಳ್ಳಗಾಗಿದ್ದಾಳೆ. ಅದೇನು ಗರ್ಭದ ಫಲವೋ ? ಅಥವಾ ಅವಳು ಮಾಡುತ್ತಿರುವ ವ್ರತಾದಿಗಳ ಮಹಿಮೆಯೋ ? ಯಾರೂ ಹೇಳಲಾರರು. ವಾರಕ್ಕೊಂದ ಸಲ ಡಾಕ್ಟರು ಬಂದು ನೋಡಿಕೊಂಡು ಹೋಗುತ್ತಾರೆ.

ಏಳನೆಯ ತಿಂಗಳೂ ಕಳೆಯಿತು. ಎಂಟನೆಯ ತಿಂಗಳಲ್ಲಿ ಹಠಾತ್ತಾಗಿ ನೋವು ಕಾಣಿಸಿತು. ಡಾಕ್ಟರ್, ಮಿಡ್‌ವೈಫ್ ಎಲ್ಲರೂ ಬಂದರು. ಒಂದು ದಿನ ನೋವು ತಿಂದು ಮಲ್ಲಿಯು ಹೆತ್ತಳು. ಹೆಣ್ಣು ಮಗು. ನಾಯಕನ ತದ್ರೂಪು. ಉದ್ದುದ್ದವಾದ ಕೈಕಾಲು, ದೊಡ್ಡ ಕಣ್ಣು, ಎತ್ತರವಾದ ಹಣೆ, ಸೊಗಸಾದ ಮೂಗು ಬಾಯಿ, ಮಗು ನಿಜವಾಗಿ ಚೆಲುವಾಗಿದೆ. ಅದು ಅತ್ತರೆ ಅದರ ದನಿ ಕೂಡ ನಾಯಕ ನಂತೆ ! ಎಲ್ಲರಿಗೂ " ಹೆಣ್ಣು ಬೊಮಟೆ. ಬಿಡು " ಎಂದು ತಿರಸ್ಕಾರ ವಾದರೆ, ಮಲ್ಲೀಗೆ ಬಹಳ ಸಂತೋಷ.

ಮಗು ಬಾಣಂತಿ ಆರೋಗ್ಯವಾಗಿದ್ದಾರೆ. ಆದರೆ ಎಂಟನೆಯ ತಿಂಗಳು. ಅದೊಂದೇ ಯೋಚನೆ.

ಜೋಯಿಸರನ್ನು ಕರೆಸಿ ತೋರಿಸಿದರು. ಅವರು 'ಒಂದು ತಿಂಗಳು ಕಳೆಯಲಿ ಆಮೇಲೆ ಜಾತಕ ಬರೆಯೋಣ' ಎಂದರು. ಆದರೆ ಅದನ್ನು ಯಾರೂ ಮಲ್ಲೀಗೆ ಹೇಳಲಿಲ್ಲ.

ಮಲ್ಲಿ ಏಕಾಂತದಲ್ಲಿ ಆ ಮಗುವನ್ನು ಮಗ್ಗುಲಲ್ಲಿ ಮಲಗಿಸಿ ಕೊಳ್ಳುತ್ತಾಳೆ. ಅದು ಮೊಲೆ ಚೀಪುತ್ತದೆ. ಸಣ್ಣ ಬೊಮಟೆ. ಅದನ್ನು ಅಲ್ಲಾಡದ ಹಾಗೆ ಹಿಡಿದುಕೊಳ್ಳುತ್ತಾಳೆ. ಹೆಚ್ಚಡ ಹೊಚ್ಚು ತ್ತಾಳೆ ಅವಳಿಗೆ ಸೋಜಿಗ. ಈ ರಸಫಲವನ್ನು ಪಡೆಯಬೇಕು

ಎಂದೇ ಏನು ಸತಿಯು ಪತಿಯನ್ನು ಹೊಂದುವುದು ? ಈ ಬೊಮ್ಮಟೆ ಹೊಟ್ಟೆಯೊಳಗೆ ಹತ್ತಿಕಾಳಿನಷ್ಟು ಆದಾಗಿನಿಂದ ಮನಸ್ಸಿಗೆ ಅದೆಷ್ಟು ಉತ್ಸಾಹ ? ಬೆಳೆದು ಹೊಟ್ಟೆಯ ತುಂಬ ಆಗಿ, ಎದ್ದು ಓಡಾಡುವುದಕ್ಕೆ ತೊಂದರೆಯಾದಾಗಲೂ ಏನೋ ಹಿತ ! ಹೆಣ್ಣಾಗಿ ಹುಟ್ಟುವುದು ಬ್ರಹ್ಮನು ಹೆಣ್ಣನ್ನು ಹುಟ್ಟಿಸಿರುವುದು ಈ ಒಂದು ಕಾರ್ಯಕ್ಕಾಗಿ ಏನು ? ಈ ಹಣ್ಣು ಕಾಯಲೆಂದು ಭೋಗದಲ್ಲಿ ಆಸೆಯೇ ? ಎಂದು ಏನೇನೋ ಯೋಚನೆಗಳು. ಇವಳು ಶಾಂತವಾಗಿರಲಿ, ಗದ್ದಲವಿಲ್ಲದಿರಲಿ ಎಂದು ಎಲ್ಲರೂ ಇವಳನ್ನು ಪ್ರತ್ಯೇಕವಾಗಿ ಮಲಗಿಸಿದ್ದಾರೆ. ಹೊರಗಿನ ಸದ್ದು ಗದ್ದಲ ಇಲ್ಲದಹಾಗೆ ಆದಂತೆಲ್ಲ ಇವಳ ಯೋಚನೆಗಳು ತಾವೇ ತಾವಾಗುತ್ತವೆ, ' ಮೇಷ್ಟ್ರು ಬಂದು ನೋಡಿದರೆ ಏನು ಹೇಳುವರು ? ಇವಳನ್ನು ಬೆಳೆಸುವುದು ಹೇಗೆ ? ಗಾಂಧಿಯವರ ಆಶ್ರಮಕ್ಕೆ ತಾನು ಹೋದರೆ ಅಲ್ಲಿ ಬೆಟ್ಟ ಹತ್ತುವವನ ಮೂಟೆಯಹಾಗೆ ಇದನ್ನು ಕಟ್ಟಿಕೊಂಡು ಹೋಗುವುದೇ ? ತಾನೂ ಮೇಷ್ಟ್ರ ಹಾಗೆ ಏಕೆ ಇರಬಾರದು ? ಅದು ಸಾಧ್ಯವೆ ? ಮುಂದಕ್ಕಾದರೂ ತಾನೇಕೆ ಹಾಗೆ ಇರಬಾರದು ? ಆದರೆ ಬುದ್ಧಿಯವರು ಒಪ್ಪಿದರೆ ಅಲ್ಲವೆ ತಾನು ಹಾಗೆ ಇರಲು ಸಾಧ್ಯ ? ತನಗೇನೋ ತೃಪ್ತಿಯಾಗಿದೆ. ಆದರೆ, ಅವರು ! ಈ ಜನ್ಮದಲ್ಲಿ ಅವರನ್ನು ತೃಪ್ತಿಗೊಳಿಸುವುದೊಂದೇ ತನ್ನ ಕೆಲಸ !'

' ಹಾಗಾದರೆ ತನಗೆ ಬೇರೆ ಕೆಲಸವೇ ಇಲ್ಲವೆ ? ಗಂಡನ ಮಗ್ಗಲು ಬೊಂಬೆಯಾಗಿ, ಮತ್ತೊಂದು ಬದುಕಿದ ಬೊಂಬೆಯನ್ನು ಎತ್ತಿಕೊಂಡರೆ ಆಯಿತೆ ? ಬೊಂಬೆ, ಬೊಂಬೆ, ಇದಿಷ್ಟೇ ಏನು ಹೆಣ್ಣಿನ ಕೆಲಸ ! ಇನ್ನೇನಿದೆ ? ಪೂರ್ವ ವಯಸ್ಸಿನಲ್ಲಿ ಹೆತ್ತವರ ಕೈಗೊಂಬೆ ! ಯೌವ್ವನದಲ್ಲಿ ಗಂಡಿನ ಕೈಗೊಂಬೆ. ನಡುವಯಸ್ಸಿನಲ್ಲಿ ಬೊಂಬೆಗಳನ್ನಿಟ್ಟುಕೊಂಡು ಆಡುವವರ ಮಾನಿಟರ್ ಬೊಂಬೆ ! ಮುದಿತನದಲ್ಲಿ ಮ್ಯಾನೇಜರ್ ಬೊಂಬೆ ! ಇಷ್ಟೇನೇ ಹೆಣ್ಣಿನ ಜೀವನ ?

' ಆನಂದಮ್ಮನಿಗೆ ಮಕ್ಕಳಿಲ್ಲ. ಅಂದರೆ ಆನಂದಮ್ಮನಿಗೆ ಬೊಂಬೆಯ ಜೀವನವಿಲ್ಲ. ಆಕೆ ಸುಖವಾಗಿದ್ದಾಳೆಯೇ? ಆಕೆಯನ್ನು ತಾನು ನೋಡುತ್ತಿದ್ದಾಳೆ. ಬೆಳಗೆದ್ದು ಧ್ಯಾನಕ್ಕೆ ಕೂರುತ್ತಾಳೆ. ಆ

ಧ್ಯಾನಜೀವನ ಈ ಬೊಂಬೆಯ ಜೀವಕ್ಕಿಂತ ಉತ್ತಮವೇ? ಅದರಿಂದ ಏನಾಗುತ್ತದೆ? ಈ ಹೊಲಮನೆಕಳೆದಮೇಲೆ ಆಕೆಯ ಬಳಿ ಈ ಧ್ಯಾನ ಜೀವನದ ಮಾತು ಎತ್ತಬೇಕು. ಅದಷ್ಟು ರುಚಿ ನೋಡೋಣ. ಈಗ ಈ ಬೊಂಬೆಯನ್ನೆತ್ತಿಕೊಂಡಾಗಲೆಲ್ಲ ಈ ಬೊಮುಟೆಯಿಂದ ಇವರ ಅಪ್ಪನ ನೆನೆಪಾಗುವಂತೆ, ಧ್ಯಾನ ಜೀವನದಲ್ಲಿ ದೇವರ ನೆನೆಪಾಗುವು ದೇನೋ ಅದನ್ನೂ ನೋಡೋಣ.

'ಅಂತೂ ಜೀವನದ ವಿಚಾರ, ಜೀವನದ ಧ್ಯೇಯದ ವಿಚಾರ, ಮೇಷ್ಟ್ರನ್ನು ಕೇಳಬೇಕು. ಗಾಂಧಿಯವರು ಒಂದು ವಿಧವಾಗಿ ಹೇಳಿ ದ್ದಾರೆ. ಗೀತೆಯ ಶ್ಲೋಕಗಳನ್ನು ಮುಂದಿಟ್ಟಿದ್ದಾರೆ. ಅವರ ಜೀವ ನದ ಧ್ಯೇಯ ಅದೇ ಏನು? ತಿಲಕರು ಸ್ವರಾಜ್ಯ ಬಂದರೆ ಮ್ಯಾಥ್ ಮಾಟಿಕ್ಸ್ ಪ್ರೊಫೆಸರ್ ಆಗುತ್ತೇನೆ ಅಂದಿದ್ದರು. ಗಾಂಧಿಯವರು ಏನಾ ಗುವರು?'

ಎಂದು ಏನೇನೋ ಯೋಚನೆ. ಜೊತೆಯಲ್ಲಿ ಮಗಳನ್ನು ಏನು ಮಾಡಬೇಕು? ಎಂದು ಬೇರೆ ಯೋಚನೆ. 'ಹುಟ್ಟಿ ಇನ್ನೂ ಎರಡು ದಿನ ಇಲ್ಲ. ಈಗೇಕೆ ಆ ಯೋಚನೆ?' ಎಂದು ಅದಕ್ಕೆ ಸಮಾಧಾನ.

ಆಗಾಗ ಅವಳಿಗೆ ತನ್ನ ತತ್ವಗಳ ನೆನೆಪಾಗುವುದು. ತಾನು ಕಲಿತ ಕೀರ್ತನೆಗಳ ನೆನೆಪಾಗುವುದು. ಓದಿದ ಪುಸ್ತಕಗಳಲ್ಲಿರುವ ಘನ ವಿಷಯಗಳ ನೆನೆಪಾಗುವುದು. ಅವನ್ನೆಲ್ಲ ವಿಮರ್ಶಿಸಲು ಅವಕಾಶ ಸಿಕ್ಕಿರಲಿಲ್ಲ. ಈ ಹತ್ತು ದಿವಸ ತಾನೇತಾನಾಗಿದ್ದುಕೊಂಡು, ಮನ ಸ್ಸಿಗೆ ಬಂದವನ್ನೆಲ್ಲ ಪುನರಾವೃತ್ತಿ ಮಾಡುತ್ತಿದ್ದಾಳೆ. ಯಾವ ತತ್ವ ನೆನೆಪಾದರೂ ಅದರಲ್ಲಿ ದೇಹ ಶಾಶ್ವತವಲ್ಲ: ಸಂಸಾರ ದುಃಖ. ಇದು ಬಿಡು, ಆತ್ಮನನ್ನು ಹಿಡಿ ಎನ್ನುವ ಅರ್ಥ. ಅವಳಿಗೆ ಅದೊಂದೂ ಅರ್ಥ ವಾಗುವುದಿಲ್ಲ. ನಾಯಕನಂತಹ ಗಂಡ ಇರುವಾಗ ಸಂಸಾರ ದುಃಖ ವೆಂದರೇನು? ಏಕೆ ಇದನ್ನು ಬಿಡಬೇಕು? ಆತ್ಮವನ್ನು ಅವಳು ತಿಳಿ ಯಳು. ಅದನ್ನು ಹಿಡಿದು ಆಗಬೇಕೇನು?

ಕೀರ್ತನೆಗಳು ಅರ್ಥವಾಗುತ್ತವೆ. ಅವೆಲ್ಲ ತನಗೆ ಬೇಕಾದ ದೇವರನ್ನು ಕುರಿತು ಭಕ್ತನಾಡಿಕೊಂಡ ಮಾತುಗಳು. ಅವಳು ದೇವರ

ಪೂಜೆ ಮಾಡುತ್ತಾಳೆ. ಇದುವರೆಗೆ ದೇವರು ಬೇಕು ಬೇಡವೆನ್ನುವಂತಿತ್ತು. ಆದರೆ, ಅಪರ್ಣಿಶಿ ದೇವರನ್ನು ಚಿಂತಿಸುವುದಕ್ಕೆ ಅವಳಿಗೆ ಪುರಸತ್ತಿಲ್ಲ.

ಇನ್ನು ದೊಡ್ಡವರ ಮಾತು. ಅವಳಿಗೆ ಅವರ ದೊಡ್ಡತನದಲ್ಲಿ ನಂಬಿಕೆಯಿದೆ: ಆದರೆ, ಅವರು ಹೇಳಿರುವುದರಲ್ಲಿ ಅಷ್ಟು ನಂಬಿಕೆಯಿಲ್ಲ: ಅವರು ತನ್ನ ಹಾಗೆ ಇದ್ದರೆ ಆ ಮಾತು ಹೇಳುತ್ತಿದ್ದರೇನು? ಸುಖ ಕಂಡಿದ್ದರೆ, ಅದರಲ್ಲಿ ಮುಳುಗಿದ್ದರೆ ಅವರು ಆ ಮಾತು ಹೇಳುತ್ತಿದ್ದ ರೇನು? ಅವಳಿಗೆ ಅದು ಸಂಶಯ.

ಹೀಗೆಯೇ ಹತ್ತುದಿನ ಕಳೆಯಿತು. ದಿನವೂ ನಾಯಕನು ಬಂದು "ಏನು ಮಗಳು ಏನಂತಾಳೆ?" ಎನ್ನುವನು. "ತಾವು ಎತ್ತಿ ಕೊಳ್ಳಬೇಕಂತೆ?" ಎನ್ನುತ್ತಾಳೆ. ತಾವು ಏನಂತೀರಿ ಎಂದರೆ, "ಎಷ್ಟು ಬೇಗ ಈ ಹತ್ತುದಿನ ಕಳೆದೀತೋ?" ಎನ್ನುತ್ತಾಳೆ. ನಾಯಕನಿಗೆ ಆ ಮಾತು ಕೇಳಿ ಎಷ್ಟೋ ಸಂತೋಷ. ಅವನಿಗೆ ಆ ಮಾತಿನಲ್ಲಿ ಏನೇನೋ ಅರ್ಥವಾಗುತ್ತದೆ.

ಒಂದು ಮಾತಿಗೆ ಹತ್ತು ಅರ್ಥ ಮಾಡುವುದೇ ರಸಿಕತನ. ಒಂದು ಮಾತಿಗೆ ಒಂದೇ ಅರ್ಥ ಎನ್ನುವುದು ಶಾಸ್ತ್ರದಲ್ಲಿ ಇರಬಹುದು. ಆದರೆ ಜೀವನದಲ್ಲಿ ಯಾವ ಮಾತೇ ಆಗಲಿ, ಅದು ಅರ್ಥ ಮಾಡುವವರ ವಶ. ಹಾಗಿಲ್ಲದಿದ್ದರೆ, ಉಪನಿಷತ್ತಿನಲ್ಲಿ ಆ ಕಥೆಯೇಕೆ ಬರಬೇಕು? ದೇವತೆಗಳು, ದಾನವರು, ಮಾನವರು, ಮೂವರಿಗೂ ಪ್ರಜಾಪತಿಯು "ದಂ" ಎಂದು ಒಂದೇ ಉಪದೇಶಮಾಡಿದನಂತೆ. ಅದು ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ಅರ್ಥವಾಯಿತಂತೆ.

ಈ ಲೋಕವೂ ಹಾಗೆಯೇ ಇರಬೇಕು. ಎಲ್ಲರಿಗೂ ಒಂದೇ ಗುರಿ ಎನ್ನುವುದು ಆಡುವುದಕ್ಕೆ ಸೊಗಸು. ಆದರೆ ಭಿನ್ನರುಚಿಗಳಾದ ಮಾನವರಿಗೆ ತಲೆಗೆಲ್ಲಾ ಒಂದು ಮಂತ್ರ ಎನ್ನುವುದಕ್ಕಿಂತ, ತಲೆಗೊಂದು ಮಂತ್ರ ಎಂಬುದೇ ಸರಿಯಿರಬೇಕು.

ಅಂತೂ ಹತ್ತುದಿನ ಕಳೆಯಿತು. ಮಂಗಳಸ್ನಾನವಾಯಿತು. ಮಗುವಿಗೆ ನಾಮಕರಣವಾಯಿತು.

ಹದಿಮೂರನೆಯದಿನ ಮಗುವಿಗೆ ಸಣ್ಣಗೆ ಜ್ವರಬಂತು. ಮಲ್ಲೀಗೆ

ಏನೋ ಗಾಬರಿ. ಡಾಕ್ಟರು ಬಂದು ನೋಡಿದರು. ಏನೂ ದಿಗಿಲಿಲ್ಲ ಎಂದು ನಂಬಿಕೆ ಕೊಟ್ಟರು. ಅವರು ನಂಬಿಕೆ ಕೊಟ್ಟರು ಎಂದೇ ಏನೋ ಜ್ವರ ರೇಗಿತು. ಮೂರು ದಿನ ಬಿಡದೆ ಜ್ವರಕಾಯುತ್ತಿದೆ. ಮಲ್ಲೀಗೆ ನಿದ್ದೆಯಿಲ್ಲ. ನರ್ಸು ಬಂದಿದ್ದಾಳೆ. ಆಗಾಗ ಆನಂದಮ್ಮ ನೋಡಿಕೊಂಡು ಹೋಗುತ್ತಾರೆ. ಇತರರು ಬೇಡವೆನ್ನುತ್ತಿದ್ದರೂ ಮಲ್ಲಿ ಮಗುವಿನ ಮಗ್ಗುಲು ಬಿಟ್ಟು ಕದಲುವುದಿಲ್ಲ. ಅಲ್ಲೇ ಅವಳಿಗೆ ಊಟವಾಗುತ್ತದೆ.

ರಾಣಿಯಂತೂ "ಹಸೀಮೈ ನೋಡಿ ಆನಂದಮ್ಮನವರೆ? ಇವಳಿಗೆ ನಿದ್ದೆ ಕೆಟ್ಟರೆ ಅದೀತೆ?" ಏನ್ನುತ್ತಾಳೆ. ಆದರೂ ಇದುವರೆಗೂ ಮಲ್ಲಿ ರಾಣಿಯ ಮಾತು ಮೀರದವಳು ಈಗ ಲಕ್ಷ್ಯವೇ ಕೊಡುವುದಿಲ್ಲ. ಆ ಮಗುವಿನಲ್ಲಿ ತನ್ನ ಪಂಚ ಪ್ರಾಣವೂ ನೆಲಸಿರುವಂತೆ ವರ್ತಿಸುತ್ತಿದ್ದಾಳೆ.

ಅವಳಿಗೇ ಆಶ್ಚರ್ಯ ಇದುವರೆಗೆ ಇಲ್ಲದ ಹೊಸದೊಂದು ವಿಶ್ವಾಸ ಕೇಂದ್ರ ಮೊಳೆತಿದೆ. ಅದು ಕ್ಷಣೇಕ್ಷಣೇ ಬೆಳೆಯುತ್ತಿದೆ. ಅದು ಕ್ರಮ ಕ್ರಮವಾಗಿ ಅವಳ ಜೀವನವನ್ನೆಲ್ಲಾ ವ್ಯಾಪಿಸುವುದೋ? ನಾಯಕನಂತಹ ಗಂಡನನ್ನು, ರಾಣಿಯಂತಹ ಅಕ್ಕನನ್ನು, ಆನಂದಮ್ಮನಂತಹ ಹಿರಿಯಳನ್ನು. ಮೇಷ್ಟರನ್ನು, ಕೊನೆಗೆ ತನ್ನ ಗುರುವಿನಂತಿರುವ ಗಾಂಧಿಯವರನ್ನು, ಎಲ್ಲರನ್ನೂ ಮರೆಸುವುದೋ?

ಏನೋ? ಎಂತೋ? ಅಂತು ಅವಳು ಮಗುವನ್ನು ಒಂದು ಗಳಿಗೆ ಬಿಟ್ಟಿರಲಾರಳು. ಥರ್ಮಾಮೀಟರ್ ಹಾಕಿ ನೋಡುತ್ತಾಳೆ. ಅದೂ ಗಳಿಗೆ ಒಂದೊಂದು ಸಲ. ಜ್ವರ ಒಂದೇ ಸಮನಾಗಿದೆ. ಅವಳಿಗೆ ಥರ್ಮಾಮೀಟರ್ ಸರಿಯಿಲ್ಲವೇನೋ ಎನ್ನಿಸಿತು. ಒಂದು ಡಜ಼ನ್ ಥರ್ಮಾಮೀಟರ್‌ಗಳನ್ನು ತರಿಸಿದಳು. ಅವೂ ಒಂದೇ ರೀಡಿಂಗ್ ಕೊಟ್ಟುವು.

ಜ್ವರ ಬಂದು ಇಂದಿಗೆ ಐದುದಿನ. ಡಾಕ್ಟರು ಬೆಳಗಿನಿಂದ ಮೂರು ಸಲ ಬಂದಿದ್ದಾರೆ. ತಾಯಿ ಹಾಲು ಕೂಡದು ಎಂದಿದ್ದಾರೆ. ಅವಳಿಗೆ ಹಾಲುಕಟ್ಟಿ ಬೇರೆ ಬಾಧೆಯಾಗಿದೆ.

ನರ್ಸ್ ಮಗುವನ್ನು ಸರ್ಪಕಾವಲಾಗಿ ಕಾಯುತ್ತಿದ್ದಾಳೆ.

ಆ ದಿನ ಮಗುವಿಗೆ ಬಹಳ ಕಷ್ಟವಾಗಿದೆ.

ಡಾಕ್ಟರ್ ಪಟ್ಟ ಕೆಷ್ಟವೆಲ್ಲಾ ವ್ಯರ್ಥವಾದಂತಿದೆ.

ಆರನೆಯದಿನ. ಬೆಳಗಿನಝಾವ, ನಾಲ್ಕು ದಿನದಿಂದ ನಿದ್ದೆ ಕಾಣದೆ, ಕಣ್ಣು ಮುಚ್ಚದೆ, ಕಾದುಕುಳಿತಿದ್ದ ಮಲ್ಲೀಗೆ ಎಲ್ಲೋ ಸಣ್ಣಗೆ ನಿದ್ದೆ ಬಂದಂತಿದೆ. ಆ ನಿದ್ದೆಯಲ್ಲಿ ಕನಸು. ಯಾರೋಬಂದು ಮಗುವನ್ನು ಮಲ್ಲಿಯ ಕೈಯಿಂದ ಕಿತ್ತುಕೊಂಡು ಹೋದ ಹಾಗಾಗುತ್ತದೆ. ಹಾ! ಎಂದು ಕೂಗಿಕೊಂಡು ಏಳುತ್ತಾಳೆ.

ಇನ್ನೊಂದು ಗಳಿಗೆ. ಮಲ್ಲಿಯು ಅಯ್ಯೋ ಎಂದು ಅತ್ತಳು. ಎಲ್ಲರೂ ಬಂದರು.

೪೫

ಮೈಸೂರಿನ ರಾಜಕೀಯ ವಾತಾವರಣದ ಹವಾಮಾನ ಬದಲಾಯಿಸಿದೆ. ಮಿಲ್ಲರ್‌ಕಮಿಟಿಯ ಮೊದಲನೆಯ ಫಲವಾಗಿ ಬ್ರಾಹ್ಮಣೇತರರ ಕೂಗು ಭದ್ರವಾಗಿದೆ. ಆಲ್ ಇಂಡಿಯ ಕೌನ್ಸಿಲ್‌ಗಳಲ್ಲಿ ಮೆಂಬರುಗಳು ಸರ್ಕಾರವನ್ನು ಆಕ್ಷೇಪಿಸುವ ಭಾಷಣಗಳ ಬಿರುಸು ಇಲ್ಲಿಯೂ ಅಸೆಂಬ್ಲಿ ಕೌನ್ಸಿಲ್‌ಗಳಲ್ಲಿ ಕಾಣಿಸುತ್ತಿದೆ. ವಿಚಾರಪರರು, 'ಬುದ್ಧಿವಂತರೆಲ್ಲಾ ಸಿವಿಲ್ ಸರ್ವಿಸ್‌ನಲ್ಲಿ ಸೇರಿಹೋಗುತ್ತಾರೆ. ಉಳಿದವರು ಸಾರ್ವಜನಿಕ ಪಂಕ್ತಿಗಳಲ್ಲಿ ಇದ್ದಾರೆ. ಎಂದಿಗಿದು ಸರಿಹೋದೀತು?' ಎಂದು ಯೋಚಿಸುತ್ತಿದ್ದಾರೆ. ಹೊಸ ರಕ್ತ ಬರುತ್ತಿದೆ. ಆದರೆ ಹೊಸ ಉತ್ಸಾಹ ಪ್ರೋತ್ಸಾಹಗಳು ಕಂಡಿಲ್ಲ. ಏನು ಮಾಡಿದರೂ ಸರಿ. ಸರಕಾರವನ್ನು ಆಕ್ಷೇಪಿಸುತ್ತಿದ್ದರೆ ಸರಿ ಎಂಬ ಭಾವ ಕಾಣುತ್ತಿದೆ. ಆ ಪ್ರತಿಭಟನಕಾರರಲ್ಲಿ ಅಲ್ಲಲ್ಲಿ ಒಂದೊಂದು ಬಿಳಿಯ ಟೋಪಿ ಕಾಣಿಸುತ್ತಿದೆ. ಹಿಂದಿನ ದಿವಾನರು ಯಾರೂ

ಕಾಣದ ಪ್ರತಿಭಟನ ಈ ಹೊಸದಿವಾನರ ಜೊತೆಯಲ್ಲಿ ಬಂದಿದೆ. ಅದನ್ನು ತುಳಿಯಲು ಅವರೂ ತಮ್ಮ ಭಕ್ತರನ್ನು ಭಟ್ಟಂಗಿಗಳನ್ನು ಹುಟ್ಟಿಹಾಕಿದ್ದಾರೆ.

ನಾಯಕನಿಗೆ ಈ ರಾಜಕೀಯ ಬೇಕಿಲ್ಲ. 'ಮಿಣಿಕೆ ಕಾಯಿ ಬಿರಿಯುವಂತೆ ಸಾರ್ವಜನಿಕ ಜೀವನ ಬಿರಿದಿದೆ. ಹಾಲು ಒಡೆಯುವಂತೆ ಒಡೆದಿದೆ. ಇನ್ನೂ ಇದೇ ಭಾವ ಬಲಿತರೆ, ಸಂಸಾರಗಳೂ ಒಡೆಯುವುದೋ ಏನೋ?' ಎಂದು ಒಮ್ಮೊಮ್ಮೆ ಪ್ರಕಟವಾಗಿ ಹೇಳುತ್ತಾನೆ. ಎಲ್ಲೆಲ್ಲಿಯೂ ಗುಂಪುಗುಂಪುಗಳು. ನಾಯಕನಿಲ್ಲದ ಗುಂಪುಗಳು: ಹಿಂಬಾಲಕರಿಲ್ಲದ ನಾಯಕರು ಹೆಚ್ಚುತ್ತಿದ್ದಾರೆ. ಕೂಲಿಯ ಸಮಸ್ಯೆ ಬಿಗಡಾಯಿಸಿದೆ.

ಅವನ ಮನೆಯಲ್ಲಿಯೂ ವಾತಾವರಣ ಮೊದಲಿನಂತಿಲ್ಲ. ಮಲ್ಲಿಗೆ ಮಗು ಹೋದುದೇ ಕಾರಣವಾಗಿ ವೈರಾಗ್ಯ ಹೆಚ್ಚಿದೆ. ಗಂಡಹೆಂಡಿರ ಸಂಬಂಧದಲ್ಲಿ ಎಳ್ಳಷ್ಟೂ ಒಗರಿಲ್ಲ. ಆದರೆ ಆ ಮೊದಲಿನ ಉತ್ಸಾಹವಿಲ್ಲ. ಮೊದಲು ಬೆಟ್ಟದ ನದಿಯಂತೆ ಉತ್ಸಾಹದಿಂದ ಕುಣಿದುಬುರುತ್ತಿದ್ದವಳು ಇಂದು ಬಯಲುನಾಡಿನ ನದಿಯಹಾಗೆ ಗಂಭೀರವಾಗಿದ್ದಾಳೆ. ನಾಯಕನು ಏನೋ ಬೆಚ್ಚುತ್ತಾನೆ ಅವಳ ಬಳಿ ಬರಲು.

ಅವಳ ಸೌಂದರ್ಯ ಬಹುಮನೋಹರವಾಗಿದೆ. ಸೊಂಪಾಗಿ ಬೆಳೆದಿರುವ ಬಾಳೆಯಮರದಂತೆ ನಯನಮನೋಹರಳಾಗಿದ್ದಾಳೆ. ಮುಖದಲ್ಲಿ ಸೌಂದರ್ಯದ ಜೊತೆಗೆ ಏನೋ ಒಂದು ಅಪೂರ್ವವಾದ ಶಾಂತಿಯಿದೆ. ತುಳುಕುತ್ತಿದ್ದ ಶೃಂಗಾರರಸ, ಸೊಬಗಿನ ಸೋನೆ, ಇಂದು ಇನ್ನು ಯಾವುದೋ ಒಂದುರೀತಿಯಲ್ಲಿ ಪಕ್ವವಾಗಿ ಹಿರಿಯತನದ ಸಿರಿಯನ್ನು ತಳೆದಿದೆ. ಅಂಗಾಂಗಗಳಲ್ಲಿ ಒಂದು ತುಂಬು ಬಂದು ಭೋಗಿಯ ಭೋಗಸಾಮ್ರಾಜ್ಯಮಂದಿರದ ಸ್ವರ್ಣಕಲಶವೋ ಎಂಬಂತೆ ಕಾಣುತ್ತಿದ್ದರೂ, ಅಲ್ಲಿ ಯಾವುದೋ ಪವಿತ್ರತೆಯಿದೆ. ತುಂಬಿದ ಮಡುವಿನ ತಿಳಿನೀರು ಕಂಡು ಈಜಬೇಕೆಂದರೂ ಧುಡುಮ್ಮನೆ ಧುಮುಕಲು ಅವಕಾಶವಿಲ್ಲ ಎಂಬ ಭಾವ ಬಂದಾಗ ಆಗುವಂತೆ ಇದೆ. ಮಲ್ಲಿ ಈಗ

ಸಂಸ್ಕೃತ ಕವಿಗಳ ಮಾತಿನಲ್ಲಿ 'ಮಳೆಯಲ್ಲಿ ನೆಂದು ಪರಿಶುದ್ಧವಾಗಿ ರುವ ನವಮಲ್ಲಿಕಾಲತೆ.' ಅವಳಿಗೂ ಸುಮಾರು ಮುವ್ವತ್ತು ವರುಷ. ಸೌಂದರ್ಯರಸ ಪೂರ್ಣವಾಗಿ, ಬಿಮ್ಮನೆ ಬೀಗಿರುವ ರಸಪುರಿಮಾವಿನ ಹಣ್ಣಿನಹಾಗಿದ್ದಾಳೆ: ಆದರೆ ರೇಗಿಸುವ ಸೌಂದರ್ಯವಲ್ಲ ಅವಳದು. ಕಾಮದ ಕಡೆಗೆ ತಳ್ಳಿ, ಚೇಷ್ಟೆಯನ್ನು ಮಾಡಿಸುವ ರಜೋಗುಣದ ಸೌಂದರ್ಯವಲ್ಲ. ಏನೋ ಸಾತ್ವಿಕ ಕಳೆ. ಏನೋ ಮಾತೃಭಾವ: ಅಥವಾ ಸೋದರೀಭಾವ. ನಾಯಕನಿಗೆ ಅವಳು ತನ್ನ ಸ್ವತ್ತು ಆದರೂ ಅವಳನ್ನು ಮೊದಲಿನಂತೆ ಯಥೇಚ್ಛವಾಗಿ ಉಪಯೋಗಿಸಲಾರ.

ದೇಹವಿಷ್ಟು ಭವ್ಯವಾಗಿ ಸೌಂದರ್ಯದ ಖನಿಯಾಗಿದ್ದರೂ ಅದೇಕೆ ಕಾಮವನ್ನು ಉದ್ಬೋಧಿಸುವುದಿಲ್ಲ? ಅದೇ ಸೌಂದರ್ಯದ ಗುಟ್ಟು. ಅದರಲ್ಲಿಯೂ ಸ್ತ್ರೀಸೌಂದರ್ಯವು ಮನೋಭಾವದ ಕನ್ನಡಿ. ಅಲ್ಲಿ ಮನಸ್ಸು ಚಂಚಲವಾಗಿ, ತಾನು ಚೆಲುವೆಯೆಂಬ, ಸೌಂದರ್ಯವತಿಯೆಂಬ ಗರ್ವಗಂಧವು ಬಲಿತರೆ, ಆಗ ಪುರುಷಭ್ರಮರಗಳಲ್ಲಿ ಗತಿ. ಕಾಮ ಕುಸುಮವು ಅರಳುವುದು ಮೊದಲು ಸ್ತ್ರೀ ಹೃದಯದಲ್ಲಿ. ಚಾಪಲ್ಯವು ನೀರಿನ ಸಹಜವಾದ ದ್ರವತ್ವದಿಂದ ಅಲೆಗಳೇಳುವಂತೆ ಸ್ತ್ರೀಯ ಅಂತಃ ಕರಣದಲ್ಲಿ ತರಂಗತರಂಗವಾಗಿ ರೇಗಿದಾಗ, ಕತ್ತಲಲ್ಲಿ ತನ್ನ ಪಾಡಿಗೆ ತಾನು ಹೋಗುತ್ತಿರುವ ಹಾದಿಕಾರನನ್ನು ಎಲ್ಲಿಯೋ ಇರುವ ಪುಷ್ಪ ಸೌರಭವು ಬಂದು ತಾಕಿ ಮೂಗಿಗೆ ದಾರಹಾಕಿ ಎಳೆಯುವಂತೆ ಎಳೆಯು ವುದು. ಕಾಮದಲ್ಲಿ ಗಂಡು ಕ್ರೀಡಾವಸ್ತು: ಹೆಣ್ಣು ಕ್ರಿಯಾವಸ್ತು. ಧರ್ಮದಲ್ಲಿ ಹೆಣ್ಣು ಕ್ರೀಡಾವಸ್ತು: ಗಂಡು ಕ್ರಿಯಾವಸ್ತು. ಒಂದರಲ್ಲಿ ಗಂಡಿಗೆ ಅಸ್ತಿತ್ವವಿರುವುದು ಹೆಣ್ಣಿಗೆ ದಾಸನಾಗುವುದಕ್ಕೆ. ಹಾಗೆ ದಾಸನಾಗಿ ಹೆಣ್ಣೆಂಬ ಪ್ರವಾಹದಲ್ಲಿ ಕೊಚ್ಚಿಹೋದರೆ ಆಗ ಗಂಡಿಗೆ ಸೌಖ್ಯ-ಧರ್ಮದಲ್ಲಿ ತದ್ವಿರುದ್ಧ. ನಾಯಕನೀಸೂಕ್ಷ್ಮವನ್ನರಿತಿಲ್ಲ: ಆದರೂ ಅವನಿಗೆ ಮಲ್ಲಿಯಲ್ಲಿ ಗೌರವ ಆದರ ಬೆಳೆದಿದೆ.

ರಾಣಿಗೆ ಆಶ್ಚರ್ಯ: 'ತಾನು ಮಲ್ಲಿಗಿಂತ ಸುಮಾರು ಇಪ್ಪತ್ತು ವರ್ಷ ದೊಡ್ಡವಳು. ತನಗೆ ಶಾಂತಿ ಬಂದಿಲ್ಲ. ನಾಯಕನು ಬಂದ ನೆಂದರೆ, ಆತನಮೇಲಿನ ಗಾಳಿ ತನ್ನತ್ತ ಸರಿದರೆ, ತಾನು ಚಂಚಲಳಾ

ಗುತ್ತಾಳೆ. ಆರಾಧಿಸಿ, ಆರಾದನವನ್ನು ಪಡೆಯಬೇಕೆಂಬ ಭಾವ ಕೂಡಲೇ ತಾನೇತಾನಾಗುತ್ತದೆ. ಆದರೆ ಮಲ್ಲಿಯಲ್ಲಿ ಈ ಸ್ಥೈರ್ಯವೆಲ್ಲಿಂದ ಬಂತು ? ಕಬ್ಬಿನ ಹಾಲು ಕಾದು ಬೆಲ್ಲವಾಗಿ, ಶುದ್ಧವಾಗಿ, ಉಜ್ಜಿದರೆ ಆಗುವ ಸಕ್ಕರೆಯಂತೆ ಆಗಿದ್ದಾಳೆ. ಅವಳೆಂತು ಹಾಗಾದಳು ?' ಎಂದು ಎಷ್ಟೋ ಯೋಚಿಸುತ್ತಾಳೆ. 'ತಾಯಿತನವು ಕೊಟ್ಟ ಭಾಗ್ಯವೇನು ? ಒಂದು ಮಗುವಾದರೆ ಹೆಣ್ಣು ಹೀಗೆ ತಾಯಿತನವನ್ನು ಪಡೆಯುವಳೇನು? ಎನ್ನಿಸುತ್ತದೆ ಹಲವಾರು ಮಕ್ಕಳನ್ನು ಪಡೆದೂ ತಾಯತನವನ್ನು ಪಡೆಯ ದವರನ್ನು ಅವಳು ಬಲ್ಲಳು. ಅದರಿಂದ ಆ ಹೆಣ್ಣು ಈ ತಾಯಿಯನ್ನು ಅರಿಯಳು

ಮಲ್ಲಿಗೂ ಒಮ್ಮೊಮ್ಮೆ ಆಶ್ಚರ್ಯವಾಗುತ್ತದೆ. ಮನಸ್ಸಿನಲ್ಲಿ ಏನೂ ಬೇಕಾಗದೆ ಇರುವುದನ್ನು ಕಂಡು ಅವಳಿಗೇ ನಗು. ಕಾಮಕಲಾ ನಿಪುಣೆಯಾಗಿ ಆ ಮಹಾ ರಸಿಕರಾಜನಿಂದ ಮೆಚ್ಚುಗೆಯನ್ನು ಪಡೆ ದವಳು ಇಂದು ಶಾಂತಳಾಗಿದ್ದಾಳೆ. ಯಾವ ಯಾವಭಾವದಲ್ಲಿ ಯಾವ ಯಾವ ಚೇಷ್ಟೆಯು ಸೊಗಸು ಎಂಬುದನ್ನು ಪೂರ್ಣವಾಗಿಬಲ್ಲ ಮನೋ ಗ್ರಾಹಿಣಿಯಿಂದು, ಹರಿಯುವನೀರಿಗಿಂತ ಹೆಚ್ಚು ಚಪಲಳಾಗಿದ್ದವಳು, ಪರಿಮಳವನ್ನು ಹಾರಿಸಿಕೊಂಡು ಹೋಗುವ ಸುಳಿಗಾಳಿಗಿಂತ ಸೂಕ್ಷ್ಮವಾಗಿದ್ದವಳು, ಇಂದು ನದಿಯ ನಡುವಿನ ಬಂಡೆಯಾಗಿದ್ದಾಳೆ. ಅವಳಿಗೇ ತಿಳಿಯದು ತನ್ನ ಭೋಗವೃತ್ತಿ ಏನಾಯಿತು ಎಂಬುದು. ಬರುಬರುತ್ತ ರಾಣಿಯ ಹಿರಿತನ ಮಲ್ಲಿಯ ಪಾಲಾಗಿದೆ.

ಅವಳಿಗೆ. ಈಗ ಧ್ಯಾನಪ್ರವೃತ್ತಿ. ಒಂದು ದಿನ ಅವಳು ಬೇರೆ ಮಲಗುವಂತಿಲ್ಲ. ನಾಯಕನಿದ್ದರೆ ರಾಣಿಮಲ್ಲಿಯರು ಮಹಾವೃಕ್ಷವನ್ನು ಆಶ್ರಯಿಸಿರುವ ಜಾಜಿಮಲ್ಲಿಗೆಯ ಬಳ್ಳಿಗಳಂತೆ ಆತನ ಪಕ್ಕಗಳನ್ನು ಆಶ್ರಯಿಸುತ್ತಾರೆ. ಇಲ್ಲದಿದ್ದರೆ ಅವರೇ ಆ ಶಯ್ಯಾರತ್ನವನ್ನು ಅಲಂಕರಿಸುತ್ತಾರೆ. ಆದರೂ ಗುಂಡು ಹಾರುವ ವೇಳೆಗೆ ಆಗಲೇ ಮಲ್ಲಿಯೆದ್ದು ಸ್ನಾನಮಾಡಿ ಬಂದು ದೇವರ ಮನೆಯಲ್ಲಿ ಕುಳಿತಿರುತ್ತಾಳೆ. ಈಗ ಗಂಡನ ಶಿವಪೂಜೆಗೆ ಸಿದ್ಧಮಾಡುವ ಕೆಲಸ ರಾಣಿಯದು. ರಾಣಿ ಕೆಲಸ ಹೇಳುತ್ತಿದ್ದವಳು ಆ ಹೇಳುವಿಕೆಯ ಹಿರಿಯತನವನ್ನು ಮಲ್ಲೀಗೆ

ಒಪ್ಪಿಸಿರುವಂತಿದೆ.

ನಾಯಕನಿಗೆ ಮಲ್ಲಿಯ ಸಹವಾಸದಲ್ಲಿ ಏನೋ ತೃಪ್ತಿ : ಮನಸ್ಸಿಗೆ ಒಪ್ಪಿದ ಊಟವನ್ನು ಮನಸಾರೆ ಮಾಡಿ ಕೈತೊಳೆದುಕೊಂಡು ಬಂದು ಕುರ್ಚಿಯಲ್ಲಿಕುಳಿತು ತಾಂಬೂಲವನ್ನು ಒಪ್ಪಿಸಿಕೊಳ್ಳುತ್ತಿರುವಾಗ ತೋರುವ ಪೂರ್ಣಭಾವ ಇಂದು ನಾಯಕನ ಮನೆಯಲ್ಲಿದೆ.

ಮಲ್ಲಿಯ ಸತ್ಯನಾರಾಯಣವ್ರತ ಫಲವಾಯಿತು. ರಾಣಿಯು ಗರ್ಭವತಿಯಾದಳು. ಮಲ್ಲಿಯು ತನಗೆ ಬೇಡವೆನ್ನುತ್ತಿದ್ದ ಪುಂಸವನವನ್ನು ಮೂರನೆಯ ತಿಂಗಳಲ್ಲಿಯೇ ಮಾಡಿಸಿದಳು. ತಾನು ಹೇಗೆ ಹೇಗೆ ಬಯಕೆಯ ಭೋಗಗಳನ್ನು ಪಡುತ್ತಿದ್ದಳೋ ಹಾಗೆಯೇ ತಾನೂ ಅಕ್ಕನಾಗಿ ರಾಣಿಯು ತಂಗಿಯಾಗಿದ್ದರೆ ನಡೆಯಿಸಬಹುದೋ ಹಾಗೆ ನಡೆಯಿಸಿದಳು. ರಾಣಿಯ ಬಾಯಲ್ಲಿ ಬರುವ ಕೋರಿಕೆಯನ್ನು ನೆರವೇರಿಸುವುದು ಇರಲಿ : ಅವಳ ಮನಸ್ಸಿನಲ್ಲಿ ಮೂಡುವ ಕೋರಿಕೆಯನ್ನು ಅರಿತುಕೊಂಡು ನಡೆಸುವಳು. ದಿನವೂ ತಾನೇ ಬಸುರಿಗೆ ನೀರು ಎರೆಯುವಳು : ಇದುವರೆಗೂ ಇತರರು ಮಾಡುತ್ತಿದ್ದ ತಲೆಬಾಚುವಿಕೆಯನ್ನು ಈಗ ತಾನೇ ಮಾಡುವಳು. ಅಡುಗೆಯವರು ತಂದ ತಿಂಡಿಯನ್ನು ಬಾಗಿಲಿಗೆ ಹೋಗಿ ತಾನೇ ತಂದುಕೊಡುವಳು. ರಾತ್ರಿಯ ಹೊತ್ತು ತಾನು ಕುಳಿತು ಹಾಲು ಕಾಯಿಸಿ ತಂದು ಭಕ್ತಿಯಿಂದ ದೇವರಿಗೊಪ್ಪಿಸುವವಳಂತೆ ಒಪ್ಪಿಸುವಳು.

ನಾಯಕನಿಗೆ ತೃಪ್ತಿ. ಹಿರಿಯ ಹೆಂಡತಿ ಬಸುರಾಗಿದ್ದಾಳೆ. ಮಲ್ಲಿ ತಪ್ಪದೆ "ಬುದ್ಧಿಯವರಿಗೆ ಪುತ್ರೋತ್ಸವವಾಗುತ್ತದೆ." ಎನ್ನುತ್ತಾಳೆ.

ಅಂತೂ ನಾಯಕನ ಅರಮನೆಯಲ್ಲಿ ಎಲ್ಲೆಲ್ಲೂ ಶಾಂತಿ, ತೃಪ್ತಿ, ತುಂಬಿದೆ. ಸಂಸಾರ ಗೊನೆಯನ್ನುಬಿಟ್ಟ ಬಾಳೆಯ ತೋಟದಂತೆ ರಮ್ಯವಾಗಿದೆ. ಒಂದೇ ಒಂದು ಸಣ್ಣ ಯೋಚನೆ. ನರಸಿಂಹಯ್ಯನು ಮಾತ್ರ ಇಲ್ಲ. ಅವನು ದೇಶವನ್ನು ಸುತ್ತಿಬರುವೆನೆಂದು ಹೋದವನು ಆರು ತಿಂಗಳಾಗಿದೆ ಎಲ್ಲಿರುವನೋ ಅದೂ ಬರೆದಿಲ್ಲ. ಮನೆಯವರೆಲ್ಲ ದಿನ ದಿನವೂ ಕಾಗದವನ್ನು ನಿರೀಕ್ಷಿಸುತ್ತಿದ್ದಾರೆ : ದಿನವೂ ಅವರಿಗೆ ಆಶಾಭಂಗವಾಗುತ್ತಿದೆ.

ರಾಣಿಗೆ ನೋವು ಎತ್ತಿದೆ. ಈಸಲ ಆನಂದಮ್ಮ ಮಲ್ಲಿ ಇಬ್ಬರೂ ಸಿದ್ಧರಾಗಿದ್ದಾರೆ. ಹೆಸರಿಗೆ ಡಾಕ್ಟರ್ ಮಿಡ್‌ವೈಫ್ ಇರಬೇಕು. ಇರಲಿ. ಮಿಕ್ಕ ಸರ್ವ ಕಾರ್ಯಗಳನ್ನೂ ತಾವೇ ಮಾಡಬೇಕು ಎಂದು ಗೊತ್ತು ಮಾಡಿಕೊಂಡಿದ್ದಾರೆ. ಆನಂದಮ್ಮನು ವಯಸ್ಸಾದ ಅಜ್ಜಿಯರನ್ನೆಲ್ಲ ಕಂಡು ಮಗು ಹುಟ್ಟುವುದಕ್ಕೆ ಮುಂಚೆ ಏನು ಮಾಡಬೇಕು ಎಂಬು ದನ್ನು ತಿಳಿದುಕೊಂಡುಬಂದಿದ್ದಾಳೆ. ನೋವು ಎತ್ತಿದಕೂಡಲೇ ಏನೋ ಕಷಾಯ ಕೊಟ್ಟರು. ನೋವು ಬಲವಾಯಿತು. ಹುಲ್ಲು ಅರಿಶಿನದೆಣ್ಣೆ ಮಂತ್ರಿಸಿಕೊಟ್ಟರು. ಅದು ಕೊಟ್ಟ ಐದು ನಿಮಿಷದಲ್ಲಿ ಜನನವಾಯಿತು. ಡಾಕ್ಟರು ನಾಯಕನಿಗೆ ಸೂಚನೆ ಕೊಟ್ಟಿದ್ದರು. "ವಯಸ್ಸಾದಮೇಲೆ ಆಗಿರುವ ಗರ್ಭ. ಆದಷ್ಟು ಹುಷಾರಾಗಿರ ಬೇಕು" ಎಂದು. ದೇವರ ದಯೆ. ಗರ್ಭವು ಮೈಬಿಟ್ಟು ಸುಖವಾಗಿ ಕಳೆಯಿತು. ಹೂವಿನ ಸರವೆತ್ತಿದಷ್ಟು ಸುಲಭವಾಗಿ ಹೆರಿಗೆಯಾಯಿತು.

ಆನಂದಮ್ಮನು ಮಿಡ್‌ವೈಫ್ ಜೊತೆಯಲ್ಲಿ ರಾಣಿಗೆ ಉಪಚಾರ ಮಾಡುತ್ತಿರುವಾಗ ಇತ್ತ ಮಲ್ಲಿಯು ಮಗುವನ್ನು ನೋಡಿದಳು. ಗಂಡು ಮಗು. ಮುದ್ದಾಗಿದೆ. ಎಲ್ಲಾ ತನ್ನ ಮಗುವಿನ ಪ್ರತಿಬಿಂಬ. ಅವಳಿಗೆ ಬಹು ಸಂತೋಷವಾಗಿದೆ. ಹಾಗೇ ಆ ಮಗುವನ್ನು ತೆಗೆದು ಕೊಂಡು ಹೋಗಿ ಗಂಡನಿಗೆ ತೋರಿಸಬೇಕು ಎಂದು ಅವಸರ. ಆದರೆ ಅದಕ್ಕೆ ಸ್ನಾನಾದಿಗಳು ಆಗಬೇಕಲ್ಲ !

ಮಗುವಿಗೆ ಸ್ನಾನ ಮಾಡಿಸಿ ಅದನ್ನು ಬೆಚ್ಚಗೆ ಮೊರದಲ್ಲಿ ಮಲಗಿಸಿ ಆಯಿತು. ತಾನು ಕೈತೊಳೆದುಕೊಂಡು ಒರೆಸಿಕೊಂಡಳು. ಇನ್ನೂ ಟವಲು ಕೈಯನ್ನು ಒರೆಸುತ್ತಿದೆ. ಆಗಲೇ ಗಂಡನನ್ನು ಕೂಗಲು ಹೊರಟಳು. ನಡುಮನೆಯಲ್ಲಿ ಸೋಫಾದ ಮೇಲೆ ನಾಯಕನು ಕುಳಿತು ನಿರೀಕ್ಷಿಸುತ್ತಿದ್ದಾನೆ. ಮಲ್ಲಿಯು ಬಂದು,

"ಬುದ್ಧಿ, ದೇವರು ತಮಗೆ ಮಗನ್ನ ಕೊಟ್ಟಿದ್ದಾನೆ" ಎಂದಳು.

ನಾಯಕನು ಸಂತೋಷದಲ್ಲಿ ಬರಸೆಳೆದು ಅಪ್ಪಿದನು. ತನ್ನ ಸೌಭಾಗ್ಯದೇವಿಯನ್ನು ಆರಾಧಿಸುವವನಂತೆ ಅವಳ ಮೇಲೆ ಮುತ್ತಿನ ಮಳೆಗರೆದನು. ಅವಳು ಅದಷ್ಟೂ ಆದರದಿಂದ ಸ್ವೀಕರಿಸಿ,

"ಹುಚ್ಚು ದೊರೆ, ಇದಿಷ್ಟೂ ದೊಡ್ಡಮ್ಮಣ್ಣಿಯವರಿಗೆ ಸಲ್ಲಬೇಕಾದ್ದು. ನಿಮ್ಮ ವಂಶದ ರತ್ನದೀಪವನ್ನು ಬೆಳಗಿಸಿದವರು ಆ ಮಹಾತಾಯಿ, ಈ ದಾಸಿಯಲ್ಲ." ಎಂದಳು.

ನಾಯಕನು ಹಾಗೆಯೇ ಆ ದೃಢಾಲಿಂಗನದಲ್ಲಿಯೇ "ಹೌದು ಮಲ್ಲಿ, ರಾಣಿ ಕೊಟ್ಟುದು ವಂಶದ ಭಾಗ್ಯ. ನೀನು ಬಂದುದು ನನ್ನ ಭಾಗ್ಯ." ಎಂದು ಮತ್ತೆ ಮುತ್ತಿಟ್ಟುಕೊಂಡನು.

ಮಲ್ಲಿಯು ನಾಯಕನ ಕೈಹಿಡಿದು ಕರೆದುಕೊಂಡು ಬಂದು, ಹೆರಿಗೆಯ ಮನೆಯ ಬಾಗಿಲಲ್ಲಿ ಒಂದು ಕುರ್ಚಿ ಹಾಕಿ ಕುಳ್ಳಿರಿಸಿ ಹೋಗಿ ಮಗುವನ್ನು ತಂದುತೋರಿಸಿದಳು.

ನಾಯಕನಿಗೆ ಮಗುವನ್ನು ನೋಡಿ ಪರಮ ಹರ್ಷವಾಯಿತು. ಮಗುವನ್ನು ಎತ್ತಿಕೊಳ್ಳಲು ಕೈನೀಡಿದನು. ಮಲ್ಲಿಯೂ ಆ ಮಗುವನ್ನು ಹಿಂದಕ್ಕೆ ತೆಗೆದುಕೊಂಡು "ಉಂಟೂ ! ಊರಿಗೆಲ್ಲಾ ಸಕ್ಕರೆ ಹಂಚಿ ನನ್ನಪ್ಪನ್ನ ಮುಟ್ಟಬೇಕು." ಎಂದಳು.

"ಮಗುವಿನ ತಾಯಿ ಹೆಂಗಿದ್ದಾರೆ ?" ನಾಯಕನು ಕೇಳಿದನು.

"ಗಂಜಿ ಬಸಿದ ಅನ್ನದ ಹಂಗೆ ಭೇಷಾಗಿದ್ದಾರೆ" ಮಲ್ಲಿಯೇ ಉತ್ತರ ಹೇಳಿದಳು.

ನಾಯಕನು ಸಂತೋಷದ ಮೂಟೆಯಾಗಿ ಹೊರಗೆ ಬಂದನು.

ಅವನು ಇನ್ನೂ ಬಂದು ಸೋಫಾದಲ್ಲಿ ಕುಳಿತುಕೊಳ್ಳುತ್ತಿದ್ದ ಹಾಗೆಯೇ ನರಸಿಂಹಯ್ಯನು ಬಂದನು. ನಾಯಕನು ಸಂಭ್ರಮದಿಂದ ಆತನನ್ನು ಬರಮಾಡಿಕೊಂಡು, ತಾನೇ ಓಡಿಹೋಗಿ "ಮಲ್ಲಿ, ಮಲ್ಲಿ, ಮೇಷ್ಟ್ರು ಬಂದಿದ್ದಾರೆ" ಎಂದನು. ಮಲ್ಲಿಯು "ಆಂ, ನಿಜವಾಗಿ ?" ಎಂದು ಮಗುವನ್ನು ಮಲಗಿಸಿ ಓಡೋಡಿ ಬಂದಳು.

ಅವಳಿಗೆ ನರಸಿಂಹಯ್ಯನನ್ನು ನೋಡಿ ಪರಮಾನಂದವಾಯಿತು. ಅದುವರೆಗೂ "ಮೇಷ್ಟ್ರೆ !" ಎನ್ನುತ್ತಿದ್ದವಳು, "ಗುರುವೇ ! ಮಹಾನು

ಭಾವ !” ಎಂದು ಓಡಿಹೋಗಿ ಆತನ ಪಾದಗಳನ್ನು ಹಿಡಿದು ನಮಸ್ಕಾರ ಮಾಡಿದಳು. ನಾಯಕನು ತಾನು ಏಕೆ ಹಾಗೆ ಮಾಡುತ್ತಿರುವೆನು ಎಂಬುದನ್ನು ಅರಿಯದೆಯೇ, ತಾನೂ ನಮಸ್ಕಾರ ಮಾಡಿದನು. ಮಲ್ಲಿಯು ತುಂಟತನದಿಂದ “ ಬುದ್ಧಿಯವರಿಗೆ ಈಗತಾನೇ ಪುತ್ರೋತ್ಸವವಾಯಿತು. ಅದಕ್ಕೆ ತಮ್ಮ ಗುರುಗಳಿಗೆ ಪಾದಪೂಜೆ ಮಾಡುತ್ತಿದ್ದಾರೆ.” ಎಂದು ಕಿಲಕಿಲನೆ ನಕ್ಕಳು.

ನರಸಿಂಹಯ್ಯನು “ ಹಾಗೇನು ! ಅದರಿಂದಲೇ ಮೇಷ್ಟ್ರು ಮಹಾನುಭಾವನಾದುದು !” ಎಂದು ತಾನೂ ನಕ್ಕನು.

ಮಲ್ಲಿಯು “ ಅದಕ್ಕೆ ಉತ್ತರ ಆಮೇಲೆ ಕೊಡುತ್ತೇನೆ, ಗಾಂಧಿಯವರು ಹೇಗಿದ್ದಾರೆ ? ಎಲ್ಲಿದ್ದಾರೆ ?” ಎಂದು ಒಂದೇ ಉಸಿರಿನಲ್ಲಿ ಕೇಳಿದಳು.

ನರಸಿಂಹಯ್ಯನು ಹೇಳಿದನು : “ ರೋಗಮುಕ್ತರಾಗಿದ್ದಾರೆ. ಆದರೆ ಇನ್ನೂ ನಿಶ್ಶಕ್ತಿ ತಪ್ಪಿಲ್ಲ. ಇನ್ನೂ ಉಪಚಾರವಾಗಬೇಕು. ಮೈಸೂರು ಮಹಾರಾಜರು ದಿವಾನರ ಮೂಲಕ ಅವರಿಗೆ ಆಹ್ವಾನ ಕೊಟ್ಟಿದ್ದಾರೆ. ಅವರೂ ಅಂಗೀಕರಿಸಿದ್ದಾರೆ. ಬಂದು ನಂದಿಯಲ್ಲಿ ಎರಡು ತಿಂಗಳು ಇರುತ್ತಾರೆ ”

ಮಲ್ಲಿಗೆ ಎಲ್ಲೂ ಹಿಡಿಸಲಾರದಷ್ಟು ಆನಂದವಾಯಿತು : “ ಬುದ್ಧಿ, ಮಹಾರಾಜರೇ ಕರೆದಿದ್ದಾರೆ ಅಂದಮೇಲೆ ತಾವು ಇನ್ನೂ ನಿರಾತಂಕವಾಗಿ ಬರಬಹುದಲ್ಲ. ಅಲ್ಲಿ ನಾವೂ ಒಂದು ಬಂಗಲೆ ತಕೊಂಡು ಇದ್ದು ಬಿಡೋವ” ಎಂದಳು. ನಾಯಕನು “ಸಂತೋಷವಾಗಿ” ಎಂದನು. ಆತನ ದೇಹದ ನರನರವೂ ಆ ಸಂತೋಷವಾಗಿ ಎಂಬ ಮಾತನ್ನು ವೀಣೆ ನುಡಿದಂತೆ ನುಡಿಯಿತು.

## ೪೭

ಗಾಂಧಿಯವರು ಬೆಂಗಳೂರಿನಲ್ಲಿ ಇದ್ದಷ್ಟು ದಿನವೂ ನಾಯಕನು ಸಪತ್ನೀಪುತ್ರನಾಗಿ ಅಲ್ಲಿಯೇ ಇದ್ದನು. ದಿನವೂ ಅವರೆಲ್ಲರೂ ಭಜನೆಗೆ ಹೋಗುವರು. ನರಸಿಂಪಯ್ಯನು ಆ ಹೊತ್ತಿನಲ್ಲಿ ಮಾತ್ರ ಅವರ ಜೊತೆಯಲ್ಲಿ ಇರುವನು. ಮಿಕ್ಕ ಹೊತ್ತು ಅವನೆಲ್ಲಿಯೋ ಹೋಗಿರುವನು.

ಒಂದು ದಿನ ನರಸಿಂಹಯ್ಯನನ್ನು ನಾಯಕನು ಬಲವಂತವಾಗಿ ಹಿಡಿದುಕೊಂಡು ಬಂದನು : ಆತನು ಬಂದುದನ್ನು ನೋಡಿ ಎಲ್ಲರೂ ಸಂತೋಷಪಡುವವರೇ ! " ನೋಡಿದೆಯಾ ಮಲ್ಲಿ, ನಿಮ್ಮ ಗುರುಗಳು ಬನ್ನಿ ಅಂದರೆ ಬರುವುದಿಲ್ಲ ಎಂದು ಖಂಡಿತವಾಗಿ ಹೇಳಿಬಿಟ್ಟರು. ಕೊನೆಗೆ ನಿನ್ನ ಹೆಸರು ಹೇಳಿ ಅವಳು 'ಸಂತೋಷಪಡುತ್ತಾಳೆ' ಅಂದ ಮೇಲೆ ಬಂದಿದ್ದಾರೆ." ನಾಯಕನು ಮಲ್ಲೀಗೆ ದೂರು ಹೇಳಿದನು.

" ಅವರು ಮಾಡುವುದು ಸರಿ ಬುದ್ಧಿ, ನಾವು ದಿನವೂ ಗಾಂಧಿ ಯವರನ್ನು ನೋಡುವುದಕ್ಕೆ ಹೋಗುತ್ತೇವೆ. ಆದರೆ ನಾವು ಶುದ್ಧ ಕೃತ್ರಿಮಿಗಳು. ಅದಕ್ಕೋಸ್ಕರ ಅವರು ಬರುವುದಿಲ್ಲ. ಅಷ್ಟೇ !"

" ಅದೇನು ಹೆಂಗಂದೀಯೆ ? ಅದೇನು ನಾವು ಕೃತ್ರಿಮ ಮಾಡಿ ರೋದು ?"

" ಅವರು ದರಿದ್ರನಾರಾಯಣನ ಪ್ರತಿನಿಧಿಗಳು. ಅಹಿಂಸಾ ವಾದಿಗಳು. ನಾವು ಲಕ್ಷ್ಮೀದೇವಿಯ ಭಕ್ತರು, ಶ್ರೀಮಂತರು. ದಿನ ದಿನ ಕುರಿ ಕೋಳಿ ತಿನ್ನೋರು. ಇದು ಕೃತ್ರಿಮವಲ್ಲದೆ ಇನ್ನೇನು ?"

" ಏನೋ ಹೇಳತೀ ಅಂತಿದ್ದೆ. ಇಷ್ಟೇನಾ ? ನಮ್ಮ ಐಶ್ವರ್ಯ ವಂಶಪಾರಂಪರ್ಯವಾಗಿ ಬಂದದ್ದು. ನಾವೇನೂ ತಲೆ ಒಡೆದು ತಂದದ್ದಲ್ಲ. ಇದನ್ನು ಈಗ ಬಿಡೋದು ಅಂದರೆ ಯಾರಿಗೆ ಕೊಡ ಬೇಕು ? ಏನು ಮೇಷ್ಟ್ರೆ, ನೀವು ಹೇಳಿ. ನೀನು ಮಾಡಬೇಕು ಅಂದದ್ದೆಲ್ಲ ಮಾಡಿದೇವೋ ಇಲ್ಲವೋ ? ಇನ್ನೂ ಎರಡು ಹೇಳಿ– ಮಾಡೋವಾ, ನೀನು ಹೇಳಿದೆ ಮಕ್ಕಳ ಆಸ್ಪತ್ರೆ ಒಂದು, ಹೆರಿಗೆ

ಆಸ್ಪತ್ರೆ ಒಂದು ಕಟ್ಟಿಸಿ ಅಂತ. ಅದಕಾಗಿ ಒಂದೊಂದು ಲಕ್ಷ ಕೊಟ್ಟೆವೋ ಇಲ್ಲವೋ ? ಇನ್ನೇನು ಮಾಡಬೇಕು ಹೇಳು."

ನರಸಿಂಹಯ್ಯನು ಬಾಯಿ ಹಾಕಿದನು : "ಗಾಂಧಿಯವರು ಹೇಳುವುದು ಐಶ್ವರ್ಯವನ್ನು ಟ್ರಸ್ಟ್ ಆಗಿ ಉಪಯೋಗಿಸಬೇಕು ಅಂತ. ನೀವು ಹೆಚ್ಚು ಕಡಿಮೆ ಹಾಗೆ ಉಪಯೋಗಿಸುತ್ತೀರಿ. ಮುಖ್ಯವಾಗಿ ಈ ಮಾತು ರಾಜ ಮಹಾರಾಜರ ವಿಷಯವಾಗಿ ಹೇಳಿರೋದು. ಅವರೆಲ್ಲ ಅನೇಕರು ತಮ್ಮ ಆಸ್ತಿಯನ್ನು ದುರುಪಯೋಗಪಡಿಸುತ್ತಿದ್ದಾರೆ. ಅವರು ಮೈಸೂರು ಮಹಾರಾಜರ ಹಾಗೆ ಟ್ರಸ್ಟಿಗಳಾಗಬೇಕು ಅಂತ ಅವರ ಮನಸ್ಸಿನಲ್ಲಿದೆ."

"ಹಾಗಂದರೆ? ಸ್ವಲ್ಪ ವಿಚಾರವಾಗಿ ಹೇಳಿ."

"ಈಗ ಶ್ರೀಮಂತರು ಖರ್ಚಿನ ಕಡೆ ದೃಷ್ಟಿಯಿಟ್ಟುಕೊಂಡು ಆದಾಯ ಬೆಳೆಸುವುದಕ್ಕೆ ಪ್ರಯತ್ನಪಡುತ್ತಿದ್ದಾರೆ. ಇದು ತಪ್ಪು. ಅವರಿಗೆ ಇರುವ ಪ್ರಭಾವವೆಲ್ಲ ಹಣಸಂಪಾದಿಸುವುದಕ್ಕೆ ಖರ್ಚಾಗುತ್ತದೆ. ತಿಂಗಳಿಗೆ ೨೦೦೦ ರೂ. ಖರ್ಚುಮಾಡದಿದ್ದರೆ ನಾನೆಂತಹ ಶ್ರೀಮಂತ ಎಂದು ೧೨೦೦ ರೂ ವರಮಾನದವನು ಅಂದುಕೊಂಡು ಉಳಿದ ಎಂಟುನೂರು ರೂಪಾಯಿ ಹೇಗಾದರೂ ಸಂಪಾದಿಸಬೇಕು ಅಂತ ಹೊರಟಿರುವ ಶ್ರೀಮಂತರ ತಂಡವೊಂದು. ನಿಮ್ಮ ಹಾಗೆ ಆಗರ್ಭ ಶ್ರೀಮಂತರ ತಂಡ ಇನ್ನೊಂದು. ನಿಮಗೆ ಲಕ್ಷರೂಪಾಯಿ ವರಮಾನ ಅದನ್ನು ಖರ್ಚುಮಾಡುವುದು ಹೇಗೆ ಎಂದು ನಿಮ್ಮ ಸಂಕಟ. ನಿಮ್ಮಂತಹವರು ಟ್ರಸ್ಟಿಗಳಾಗುವುದು ಎಂದರೆ, ಮಹಾರಾಜರ ಹಾಗೇ ಮೈಸೂರು ರಾಜ್ಯದ ಉತ್ಪತ್ತಿ ಒಂದೂವರೆ ಕೋಟಿ ಇದ್ದಾಗ ಅವರ ಅರಮನೆಗೆ ಸರಕಾರ ಇಪ್ಪತ್ತು ಇಪ್ಪತ್ತೈದು ಲಕ್ಷ ಕೊಡುವುದು ಎಂದಾಯಿತು. ಈಗಲೂ ಅದು ಹಾಗೇ ನಡೆಯುತ್ತಿದೆ. ಉಳಿದ ಹಣವೆಲ್ಲ ದೇಶಕ್ಕೆ ಉಪಯೋಗವಾಗುತ್ತಿದೆ. ಉಳಿದ ರಾಜ್ಯಗಳಲ್ಲಿ ಹಾಗಿಲ್ಲ. ಅನೇಕ ರಾಜರು ತಮ್ಮ ರಾಜ್ಯ ತಮ್ಮ ಆಸ್ತಿ ಎನ್ನುವಂತೆ ವರ್ತಿಸುತ್ತಿದ್ದಾರೆ. ಅಲ್ಲಿ ದೇಶೋಪಕಾರಿ ಕಾರ್ಯಗಳೇ ನಡೆಯುತ್ತಿಲ್ಲ. ಅಂತಹವರನ್ನು ಗಾಂಧಿಯವರು ಟ್ರಸ್ಟಿಗಳಾಗಿ ಎನ್ನುತ್ತಾರೆ. ಈ

ಮಾತು ಎಲ್ಲ ಶ್ರೀಮಂತರಿಗೂ ಅನ್ವಯಿಸುತ್ತದೆ. ಅವರವರ ಖರ್ಚು ಇಷ್ಟು ಎಂದು ಗೊತ್ತುಮಾಡಿಕೊಂಡು ಉಳಿದುದನ್ನೆಲ್ಲ ಪ್ರಜೋಪಕಾರೀ ಕಾರ್ಯಗಳಿಗೆ ಉಪಯೋಗಿಸಬೇಕು ಎಂದು ಅವರ ಇಷ್ಟ."

" ಈಗ ನಮ್ಮದು ಏನು ತಪ್ಪು ?"

" ಆದಿನ ನಿಮ್ಮೆದುರಿಗೇ ಅವರೇ ಹೇಳಿದರಲ್ಲ! ಅದರಂತೆ ನಡೆಯಿರಿ. ನಿಮ್ಮ ವಂಶದ ಆಸ್ತಿ : ಇದನ್ನು ಯಾರೂ ಖಲಲು ಮಾಡುವಂತಿಲ್ಲ ಎಂದು ಒಂದು ನಿರ್ಧರಮಾಡಿ–ಉಳಿದುದರಲ್ಲಿ ನಿಮ್ಮ ಖರ್ಚಿಗೆ ಇಷ್ಟು ಎಂದು ಇಟ್ಟುಕೊಳ್ಳಿ. ಮಿಕ್ಕುದನ್ನು ಬಡಬಗ್ಗರಿಗೆ ಕೊಡಿ."

" ಆಯಿತು. ನಾವು ಕೊಟ್ಟರೆ ತಾನೇ ಬಡವರ ಬಡತನ ತೀರೀತಾ ?"

" ಹನಿಗೂಡಿದರೆ ಹಳ್ಳವಾಗುವುದು. ದೇಶದಲ್ಲಿರುವ ಬಡವರ–ನ್ನೆಲ್ಲ ನೀವು ಉದ್ಧಾರಮಾಡುವುದಕ್ಕಾಗುವುದಿಲ್ಲ. ನಿಜ. ಆದರೆ ನಿಮಗಾದಷ್ಟು ನೀವು ಮಾಡಿ. ಕೈ ನೋವು, ಕಾಲುನೋವು, ತಲೆ ನೋವು ಹೊಟ್ಟೆನೋವು ಇರುವ ಮನುಷ್ಯನಿಗೆ ಒಂದು ನೋವು ಕಡಿಮೆಯಾದರೆ ಅಷ್ಟು ಮಟ್ಟಿಗೆ ಅವನು ಕೃತಾರ್ಥ. ಹಾಗೆ ಇದು ಇಂಡಿಯಾದಲ್ಲಿ ಎಂದಾದರೂ ಒಂದು ದಿನ ಆಗಲೇ ಬೇಕು. ಈಗ ಇಂಗ್ಲೆಂಡಿನಲ್ಲಿ ಒಂದು ಶಾಸನವಿದೆ. ಅದರ ಪ್ರಕಾರ ಅರಮನೆ ಆಸ್ತಿಬಿಟ್ಟು ಉಳಿದ ಆಸ್ತಿಗಳನ್ನು ಪಡೆದುಕೊಳ್ಳುವ ಪ್ರತಿಯೊಬ್ಬನೂ ಸರಕಾರಕ್ಕೆ ಅಷ್ಟು ಕೊಡಬೇಕು. ಹಾಗೆ ಇಲ್ಲಿಯೂ ಬಂದರೆ ಆಗೇನು ಮಾಡುತ್ತೀರಿ ? ಅದನ್ನು ಈಗಲೇ ಮಾಡಿ."

" ಆಯಿತು. ಅದನ್ನು ಗಮನಿಸಬೇಕು, ನಿಜ. ಆಯಿತು. ಮಲ್ಲೀಗೆ ಏನು ಮಾಡಿದ್ದೀರಿ ?"

" ನಾನೇನು ಮಾಡಲಿ ?"

" ಅವಳೀಗ ಗಾಂಧಿಯವರ ಶಿಷ್ಯಳಾಗಿ ಆಶ್ರಮಕ್ಕೆ ಹೊರಟು ಹೋಗಬೇಕಂತೆ ! ನಮ್ಮ ಪ್ರಾಣ ತೆಗೀತಿದ್ದಾಳೆ."

" ಅದಕ್ಕೆ ನಾನು ಆಗಲೇ ಹೇಳಿದ್ದೀನಲ್ಲ ?"

" ಏನು ?"

" ನೀವು ಭೋಗಪ್ರಾಣಿಗಳು. ಭೋಗಬಿಟ್ಟು ಬದುಕಲಾರಿರಿ. ಗಾಂಧಿಯವರ ಶಿಷ್ಯರಾಗಬೇಕಾದರೆ ಶುದ್ಧ ತಪಸ್ವಿಗಳಾಗಬೇಕು. ಅದು ನಿಮ್ಮಿಂದ ಸಾಧ್ಯವಿಲ್ಲ. ಅದು ಆದಮೇಲೆ ಆ ಮಾತು."

" ಹಂಗೆ ಆಗೋದ. ಸಾಧ್ಯವಾ ? ಮೇಷ್ಟರೆ ?"

" ಸರ್, ನಮ್ಮನ್ನು ಕೇಳಬೇಡಿ. ಸೇಲಂ ರಾಜಗೋಪಾಲಾ ಚಾರ್ರನ್ನು ಕೇಳಿ. ಕಲಕತ್ತೆಯ ಸಿ. ಆರ್. ದಾಸರನ್ನು ಕೇಳಿ. ಅವರು ತಮ್ಮ ಗಾಡಿಯ ಮುಂದೆ ಕರ್ಜನ್ ಗಾಡಿ ಬಿಡದೆ ಹೋದವರಂತೆ. ಕಲಕತ್ತೆಯಲ್ಲಿ ಸಿ. ಆರ್. ದಾಸರ ವರಮಾನ ವೈಸ್‌ರಾಯ್ ಸಂಬಳ ಕ್ಕಿಂತ ಹೆಚ್ಚಂತೆ. ಅಲಹಾಬಾದಿನ ಪಂಡಿತ ಮೋತೀಲಾಲ್‌ನೆಹ್ರೂ ಅವರನ್ನು ಕೇಳಿ. ಅವರು ತಮ್ಮ ಬಟ್ಟೆಗಳನ್ನು ಇಸ್ತ್ರಿಗೆಂದು ಪ್ಯಾರಿಸ್ಸಿಗೆ ಕಳುಹಿಸುತ್ತಿದ್ದರಂತೆ. ಇವರಿಗೆಲ್ಲ ಸಾಧ್ಯವಾಯಿತು. ಅಷ್ಟೇ ಅಲ್ಲ. ನಾಯಕರೆ, ಈ ಗಾಂಧಿಯುಗದಲ್ಲಿ ಸ್ವಾತಂತ್ರ್ಯ ಬರುತ್ತದೆ ಎಂದು ನಮ್ಮ ನಂಬಿಕೆ. ಆಗ ಈ ರಾಜಮಹಾರಾಜರುಗಳು ಎಷ್ಟು ರಕ್ತಪಾತ ಮಾಡುವರೋ ಹೇಳಲಾಗುವುದಿಲ್ಲ. ನಿಮ್ಮ ಮಾತಿನಲ್ಲಿ ಹೇಳಬೇಕು ಅಂದರೆ ಏಟುತಿಂದ ಹೆಬ್ಬುಲಿಗಿಂತ ಹೆಚ್ಚಾಗಿ ಕಾದಾರು. ಸಾಲದು ದಕ್ಕೆ ಈಗ ಹಿಂದೂ ಮುಸ್ಲಿಂ ಗಲಾಟೆಗಳು ಹೆಚ್ಚಾಗುತ್ತಿವೆ. ಬ್ರಿಟಿಷ್ ಸರಕಾರದ ಅಧಿಕಾರಿಗಳು ಬೇಕೆಂದು ಗಲಭೆಗಳನ್ನು ಮಾಡಿಸಿ, ಜನ ರನ್ನು ಹೆದರಿಸಲು ಪ್ರಯತ್ನಿಸುತ್ತಿದ್ದಾರೆ. ಅಂತೂ ಎರಡೂ ತಪ್ಪು ವಂತಿಲ್ಲ. ಸ್ವಾತಂತ್ರ್ಯ ಬಂದರೆ, ಈ ರಾಜಮಹಾರಾಜರು ಇರು ವಂತಿಲ್ಲ: ಈಗಿರುವಂತೆ ಈ ಜಗಳದ ಮನೋಭಾವ ಇದ್ದರೆ ರಕ್ತಪಾತ ತಪ್ಪುವುದಿಲ್ಲ."

"ಕೇಳಿದೆಯಾ ಮಲ್ಲಿ?"

"ಬುದ್ಧಿ, ನಾನು ಹುಟ್ಟಿದುದು ತಿಪ್ಪೆಯಲ್ಲಿ: ಬೆಳೆದುದು ಗುಡಿಸಲಿ ನಲ್ಲಿ. ಯಾವ ಅದೃಷ್ಟವೋ ತಮ್ಮ ಕೈಹಿಡಿದು ಮೆರೆದೆ. ಬಿಡು ಅಂದರೆ ನನಗೆ ಸುಲಭ. ಆದರೆ ಹುಟ್ಟುತ್ತಲೇ ಚಿನ್ನದ ಚಮಚ ಕಟ್ಟಿಕೊಂಡೇ ಹುಟ್ಟಿರೋ ತಮಗೆ ಬಿಡುವುದು ಸಾಧ್ಯವೇ? ನಾನೇನು ಹೇಳಲಿ?"

"ಬಿಡೋದು ಕಷ್ಟ. ಸಾಯುವಾಗ ಹೆಂಗೋ ಬಿಡುತ್ತೇವೆ:

ಬಿಟ್ಟು ನಡೆಯುತ್ತೇವೆ. ಬಹುಶಃ ಇರುವಾಗಲೇ ಬಿಟ್ಟು ದಾನ ಅಂದರೆ ಒಳ್ಳೆಯದೇನೋ? ಹೇಗೂ ಬಿಡಬೇಕು: ಈಗಲೇ ಬಿಡಬಾರದೇಕೆ? ಆಯಿತು ಮೇಷ್ಟ್ರೇ? ಗಾಂಧಿಯವರು ಗೆದ್ದರೆ ನಮ್ಮ ಮಹಾರಾಜರೂ ರಾಜ್ಯ ಬಿಡಬೇಕಾದೀತು ಅಂತೀರಾ ?"

"ರಾಜ್ಯನಾದರೂ ಬಿಡಬೇಕು: ಇಲ್ಲದಿದ್ದರೆ ಪ್ರಾಣನಾದರೂ ಬಿಡಬೇಕು. ಗೊತ್ತೆ ಈ ರಾಜರ ಹಾವಳಿ ಎಷ್ಟು ಎಂದು ? ರೆಸಿಡೆಂಟನನ್ನು ಒಲಿಸಿ ಕೊಂಡರೆ ಆಯಿತು ರಾಜ್ಯದಲ್ಲಿ ಲಾಕ್‌ಲೇಕ್ ಮಾಡಬಹುದು. ರಾಜ್ಯದಲ್ಲಿರುವ ಪ್ರಜೆಗಳ ಪ್ರಾಣಗಳೆಲ್ಲ ಅವರ ಕೈಯಲ್ಲಿ. ದೇಶೀಯ ಸಂಸ್ಥಾನಗಳಲ್ಲಿರುವವರಿಗೆ ಡಬ್ಬಲ್ ಗುಲಾಮಗಿರಿ. ನಮ್ಮ ಮಹಾರಾಜರು ಎಂದಿರಿ. ಅವರು ನಿಜವಾಗಿಯೂ ರಾಜರ್ಷಿಗಳು. ಆದರೂ ಬ್ರಿಟಿಷ್ ಪಿಶಾಚಿಗಳ ದಾಸರಲ್ಲ! ಬಹುಶಃ ಇವರ ಒಳ್ಳೆಯತನದಿಂದ ಅವರ ಕೆಟ್ಟತನ ಸಹ್ಯವಾಗಿ ನಮಗೆ ಅಪರಾಧವಾಗುತ್ತಿದೆಯೇನೋ! ಏನಾದರೂ ಆಗಲಿ. ಅದನ್ನೆಲ್ಲ ಬಿಡೋಣ. ನಾನು ಬರದಿರುವ ಕಾರಣ ಮಲ್ಲಮ್ಮಣಿಯವರಿಗೆ ಗೊತ್ತಿದೆ ಎಂದು ನಾನು ತಿಳಿದಿರಲಿಲ್ಲ. ಆಕೆಯು ತಿಳಿದುದೂ ಒಳ್ಳೆಯದಾಯಿತು. ತಾವು ಆಕೆಯ ಚಿತ್ತವೃತ್ತಿಯನ್ನು ಅರ್ಥಮಾಡಿಕೊಂಡಾಗ ನನಗೆ ಹೇಳಿಕಳುಹಿಸಿ. ಆಕೆ ಹೇಳಿದ್ದಾರೆ. ನಮ್ಮ ಬುದ್ಧಿಯವರಿಗೆ ಅರವತ್ತು ವರ್ಷದ ಶಾಂತಿಯಾಗುವವರೆಗೂ ನಾನು ಗಾಂಧಿಯವರನ್ನು ದೂರದಿಂದ ಪೂಜೆಮಾಡುತ್ತೇನೆ."

"ಇನ್ನೇನು ಶಾಂತಿ ಬಂತು. ಇನ್ನೆರಡು ವರ್ಷ."

"ಆಗಲಿ. ಇನ್ನೆರಡು ವರ್ಷ ಆದ ಮೇಲೆ ನಾನೂ ಬರುತ್ತೇನೆ. ಅದುವರೆಗೆ ನಾನು ದೂರದಲ್ಲಿರುವುದಕ್ಕೆ ಅಪ್ಪಣೆಕೊಡಿ."

"ನಾವು ಹಿಂಗಂತೀವಿ ಅಂದುಕೋಬೇಡಿ. ನೀವು ನಮ್ಮ ಮನೆಗೆ ಸೇರಿದವರು. ನೀವು ಊಟಕ್ಕೇನು ಮಾಡುತ್ತೀರಿ? ಹೆಂಗೆ?"

ಮಲ್ಲಿಯು ಉತ್ತರ ಕೊಟ್ಟಳು: "ಬುದ್ಧಿ ಅವರು ನಮ್ಮ ಮನೆಯವರು ನಿಜ. ಆದರೆ ಅವರ ದೇವರಿಲ್ಲವೆ? ಅವರ ಒಳ್ಳೆಯದು ಕೆಟ್ಟದು ಎಲ್ಲ ಅವನು ನೋಡಿಕೊಳ್ಳುತ್ತಾನೆ. ನಮ್ಮ ಗುರುಗಳನ್ನು

ಕಟ್ಟುವ ರೀತಿ ಅದಲ್ಲ. ಒಂದು ಗಳಿಗೆ ತಡೆಯಿರಿ. ತೋರಿಸುತ್ತೀನಿ."
ಎಂದು ಒಳಗೆ ಹೋಗಿ ಆರುನೂರು ರೂಪಾಯಿ ತಟ್ಟೆಯಲ್ಲಿ ತಂದಳು:
ಮುಂದಿಟ್ಟಳು: ನಮಸ್ಕರಿಸಿದಳು: ಹೇಳಿದಳು: "ಗುರುವೇ, ಇದೋ
ಆರುನೂರು ರೂಪಾಯಿ. ಇನ್ನು ಇಪ್ಪತ್ತು ನಾಲ್ಕು ತಿಂಗಳು ತಾವು
ಯಾರನ್ನೂ ನೋಡುವುದಕ್ಕೆ ಹೋಗಕೂಡದು. ತಮಗೆ ತೋರಿದ
ರೀತಿಯಲ್ಲಿ ದೇಶಸೇವೆ ಮಾಡಿಕೊಂಡಿರಿ. ಇಲ್ಲಿಂದ ಎರಡುವರ್ಷ
ವಾದಮೇಲೆ ನನಗೆ ದರ್ಶನ ಕೊಡಿ. ಆ ವೇಳೆಗೆ ನಮ್ಮ ಬುದ್ಧಿಯ
ವರಿಂದ, ನಮ್ಮ ಪುಟ್ಟಬುದ್ಧಿಯವರಿಂದ, ನಮ್ಮ ದೊಡ್ಡಮ್ಮನವರಿಂದ,
ಕೊನೆಗೆ ನಮ್ಮ ಆನಂದಮ್ಮನವರಿಂದ, ಶಂಭುರಾಮಯ್ಯನವರಿಂದ ಎಲ್ಲ
ರಿಂದಲೂ ಸೋಗಲಕ್ಕಿ ಇಡಿಸಿಕೊಂಡ ಗೌರಮ್ಮನ ಹಂಗೆ ನಿಮ್ಮ ಹಿಂದೆ
ಬಂದು ಬಿಡುತೇನಿ. ನನ್ನ ಕರಕೊಂಡು ಹೋಗಿ ಆ ಮಹಾತ್ಮರಿಗೆ
ಒಪ್ಪಿಸಿ ಬಿಡಿ." ಆಮಾತು ಆಡುವಾಗ ಮಲ್ಲಿಯ ಕೈಮುಗಿದಿತ್ತು: ಕಣ್ಣು
ಮುಗಿದಿತ್ತು. ಹೃದಯದಲ್ಲಿ ತುಂಬಿರುವ ಏನೋ ಭಾವವನ್ನು
ಮುಖವು ಕನ್ನಡಿ ಹಿಡಿದಂತೆ ತೋರಿಸುತ್ತಿತ್ತು.

ನರಸಿಂಹಯ್ಯನು ಬಹು ಸಮಾಧಾನವಾಗಿ ಆಕೆಯ ಮಾತು
ಗಳನ್ನು ಕೇಳಿ ಎಲ್ಲವೂ ಮುಗಿದ ಮೇಲೆ, ಸಣ್ಣಗೆ, ಸಣ್ಣಗೆಂದರೆ
ಸಣ್ಣಗೆ ನಗುತ್ತಾ "ತಾಯಿ, ಆಕಾಶ ನೋಡುವುದಕ್ಕೆ ನೂಕು
ನುಗ್ಗಲೇ ? ಗಾಂಧಿಯವರ ಆಶ್ರಮಕ್ಕೆ ಹೋಗಿ ಶಿಷ್ಯಳಾಗಲು ನಾನು
ಬೇಕೆ ? ಕೆರೆಯ ನೀರಿಗೆ ದೊಣೇ ನಾಯಕನ ಅಪ್ಪಣೆಯೇ ?" ಎಂದು
ಕೇಳಿದನು.

ಮಲ್ಲಿಯು ಅದೇ ನಿಶ್ಚಲ ಭಾವದಿಂದ, ದೃಢವಾಗಿ, ಸ್ಪಷ್ಟವಾಗಿ,
ಏನೂ ಆವೇಶವಿಲ್ಲದೆ, ಸಮಾಧಾನವಾಗಿ ನುಡಿದಳು: "ನನ್ನ ಮೊದಲ
ನೆಯ ಗುರು ತಾವು. ತಮ್ಮ ಅನಂತರ ತಾವು ತೋರಿಸಿದ ಗುರು
ಗಾಂಧಿ. ತಮ್ಮನ್ನು ಆಶ್ರಯಿಸಲು ಇವರೆಲ್ಲ ಒಪ್ಪಬೇಕು. ಅವರನ್ನು
ಆಶ್ರಯಿಸಲು ತಾವು ಬೇಕು."

"ಅದುವರೆಗೂ ?"

"ಅದುವರೆಗೂ ದೇವರು ಅನುಗ್ರಹ ಮಾಡಿ ಕೊಟ್ಟಿರುವ ಈ

ನನ್ನ ಬುದ್ಧಿಯವರ ಪಾದಸೇವೆ."

"ಅದುವರೆಗೂ ನಾನೇನು ಮಾಡಬೇಕು ?"

"ತಾವೇನು ಮಾಡಬೇಕು ಎಂದು ಗೊತ್ತು ಮಾಡುವವಳು ನಾನಲ್ಲ. ತಮಗೆ ಊಟ ಬಟ್ಟೆ ಇವುಗಳ ಚಿಂತೆ ಅಡ್ಡಬರಬಾರದು ಎಂದು ಅವಕ್ಕಾಗಿ ತಮ್ಮ ಮಗಳು, ತಮ್ಮ ಶಿಷ್ಯಳು, ತಮಗೊಪ್ಪಿಸಿದ ಕಾಣಿಕೆ ಇದು. ತಮಗೆ ನನ್ನ ಹತ್ತಿರ ಇರುವ ಹಣವೆಲ್ಲ ಕೊಡಲು ನಾನು ಸಿದ್ಧ. ಆದರೆ ಅದನ್ನು ತಾವು ತೆಗೆದು ಕೊಳುವುದಿಲ್ಲ. ತಮ್ಮ ಹತ್ತಿರ ಇದ್ದ ಹಣವೆಲ್ಲ ತಾವು ದಾನ ಮಾಡಿರುವುದು ನನಗೆ ಗೊತ್ತು. ಅದರಿಂದ ಇದನ್ನು ಒಪ್ಪಿಸಿದ್ದೇನೆ. ತಾವು ಬೇಡವೆಂದರೆ ನನ್ನ ಎದೆಯು ಒಡೆದು ಹೋಗುವುದು. ನಾನು ಹೋದರೆ, ನನ್ನಲ್ಲಿ ಅಭಿಮಾನ ವಿಟ್ಟುಕೊಂಡಿರುವ ಇವರೆಲ್ಲ ಒದ್ದಾಡುವರು. ಅಷ್ಟು ನೋಯಿಸುವುದು ಅಹಿಂಸಾವ್ರತದ ತಮಗೆ ಹಿತವೆ? ಅದರಿಂದ ಒಪ್ಪಿಕೊಳ್ಳಿ. ಹೊಟ್ಟೆ ಬಟ್ಟೆ ಯೋಚನೆಯಿಲ್ಲದೆ ಇರಿ: ಬಾಯಾರಿದವರು ಹೋಗಿ ನೀರು ಕುಡಿದರೆ ಕೆರೆಯು ಬತ್ತುವುದೆ? ಅದಕ್ಕೆ ಲಕ್ಷ್ಯವೇ. ಹಂಗೆ ನಮ್ಮ ಬುದ್ಧಿಯವರಿಗೆ ಇದು ಲಕ್ಷ್ಯವಲ್ಲ – ಅಲ್ಲದೆ, ಅವರ ಅಭಿಮಾನ ದೊಡ್ಡದು. ನನಗೆ ಬೇಕಾದ್ದು ಕೊಟ್ಟಿದ್ದಾರೆ. ಅದರಲ್ಲಿಯೂ ಇದು ಬಲು ಸಣ್ಣ ಪಾಲು. ದಯಮಾಡಿ. ಒಪ್ಪಿಕೊಳ್ಳಿ. ನನ್ನ ಮನಸ್ಸಿನಲ್ಲಿರುವುದು ಫಲವಾಗಲೆಂದು ಹರಸಿ."

"ತಾಯಿ, ನೀವು ಮಕ್ಕಳು ಪಡೆದು ಸುಖವಾಗಿರಬೇಕಾದವರು – ನಿಮಗೇಕೆ ಆ ಗಾಂಧಿಯಾಶ್ರಮದ ಚಿಂತೆ ?"

"ಗುರುದೇವಾ, ಬಾಲ ಶಂಕರನಂತೆ ನೀವು ಹೇಳಿಕೊಟ್ಟಿರಿ. ನೀವು ನಮ್ಮ ದೇಶದ ಪರಮಶತ್ರುಗಳಾದ ಬ್ರಿಟಿಷರನ್ನೂ ಶತ್ರುಗಳೆಂದು ದ್ವೇಷಿಸುವುದಿಲ್ಲ ಎಂಬ ಮಹರ್ಷಿಯರ ಅನುಯಾಯಿಗಳು ತಾವು. ಇನ್ನು ನಮ್ಮ ಮೇಲೆ ಕೋಪಗೊಳ್ಳುವಿರಾ ? ಹೇಳಿಕೊಟ್ಟಿದ್ದನೆಲ್ಲ ಕಲಿತೆ. ಗೀತೆಯನ್ನು ಕಲಿಸಿದಿರಿ. ಎಲ್ಲವನ್ನೂ ಕೃಷ್ಣಾರ್ಪಣವೆಂದು ದೇವರ ದೇವನಿಗೆ ಒಪ್ಪಿಸಿ ನಿಶ್ಚಿಂತೆಯಾಗಿರುವುದೇ ಎಲ್ಲದಕ್ಕಿಂತ ಹೆಚ್ಚು ಎಂದು ಹೇಳಿದಿರಿ. ನೀವು ಅದರಂತೆ ಇರುವಿರಿ. ನಿಮಗಿಂತ ಹೆಚ್ಚಾಗಿ

ಆ ಹಾದಿ ಹಿಡಿದಿರುವವರನ್ನು ತೋರಿಸಿದಿರಿ. ಈ ಮೆಟ್ಟಿಲು ಹಿಡಿದು ಅಲ್ಲಿಗೆ ಹೋಗಲು ಅಪ್ಪಣೆಕೊಡಿ."

ನಾಯಕನು ಹೇಳಿದನು: "ಅಲ್ಲ, ಮಲ್ಲೀ, ಇಲ್ಲೇ ಇರು. ನಿನಗೊಂದು ಆಶ್ರಮಮಾಡಿ ಕೊಡುವಾ! ಕಾವೇರೀ ತೀರದಲ್ಲಿ ಒಂದು ಗಾಂಧೀ ಆಶ್ರಮ ಮಾಡಿಕೊಂಡು ಇರು. ಆಗೋಕಿಲ್ವಾ?"

"ಬುದ್ಧಿ, ಎಲ್ಲರೂ ನಮ್ಮವರು: ಹಿಂಗಂತೀನಿ ಅಂದುಕೋಬೇಡಿ. ತಾವು ಪುಣ್ಯವಂತರು. ತಮ್ಮನ್ನು ಕಂಡರೆ ತಾವು ಸಾಕಿರೊ ದನಗಳು ಕೂಡ ಓಡಿ ಬಂದು ಅಂಬಾ ಎಂದು ತಮ್ಮ ಕೈಕಾಲು ನೆಕ್ಕುತ್ತವೆ. ನಾನು ಅದಕ್ಕಿಂತ ಕಡೆಯಾ? ನಾನು ತಮ್ಮ ಪಾದದಲ್ಲಿರೋ ತನಕ ತಮ್ಮ ಸೂಳೆ ಅದಕ್ಕೇ ಹೊರಟು ಹೋಗಬೇಕು."

ರಾಣಿಯು ಹೇಳಿದಳು: "ಹೋಗಲವ್ವಾ! ನನ್ನ ತಂಗಿಯಾಗಿ ನನ್ನ ಜೊತೇಲಿ ಇದ್ದು ಬಿಡು."

ಮಲ್ಲಿಯು ಓಡಿ ಹೋಗಿ ರಾಣಿಯ ಕಾಲು ಕಟ್ಟಿಕೊಂಡಳು: "ತಿಪ್ಪೇಲಿದ್ದವಳ ತಂದು ತಲೆಗೇರಿಸಿಕೊಂಡ ನನ್ನವ್ವ! ನನ್ನ ಒದ್ದು ಬಿಡಿ. ನನ್ನ ಮರೆತು ಬಿಡಿ. ನಿಮ್ಮರಮನೆಯ ನಂದಾದೀಪವಾಗಿ ಸುಖವಾಗಿ ಇದ್ದು ಬಿಡಿ."

ಆಳು ಬಂದು ಹಕೀಂ ಬಂದಿದ್ದಾನೆ ಎಂದು ಅರಿಕೆ ಮಾಡಿದನು. ನಾಯಕನು ಮಲ್ಲಿಯ ಮಾತಿನ ಬಿಗಿಯಾದರೂ ಸಡಿಲವಾಗಲೆಂದು ಅವನನ್ನು ಬರ ಹೇಳಿದನು: ಅವನು ಬಂದನು. ಅವನ ಮುಖದಲ್ಲಿ ಅಶಾಂತಿ ತಾನೇ ತಾನಾಗಿದೆ.

"ಏನು ಹಕೀಂ?"

"ಖಾವಂದ್" ಮುಂದೆ ಹಕೀಂನ ಮಾತು ಹೊರಡಲಿಲ್ಲ.

ನಾಯಕನು ಅವನನ್ನು ಕೂರಿಸಿ ಎಷ್ಟೋ ಸಮಾಧಾನ ಹೇಳಿದ ಮೇಲೆ, ಹಕೀಂ ಹೇಳಿದ: "ಖಾವಂದ್, ಎಲ್ಲಾ ಹರಾಂ ಆಗಿ ಹೋಯಿತು. ಈ ಹುಡುಗರ ಬುದ್ಧಿ ಕೆಟ್ಟು ಹೋಯಿತು – ನಮ್ಮವರನೆಲ್ಲಾ ಬಿಳೀಜನ ಕೊಂಡುಕೊಂಡು ಬುಟ್ಟವ್ರೆ. ಅದು ಯಾರೋ ಬಂದು ಹೇಳ್ತವ್ರೆ ಹಿಂದೂ ಜನಾನ ಮುಸಲ್ಮಾನ್ ಮಾಡಬೇಕಂತೆ,

ಅವರ ಆಸ್ತಿ, ಹೆಣ್ಣು ಮಕ್ಕಳು, ಎಲ್ಲಾ ಹೊಡಕೊಂಡು ಬರಬೇಕಂತೆ, ಅರೇ ಅಲ್ಲಾ! ಇದುವರೆಗೆ ಭಾಯಿಭಾಯಿ ಆಗಿದ್ದು ಇನ್ನು ಮೇಲೆ ದುಷ್ಮಾನ್ ಆಗೋದಾ? ನನಗೆ ಅದು ಕೇಳಿ ಬಹಳಾ ಕೋಪ ಬಂತು. ಮನೆ ಬಾಗಿಲು ಬಿಟ್ಟು ಹಾಳಾಗಿ ಹೋಗ್ಲಿ ಅಂತ ಹೊರಟು ಬಂದೆ. ನನಗೆ ಅಪ್ಪಣೆ ಕೊಡಿ. ಖಾವಂದ್, ನಾನು ಮಕ್ಕಾ ಮದೀನಾ ಹೊರಟು ಹೋಯ್ತೀನೆ."

"ತಿರುಗಿ ಬರೋಲ್ಲವಾ ಹಕೀಂ?"

"ಯಾಕೆ ಬರಲಿ ಬುದ್ಧಿ, ನನಗೂ ಎಪ್ಪತ್ತು ಎಪ್ಪತ್ತೈದು ವಯಸಾ ಆಯಿತು. ಗಟ್ಟಿಯಾಗಿರೋ ತನಕ ತಮ್ಮ ಗುಲಾಮನಾಗಿ ದುಡಿದೆ. ತಾವು ನನ್ನ ಒಂದು ವಸ್ತಾ ಅಂತ ಮೊಹಬತ್‌ನಿಂದ ಕಾಪಾಡಿದ್ರಿ. ಇನ್ನು ಕೆಟ್ಟ ದಿನ ಬಂದು ಕೆಟ್ಹೋಗ್ತೀರಾಗೋಕಿಂತ ಮುಂಚೆ ಮಕ್ಕಾಮಜೀದ್ ಹೊಂಟೋಯ್ತೀನೆ ಖಾವಂದ್!"

"ಹುಚ್ಚ. ಹೋಗಿ ಹಾಜಿ ಆಗಿಬಾ. ನಮ್ಮ ಪುಟ್ಟಬುದ್ಧಿಗೆ ನಿನ್ನ ಬುಟ್ಟರೆ ಕುದುರೆ ಸವಾರಿ ಕಲಿಸೋರು ಯಾರು? ಎಲ್ರಿ, ಕೊಡ್ರಿ, ಪುಟ್ಟಬುದ್ಧೀನ ಅವನ ಕೈಗೆ!"

"ಅರೇ ಅಲ್ಲಾ? ಹೊಟ್ಟೇಲಿ ಹುಟ್ಟಿದ ಮಗನ್ನ ಬುಟ್ಟು ಬಂದೆ. ಖಾವಂದ್, ಈ ಪುಟ್ಟಬುದ್ಧಿ ಬುಡಲಾರೆನಲ್ಲ. ಕ್ಯಾಕರೂಂ?"

"ನೀನು ಹೋಗಿ ಬಾ. ಹಾಜ್ ಮಾಡಿಕೊಂಡು ಬಂದರೆ ನಿನಗೂ ಅಲ್ಲಾನ ಸಾಲ ತೀರಲಿ. ಇರೋತನಕ ನಮ್ಮ ಜೊತೇಲಿ ಇದ್ದು ಬುಡು."

"ಹಂಗೂ ಆಗಲಿ, ಖಾವಂದ್, ತಮ್ಮ ಉಪ್ಪು ತಿಂದಿದೀನಿ. ತಮ್ಮ ಜಮೀನ್‌ನಲ್ಲೆ ಮಲಗಿ ಬುಡುತೀನಿ."

ನಾಯಕನ ಹೃದಯ ತನ್ನ ಪಾಡಿಗೆ ತಾನು ಹೇಳಿಕೊಂಡಿತು: 'ಮಲ್ಲಿಯೂ ಇವನಂದ ಹಾಗೆ ಅಂದು ಬಿಟ್ಟರೆ! ಎಲ್ಲಿ ಬಂತು; ಅದು ಸಾಧ್ಯವಿಲ್ಲ: ಹಕೀಂ ನನ್ನ ಗುಲಾಮ. ನಾನು ಮಲ್ಲಿಯ ಗುಲಾಮ. ನಾನು ಹೇಳಿದ ಹಂಗೆ ಹಕೀಂ ಕೇಳುತ್ತಾನೆ: ಅದರಿಂದಲೇ ಅವಳು ಹೇಳಿದ ಹಂಗೆ ನಾನು ಕೇಳಬೇಕು.'

ನಾಯಕನು ಮಲ್ಲಿಯನ್ನು ಒಂದು ಕ್ಷಣ ಬಿಟ್ಟಿರಲಾರ. ಅವನಿಗೆ ಈಗ ಲೋಕದಲ್ಲಿ ಯಾರೂ ಬೇಡ. ಮಲ್ಲಿಯು ಒಂದು ತೂಕ: ಲೋಕವೆಲ್ಲ ಇನ್ನೊಂದು ತೂಕ. ಊಟದಲ್ಲಿ ಮಲ್ಲಿಯ ಜೊತೆ: ಕುಳಿತಿದ್ದರೆ ಮಲ್ಲಿಯೊಡನೆ. ಓದಿದರೆ ಅವಳ ಮಗ್ಗುಲಲ್ಲಿ. ಬೆಳಗಿಂದ ಬೆಳಗಿನವರೆಗೂ ಎಲ್ಲೋ ಒಂದೆರಡು ಗಂಟೆ ಆಗಾಗ ಅವಳನ್ನು ಬಿಟ್ಟಿದ್ದರೆ ಅದೇ ಹೆಚ್ಚು.

ಮಲ್ಲಿ ಆ ಮಗುವನ್ನು ಒಂದು ಗಳಿಗೆ ಬಿಟ್ಟಿರುವುದಿಲ್ಲ; ರಾಣಿಯು ಯಾವಾಗಲಾದರೂ ಮಗುವಿನ ಕಡೆ ನೋಡಿದರೆ, "ತೆಂಗಿನ ಸೊಸಿ ಬೆಳೆಸಿದಂಗೆ ಬೆಳೆಸಿಕೊಡ್ತೀನಿ ಬುದ್ಧಿ" ಎನ್ನುತ್ತಾಳೆ. ತಾನು ಚಿಕ್ಕ ತಾಯಿಯ ಹಾಗೆ ಅವನ್ನ ನೋಡುತ್ತಿಲ್ಲ. ಅವನಿಗಾಗಿ ಗೊತ್ತಾಗಿರುವ ದಾದಿಯಂತೆ ಆ ಮಗುವಿಗೆ ಉಪಚಾರವಮಾಡುತ್ತಾಳೆ. ರಾತ್ರಿಯಲ್ಲಿ ಅವನು ಎದ್ದರೆ, ರಾಣಿಗೆ ಎಚ್ಚರವಾಗುವುದಕ್ಕಿಂತ ಮುಂಚೆ ಅವಳಿಗೆ ಎಚ್ಚರವಾಗುತ್ತದೆ. ಆ ಮಗುವಿಗೆ ಸ್ನಾನ, ಉಡುಪು, ಊಟ, ನಿದ್ದೆ, ಎಲ್ಲದಕ್ಕೂ ಅವನ ಭಾಗ್ಯದೇವತೆಗಿಂತ ಹೆಚ್ಚಾಗಿ ಗಮನ ಕೊಟ್ಟು ಕಾಪಾಡುತ್ತಿದ್ದಾಳೆ.

ಒಂದು ದಿನ ಆನಂದಮ್ಮನು ಬಂದು ಕುಳಿತಿದ್ದಾಳೆ. ಮಲ್ಲಿಯು ಮಗುವನ್ನು ಎತ್ತಿಕೊಂಡು ಬಂದಳು. ಆನಂದಮ್ಮನು ಕರೆದಳು: ಮಗು ಬರಲಿಲ್ಲ. ಮಲ್ಲಿಯು ನಗುನಗುತ್ತಾ "ನಮ್ಮ ಪುಟ್ಟಬುದ್ಧಿ ಶುದ್ಧ ಕಳ್ಳ, ಅಮ್ಮಾ! ದೊಡ್ಡಮ್ಮನೋರು ಕರೆದರೂ ಹೋಗೋದಿಲ್ಲ." ಎಂದು, ಮಗುವನ್ನು ಕೆಳಗೆ ಇಳಿಸಿ "ಪುಟ್ಟಬುದ್ಧೀನ ನೋಡಿಕೊಳ್ಳಿ ಬುದ್ಧಿ, ನಾನು ಹೋಗುತ್ತೇನೆ" ಎಂದು ಹೋಗಿ ಮರದ ತೆರೆಯ ಮರೆಯಲ್ಲಿ ನಿಂತುಕೊಂಡಳು.

ಪುಟ್ಟಬುದ್ಧಿಯು ಅತ್ತಕಡೆ ಇತ್ತಕಡೆ ನೋಡಿ ಮಲ್ಲಿಯು ಕಣ್ಣಿಗೆ ಬೀಳದಿರಲು ಅಳುವುದಕ್ಕೆ ಆರಂಭಿಸಿತು. ಅದನ್ನು ಕೇಳಿ ರಾಣಿಯು

ಎಲ್ಲಿದ್ದಳೋ ಓಡಿ ಬಂದಳು. ಮರೆಯಲ್ಲಿದ್ದ ಮಲ್ಲಿಯನ್ನು ಕಾಣದೆ, ತಾನೇ ಹೋಗಿ ಎತ್ತಿಕೊಳ್ಳುವುದಕ್ಕೆ ಕೈನೀಡಿದಳು. ಮಗುವು ಬರಲಿಲ್ಲ. "ನೋಡಿದಿರಾ ತಾಯಿ, ಈ ಮಲ್ಲೀ ಮಾಟಾನಾ! ನಾನು ಹೆತ್ತವಳು. ನಮ್ಮ ಪುಟ್ಟಬುದ್ಧೀಗೆ ನಾನು ಬೇಡ. ಅವಳು ಬೇಕು. ಅವಳು ಪಾಪ! ಎಲ್ಲಿ ಹೋಗಿದ್ದಾಳೋ! ಅವಳು ಅತ್ತ ಇತ್ತ ಹೋಗಕೂಡದು. ಈ ಕಳ್ಳನ ಮುಂದೆಯೇ ಕೂತಿರಬೇಕೇನೋ?" ಎಂದು ಸಣ್ಣಗೆ ಮೂತಿ ಹಾಗೆಂದಳು.

ಮಗು ಇನ್ನೂ ಬಲವಾಗಿ ಅತ್ತಿತು.

ಕೂಡಲೇ ಮರೆಯಿಂದ ಮಲ್ಲಿಯು ಓಡಿಬಂದಳು: ಎತ್ತಿಕೊಂಡಳು. ಮಗುವು ಸುಮ್ಮನಾಯಿತು.

ರಾಣಿಯು "ಓಹೋ! ತಾಯಿ ಮಕ್ಕಳ ಕಣ್ಣುಮುಚ್ಚಾಲೆಯೋ ಇದು? ನಾನು ಅರೀದೇ ಮಾಡುತ್ತಿದ್ದ ಕೆಲಸ ಬಿಟ್ಟು ಬಂದೆ." ಎಂದು ಹೊರಟಳು.

ಆನಂದಮ್ಮನು ನಕ್ಕಳು.

ಮಲ್ಲಿಯು "ಯಾಕೆ ಗೊತ್ತಾ ಅಮ್ಮ! ನನ್ನ ಹೊಟ್ಟೇಲಿ ಹುಟ್ಟಿತ್ತಲ್ಲಾ ಅದೇ ನಮ್ಮ ದೊಡ್ಡಬುದ್ಧಿಯೋರ ಹೊಟ್ಟೇಲಿ ಗಂಡಾಗಿ ಹುಟ್ಟಿದೆ. ಅದಕ್ಕೇ ನನ್ನ ಮೇಲೆ ಇಷ್ಟು ಅಭಿಮಾನ! ಲೋ ಪುಟ್ಟಿ ಬುದ್ಧಿ, ನಿಂಗೆ ಬುದ್ಧಿಯಿಲ್ಲ. ಇನ್ನೊಂದು ವರ್ಷ, ನಾನು ನಿಮ್ಮನ್ನೆಲ್ಲ ಬಿಟ್ಟು ಓಡಿ ಹೋಗೋಳು ಕಣಪ್ಪ. ಅತ್ತತಿರುಗಿಕೋ" ಎಂದು ಅದನ್ನು ಮುದ್ದಿಸಿದಳು.

ರಾಣಿಯು "ನೋಡಿ ತಾಯಿ, ನೋಡಿ. ಆ ಮಗೂನ ಕೈಲೂ ಇದೇ ಮಾತಾ? ಛೇ, ಬುಡ್ತು ಅನ್ನು" ಎಂದು ಹುಸಿಕೋಪದಿಂದ ಗದರಿಕೊಂಡಳು.

"ಸದಾಶಿವನಿಗೆ ಅದೇ ಜ್ಞಾನ ಬುದ್ಧಿ. ನದಿ ಕಟ್ಟೆದಾಟದಿದ್ದರೆ ಸಮುದ್ರ ಸೇರೀತಾ? ಅದಕ್ಕೇ ತಮ್ಮ ಅಭಿಮಾನದ ಕಟ್ಟೆದಾಟಿ ನಾನು ಹೊರಡುತೀನಿ" ಎಂದು ಮಲ್ಲಿಯು ಅನ್ಯಮನಸ್ಕಳಾಗಿ ನುಡಿದಳು.

ಆನಂದಮ್ಮನಿಗೆ ಬಾಯಿ ಕೊನೆಯವರೆಗೂ ಬಂತು: "ಮಲ್ಲೀ

ನೀನು ನನ್ನ ಮಗಳು. ಇದುವರೆಗೆ ನಾನು ನಿನಗೆ ಹೇಳಿರಲಿಲ್ಲ. ನಾನು ನಿನ್ನನ್ನು ಬೇಡವೆಂದು ಒತ್ತರಿಸಿದೆ. ದೈವ ಮತ್ತೆ ನಿನ್ನನ್ನು ಕೊಟ್ಟಿದೆ. ನನಗೆ ಕೊನೆಗಾಲ, ಕೊನೆಗಾಲದಲ್ಲಿ ನನ್ನ ಬಾಯಿಗೆ ಅಪ್ಪುನೀರು ಬಿಟ್ಟುಹೋಗುವೆಯಂತೆ. ಇರು" ಎನ್ನಬೇಕು ಎನ್ನಿಸಿತು.

ಎದೆ ದಡದಡ ಎಂದಿತು. ಕಣ್ಣಿನಲ್ಲಿ ನೀರು ತುಂಬಿತು: ಅವಳ ಬಾಯಲ್ಲಿ ಆ ಮಾತು ಬರಲಿಲ್ಲ. ಅವಳು ನುಂಗಿದ ಬಾಯಿನೀರಿ ನೊಡನೆ ಆ ಮಾತು ಹೊಟ್ಟೆಯೊಳಕ್ಕೆ ಹೊರಟು ಹೋಯಿತು.

ಅದೆಲ್ಲ ಶಂಭುರಾಮಯ್ಯನಿಗೂ ತಿಳಿಯಿತು. ಅವನೂ ನಗು ನಗುತ್ತ ತನಗೆ ಬೇಕಾದುದನ್ನು ತಪ್ಪದೆ, ಎಳ್ಳಷ್ಟೂ ಲೋಪವಿಲ್ಲದೆ ಸಾಧಿಸುವ ಮಲ್ಲಿಯ ವಿಚಕ್ಷಣತೆಯನ್ನು ಬಲ್ಲನಾಗಿ ಅವನು ಏನೂ ಹೇಳಲಿಲ್ಲ.

## ೪೯

ನಾಯಕನು ಮಹಾರಾಜರನ್ನು ನೋಡುವುದಕ್ಕೆಂದು ಮೈಸೂರಿಗೆ ಹೋಗಿದ್ದಾನೆ. ಮಜ್ಜಿಗೆ ಹಳ್ಳಿಯ ಅರಮನೆಯಲ್ಲಿ ಗದ್ದಲವೋ ಗದ್ದಲ. ಆ ರಾತ್ರಿ ಮಲ್ಲಿಯೂ ಮಂಚದ ಮೇಲೆ ಮಲಗಬೇಕು ಎಂದು ರಾಣಿಯ ಆಸೆ. ಬುದ್ಧಿಯವರಿಲ್ಲದೆ ತಾನು ಮಂಚದ ಮೇಲೆ ಮಲಗು ವುದಿಲ್ಲವೆಂದು ಅವಳ ಹಟ.

"ಹಾಗಾದರೆ ಎಲ್ಲಿ ಮಲಗುತ್ತೀಯೇ?"

"ಇಲ್ಲೇ ಒಂದು ಚಾಪೆಯ ಮೇಲೆ!"

"ಕೂಡದು. ನಾನೂ ನಿನ್ನ ಜೊತೆಗೇ ಬರುತ್ತೇನೆ."

"ಉಂಟಾ ಬುದ್ಧಿ, ತಮ್ಮ ಮೈ ಒತ್ತುತ್ತದೆ. ಕೂಡದು."

"ನಿನಗೆ ಒತ್ತೋಕಿಲ್ಲವಾ?"

"ಬಾಳೇಹಣ್ಣಿನ ಗುಡಾಣದಲ್ಲಿ ಬೆಳೆದದ್ದು ಅಲ್ವಾ!"

"ಅಲ್ಲಾ, ಮಲ್ಲನ್ಮ್ಮಣಿ, ನೀನು ಹಿಂಗನ್ನೋದು ನ್ಯಾಯವಾ? ಜೊತೆ ಜೊತೆ ಎತ್ತುಗಳ ಹಂಗಲ್ಲವಾ ನಾವು. ನಿನಗೆ ಬೇಡವಾದ್ದು ನನಗೆ ಬೇಕಾದೀತಾ? ಬುಡು."

"ಬುದ್ಧಿ, ತಾವು ಹಂಗನ್ನಬಾರದು. ತಾವು ಮಹಾಲಕ್ಷ್ಮಿ ಹಂಗೆ ದೊಡ್ಡ ಮನೆಯಲ್ಲಿ ಹುಟ್ಟಿ ಅರಮನೆ ಸೇರಿದವರು. ತಮ್ಮ ಮನಸ್ಸಿಗೆ ನೋವಾಗೋ ಹಂಗಿದ್ದರೆ, ಆಗಲಿ. ತಮ್ಮ ಪಾದದಲ್ಲಿ ಉರುಟು ಕೋತೀನಿ. ಆದರೂ ಬುದ್ಧಿ, ಅಭ್ಯಾಸ ಆಗಲಿ, ಬಿಡಬಾರದಾ?"

ಅವಳ ಪ್ರಾರ್ಥನೆಯಲ್ಲಿ ಏನೋ ಗುರುತಿಸುವುದಕ್ಕೂ ಕಷ್ಟವಾದ ಭಾವವಿತ್ತು. ರಾಣಿಯು ಅದನ್ನು ಸಹಿಸಲಾರದೆ ಅವಳನ್ನು ಬಿಟ್ಟು ಎರಡು ಹೆಜ್ಜೆ ಹೋಗಿದ್ದವಳು ಹಿಂದಿರುಗಿ ಬಂದು ಮಾತೇ ಆಡದೆ ಅವಳ ನಡುವಿಗೆ ಕೈಹಾಕಿ ಕರೆದುಕೊಂಡು ಹೋಗಿ ಹಾಸುಗೆಯ ಮೇಲೆ ಮಲಗಿಸಿ ಕೊಂಡಳು.

## ೫೦

ನಾಯಕನು ಏನೋ ಭಯದಿಂದ ಕಳವಳಿಸುತ್ತಿದ್ದಾನೆ. ಅವನಿಗೆ ಎಲ್ಲಿ ನೋಡಿದರೂ ಮುಸಿಮುಸಿ ನಗುತ್ತಾ 'ಅಪ್ಪಣೆಕೊಡಿ ಬುದ್ಧಿ' ಎಂದು ಕೈಮುಗಿದುಕೊಳ್ಳುತ್ತಾ ನಿಂತಿರುವ ಹೆಣ್ಣಿನರೂಪ ಕಾಣುತ್ತಿದೆ. ಅವನು ಬೇರೆ ಯೋಚನೆ ಮಾಡಬೇಕೆಂದು ಎಷ್ಟೋ ಪ್ರಯತ್ನ ಮಾಡುತ್ತಾನೆ. ಸಾಧ್ಯವಿಲ್ಲ. ಅದೇ ಚಿಂತೆ. ಅದೇ ಯೋಚನೆ. ಅದೇ ಭ್ರಾಂತಿ. ಅದೇ ಕಳವಳ.

"ಏನು ಮಾಡಿದರೆ ಮಲ್ಲಿಯನ್ನು ನಿಲ್ಲಿಸಿಕೊಳ್ಳಬಹುದು?" ಎಂದು ಒಂದೇ ಸಮನಾಗಿ ಒಂದೇ ಚಿಂತೆ.

ಆ ಚಿಂತೆಯಲ್ಲಿ ನರಸಿಂಹಯ್ಯನನ್ನು ನೋಡಲು ಅವರ ಮನೆಗೆ ಹೋಗಿದ್ದನು. ಈ ಹತ್ತು ಹದಿನೈದು ವರ್ಷಗಳಲ್ಲಿ ನಾಯಕನು ಅವನ

ಮನೆಗೆ ಹೋಗಿರಲಿಲ್ಲ. ಅವರ ತಾಯಿಯೇ ಬಂದು, ಬಾಗಿಲಮರೆಯಲ್ಲಿ ನಿಂತು, "ಅವನು ಇನ್ನೂ ಊರಿಗೆ ಬಂದಿಲ್ಲ. ಭಾನುವಾರ, ಸೋಮವಾರ ಬರಬಹುದು. ಏನು ಹೇಳಬೇಕೋ ಅಪ್ಪಣೆಯಾದರೆ ಹೇಳುತೀನಿ" ಎಂದರು.

ನಾಯಕನು ತನ್ನ ಅಸಮಾಧಾನವೆಲ್ಲ ನುಂಗಿಕೊಂಡು, "ಏನಿಲ್ಲ ತಾಯಿ, ನಾನು ಬಂದಿದ್ದೆ ಅನ್ನಿ. ಆದರೆ ನಮ್ಮ ಊರಿಗೆ ಬರಹೇಳಿ" ಎಂದು ಹೊರಟು ಬಂದನು.

ದಾರಿಯುದ್ದಕ್ಕೂ ಅದೇ ಯೋಚನೆ. ದಾರಿಗಿರಲೆಂದು ತಂದಿದ್ದ ಮಾದಕದ್ರವ್ಯದ ಶೀಷೆ ಎದುರಿಗೇ ಇದೆ. ಅದೂ ಬೇಡ ಅವನಿಗೆ.

ಅರಮನೆಗೆ ಬಂದವನೇ ಮಲ್ಲಿಯನ್ನು ಹುಡುಕಿಕೊಂಡು ಹೋದನು. ಪುಟ್ಟಬುದ್ಧಿ ತೊಟ್ಟಿಲಲ್ಲಿ ಸುಖವಾಗಿ ಮಲಗಿದ್ದಾನೆ. ರಾಣಿ ಮಂಚದಮೇಲೆ ಮಲಗಿದ್ದಾಳೆ. ಎಲ್ಲಿ ನೋಡಿದರೂ ಮಲ್ಲಿಯಿಲ್ಲ.

"ಯಾರಮ್ಮೀ ಅಲ್ಲಿ?" ನಾಯಕನು ಕೂಗಿದನು.

"ಬುದ್ಧಿ" ಒಂದು ಹೆಣ್ಣುದನಿ ಬಂತು.

"ಚಿಕ್ಕಮ್ಮನೋರು ಎಲ್ಲಿ ?"

"ಹಿಂದೆ ಕರೋಟೇಲಿ ಹುಲ್ಲಿನ ಮದೇಲಿ ಅವ್ರೆ!"

ನಾಯಕನಿಗೆ ಏನೋ ಕಸಿವಿಸಿಯಾಯಿತು: ಕರುಳು ಹಿಡಿದು ಹಿಸುಕಿದಂತಾಯಿತು. ಹುಡುಕಿಕೊಂಡು ಹೊರಟನು.

ಅಲ್ಲೊಂದು ಕಡ್ಡಿಯನ್ನು ಕಚ್ಚಿಕೊಳ್ಳುತ್ತಾ ಮಲ್ಲಿ ಏನೋ ಗೊಣಗಿಕೊಳ್ಳುತ್ತಾ ಕುಳಿತಿದ್ದಾಳೆ. ನಾಯಕನು ಅವಳ ಕಣ್ಣಿಗೆ ಬೀಳದೆ ಬಳಸಿಕೊಂಡು ಹೋಗಿ ಅವಳು ಏನು ಗೊಣಗುತ್ತಿರುವಳೆಂದು ಕೇಳಿದನು. ಅದೊಂದು ತತ್ವ.

ಹಂಸನೀ ಪರಮಾತ್ಮನೆಂದು ಭಾವನೆಮಾಡು
ಸಂಸಾರಿ ನೀನಲ್ಲ ಹಂಸ ||
ಸಂಶಯ ಮೊದಲಾದ ಅಜ್ಞಾನ ಕಾರ್ಯವ
ಧ್ವಂಸವ ಮಾಡೆಲೇ ಹಂಸ ||

ಶಂಕರಾಭರಣದಲ್ಲಿ ಸಣ್ಣಗೆ ತನ್ನ ಕಿವಿಗೆ ಮಾತ್ರ ಕೇಳಿಸುವಷ್ಟು ಸಣ್ಣಗೆ ಹಾಡಿಕೊಳ್ಳುತ್ತಾ ಅನ್ಯಮನಸ್ಕಳಾಗಿ ಕುಳಿತಿರುವ ಅವಳನ್ನು ಮಾತನಾಡಿಸಲಾರದೆ ನಾಯಕನೂ ಅಲ್ಲಿಯೇ ಹಾಗೆಯೇ ಆ ಮೆದೆಯನ್ನು ಒರಗಿಕೊಂಡು ನಿಂತನು.

ಸುಮಾರು ನಾಲ್ಕು ನಾಲ್ಕೂವರೆ ಗಂಟೆಯಾಗಿದೆ. ಸಂಜೆಯು ಸಮೀಪಿಸುತ್ತಿದೆ. ಸೂರ್‍ಯನ ಚಂಡಕಿರಣಗಳ ತೀಕ್ಷ್ಣತೆಯೆಲ್ಲ ಅಡಗಿ, ಬಿಸಿಲು ಹಿತವಾಗುತ್ತಿದೆ. ಅಲ್ಲೊಂದು ಇಲ್ಲೊಂದು ದನವು ಹಿಂತಿರುಗಿ ಬರುತ್ತಿರುವುದನ್ನು ಗಂಟೆಯ ಸದ್ದು ಸೂಚಿಸುತ್ತಿದೆ. ಆ ಸದ್ದು ಕೇಳಿ ಎಲ್ಲಿಂದಲೋ ಅಂಬಾ ಎಂದು ಸಣ್ಣ ಕರುಗಳು ಕೂಗುತ್ತಿವೆ. ಅದನ್ನು ಕೇಳಿ ನಾಯಕನು 'ಇವಳ ತೀವ್ರ ಸಂಕಲ್ಪವೂ ಹೀಗೆಯೇ ಶಾಂತವಾಗ ಬಾರದೇ ? ಇವಳೂ ಮನೆಗೆ ಬರುತ್ತಿರುವ ಈ ದನದಹಾಗೆ ನನ್ನ ಬಳಿಗೆ ಹಿಂತಿರುಗಬಾರದೆ ? ಈ ಕರುವಿನ ಹಾಗೆ ನನ್ನ ಕರೆಯನ್ನು ಕೇಳಿ ಮರುದನಿ ಕೊಡಬಾರದೆ ?' ಎಂದು ಯೋಚಿಸಿಕೊಂಡು ತಲೆಯೆತ್ತಿ ನೋಡುತ್ತಾನೆ.

ಆಕಾಶದಲ್ಲಿ ಮೋಡಗಳು ಮೆಲ್ಲಗೆ ಜಾರುತ್ತಿವೆ. ಹಿಡಿದು ತಡೆದು ನಿಲ್ಲಿಸುವವರಿಲ್ಲವೆಂಬಂತೆ ಓಡಿಹೋಗುತ್ತಿವೆ. ಹೊರಟುಹೋಗುತ್ತಿವೆ. ನಾಯಕನಿಗೆ ದಿಗಿಲಾಯಿತು. 'ಮಲ್ಲಿಯೂ ಹೀಗೆಯೇ ಅರಮನೆಯನ್ನು ಬಿಟ್ಟು ಓಡಿಹೋಗುವಳೋ ? ತಡೆಯುವವರಿಲ್ಲದೆ ಹಿಡಿಯುವವರಿಲ್ಲದೆ ಹೊರಟೇಹೋಗುವಳೋ ?' ಅವನ ಎದೆಯು ಬಡಿದುಕೊಂಡಿತು. ಆ ಬಡಿದುಕೊಂಡ ಸದ್ದೇ ಏನಾದರೂ ಕೇಳಿಸಿತೋ ? ಅಥವಾ ಸಂಜೆಯ ಬಿಸಿಲಿನಲ್ಲಿ ನೆರಳು ಕಾಣಿಸಿ ಬಗ್ಗಿ ನೋಡಿದಳೋ ಅಂತೂ ಮಲ್ಲಿಯು ನಾಯಕನನ್ನು ಕಂಡಳು. ಬಗ್ಗಿ ನೋಡಿದಳು. "ಅವ್ವಯ್ಯಾ ! ಬುದ್ಧಿಯೋರು ?" ಎಂದು ಥಟ್ಟನೆದ್ದು ಓಡಿ ಬಂದಳು.

"ನ್ಯಾಯುವಾ ನನ್ನೊಡೆಯ, ನನ್ನ ಹಿಂಗೆ ಚಂಡಿಸಬಹುದಾ ? ಕೂಗಬೇಡವಾ ?" ಎಂದು ವಿನಯದಿಂದ ಕೇಳಿದಳು.

"ನಿನ್ನ ಹುಡುಕಿಕೊಂಡು ಬಂದೆ ಮಲ್ಲಿ. ನೀಯೇನೋ ಹಾಡಿ

ಕೊಂತ ಕುಂತಿದ್ದೆ. ಅದಕ್ಕೆ ನಾನೂ ಹಂಗೇ ಕೇಳುತ್ತಾ ನಿಂತು ಕೊಂಡೆ."

"ಕಾಣೋಲ್ಲ. [illegible]ಮಾಡಿಕೊಳ್ಳಬೇಡಿ ಬುದ್ಧಿ. ತಾವು ಬಂದು ನಿಂತುಕೊಂಡು ಎಷ್ಟು ಹೊತ್ತಾಯಿತು ?"

ನಾಯಕನಿಗೆ ಇಷ್ಟು ವಿನಯವಾಗಿರುವವಳು, ವಿಶ್ವಾಸವಾಗಿರುವವಳು ತನ್ನನ್ನು ಬಿಟ್ಟುಹೋಗುವಳೇ ಎನ್ನಿಸಿತು. ಆ ಭಾವದಲ್ಲಿ ಅವಳ ಮಾತಿಗೆ ಉತ್ತರ ಕೊಡದೆ, ಏನೋ ಯೋಚನೆಯಲ್ಲಿ, ಎತ್ತಲೋ ಮನಸ್ಸಿರುವಾಗ "ಆಯಿತು. ಹೊರಟುಹೋಗುತೀನಿ ಅಂತೀಯಲ್ಲ ನಿನ್ನ ಹಣ ಏನು ಮಾಡೋದು" ಎಂದು ಕೇಳಿದನು.

"ನನ್ನೊಡೆಯಾ ! ನನ್ನ ಹಣವೆಲ್ಲ ಇರೋದು ಇಲ್ಲಿ, ಈ ಪಾದದಿಂದ ಬಂತು : ಈ ಪಾದಕ್ಕೆ ಕೊಟ್ಟು ಬುಟ್ಟಿದ್ದೀನಿ. ಇನ್ನು ನಂದೆಲ್ಲಿ ?"

"ಉಂಟಾ ಮಲ್ಲಿ ? ನಿನಗೆ ಕೊಟ್ಟಿರೋದೆಲ್ಲ ನಿನ್ನ ಹಣ. ಅದು ಹೆಣ್ಣಿನಹಣ, ಅದು ನಾನು ತಕೊಳ್ಳಲಾ ? ನಿನಗೆ ಬೇಡ ಅಂದರೆ ಕಾವೇರಮ್ಮನ ಮಡೂಗೆ ಸುರಿದುಹೋಗು. ನನಗೆ ಬೇಡ. ಹಂಗಿಲ್ಲ ಅಂದ್ರೆ ಏನು ಮಾಡಬೇಕು ಹೇಳು."

"ಗುರುಗಳನ್ನು ಕೇಳಿ : ಅವರು ಹೇಳಿದಂಗೆ ಮಾಡಿ."

"ಹೋಗಿದ್ದೆ. ಅವರು ಊರಲ್ಲಿಲ್ಲ."

"ಹಂಗಾದ್ರೆ....ಬುದ್ಧಿ....ಹೇಳ್ಲಾ ?"

"ಹೇಳು ಮಲ್ಲಿ."

"ಕುಂತುಕೊಳ್ಳಿ. ನೋಡಿ. ನಮ್ಮೋರಿಗೆ ಓದೋಕೆ ಒಂದು ಕಾಲೇಜು ಕಟ್ಟಿಸಿ ಬುಡಿ. ಕಾವೇರಮ್ಮನ ಮಡೂಗೆ ಸುರಿದು ಹೋಗು ಅಂದಿರಿ. ಕಾವೇರಮ್ಮನ ಮಗ್ಗುಲಲ್ಲಿ ಒಂದು ಕಾಲೇಜು ಕಟ್ಟಿ."

"ಹಂಗಾದರೆ ಒಂದು ಮಾತು ?"

"ಏನು ?"

"ನೀನು ಹೇಳಿದಂಗೆ ಸೊಗಸಾದ ಕಾಲೇಜು, ಮ..
ಕಾಲೇಜಿನಂತಾ ಕಾಲೇಜು ಕಟ್ಟಿಸುತ್ತೀನಿ. ನೀನು ಇದ್ದು ಬಿಡು.

"ನನ್ನೊಡೆಯಾ, ನಾನು ಹೋಗುವುದು ನಿಜ. [illegible] ಅಪ್ಪಣೆಯಾಯಿತು. ಆ ಕಾಲೇಜು ಆಗೋತಂಕ ಇರುತ್ತೀನಿ ಆಯಿತಾ ?"

"ನರಸಿಂಹಯ್ಯನೋರು ಭಾನುವಾರ ಸೋಮವಾರ ಬರುತ್ತಾರಂತೆ. ಅವರ್ನ ಕೇಳಿ ಎಲ್ಲಾ ಮಾಡೋಣ."

"ಆಗಲಿ ಬುದ್ಧಿ."



ಅಪ್ಪನ ಸಂಪ್ರದಾಯಪ್ರಿಯತೆ, ವೈಜ್ಞಾನಿಕ ಮನೋಭಾವ–ಸಂಪ್ರದಾಯ ಪರಂಪರೆಗಳ ನಡುವಿನ ಘರ್ಷಣೆಯ ಚಿತ್ರಣವನ್ನು ಅ. ನ. ಕೃ. ಅವರು ಸುಂದರವಾಗಿ ಯಶಸ್ವಿಯಾಗಿ ಸಾಧಿಸಿದ್ದಾರೆ.

## ೨. ಮಲ್ಲಿ

ದೇವುಡು ವಿರಚಿತ ಕಾದಂಬರಿ. ಸುಮಾರು ೧೯೦೦ ರಿಂದ ೧೯೫೦ರ ವರೆಗಿನ ಅರ್ಧ ಶತಮಾನದ ಜನಜೀವನದ ಹಿನ್ನೆಲೆಯಲ್ಲಿ ಹೇಳಲ್ಪಟ್ಟಿರುವ ಸುಂದರ ಶೃಂಗಾರ ರಸಪೂರ್ಣ ಕಾದಂಬರಿ.

## ೩. ವಿಮೋಚನೆ

‘ನಿರಂಜನ’ರ ವಿಚಾರ ಪೂರಿತ ಕಾದಂಬರಿ. ಜೀವನದಲ್ಲಿ ಸನ್ಮಾರ್ಗದಲ್ಲಿ ಪರಿಪೂರ್ಣತೆಯನ್ನು ಸಾಧಿಸುವುದರಲ್ಲಿ ವಿಫಲನಾಗಿ ಅಡ್ಡದಾರಿ ಹಿಡಿದ ವಿದ್ಯಾವಂತ ಯುವಕನೋರ್ವನ ದುರಂತ ಕಥೆ.

## ೪. ಪರದೇಶಿ

ಕುಲಕರ್ಣಿ ಬಿಂದುಮಾಧವರು ಬರೆದುದು. ಹಿಂದೂಸ್ತಾನದ ಮೂಲನಿವಾಸಿ ಜನಾಂಗವೊಂದರ ಜೀವನ ಕ್ರಮದ ಹಿನ್ನೆಲೆಯಲ್ಲಿ ಚಿತ್ರಿಸಲ್ಪಟ್ಟಿರುವ ಕರುಣಾಜನಕ ಕಥಾನಕ.

## ಸ್ವರ್ಣರೇಖೆ

ವೀರಕೇಸರಿ ಸೀತಾರಾಮ ಶಾಸ್ತ್ರಿಗಳು ಬರೆದ ಐತಿಹಾಸಿಕ ಕಾದಂಬರಿ. “ಬಂಗಾರ ದೊಡ್ಡಿ” ಎಂದು ಮೈಸೂರಿನ ಮನೆ ಮಾತಾಗಿರುವ ಪ್ರೇಯಸಿಯ ಪ್ರಣಯ ಕಥೆ.

